ರಾಷ್ಟ್ರೀಯ ಜೀವನಚರಿತ್ರ ಮಾಲೆ

# ಡಾ॥ ಡಿ.ವಿ. ಗುಂಡಪ್ಪ

## ಜೀವನ ಮತ್ತು ಸಾಧನೆ

ನೀಲತ್ತಹಳ್ಳಿ ಕಸ್ತೂರಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ವಿಷಯ ಸೂಚಿ

# ಬಿನ್ನಹ

ಹೊಸಗನ್ನಡ ಆಚಾರ್ಯಪುರುಷರಲ್ಲಿ ಒಬ್ಬರಾದ ಡಿವಿಜಿ ಅವರ ಜೀವನ ಚರಿತ್ರೆಯನ್ನು ನಾನು ಬರೆಯಬೇಕಾಗಿ ಬಂದುದು ಒಂದು ಯೋಗಾಯೋಗ. ಸಾಹಿತ್ಯದ ಮೂಲಕ ಡಿವಿಜಿ ನನಗೆ ಬಹುಕಾಲದಿಂದ ಹತ್ತಿರದವರೂ ಆದರಣೀಯರೂ ಆಗಿದ್ದರು. ಆದರೆ ಅವರ ಜೀವನ ಸಾಧನೆಗಳ ತೀರ ನಿಕಟ ಪರಿಚಯ ಒದಗಿದ್ದು ಇತ್ತೀಚೆಗೆ ಮಾತ್ರ. ಅವರು ದಿವಂಗತರಾದ ನಂತರವೇ. ಮೂರು ವರ್ಷದ ಹಿಂದೆ ಬೆಂಗಳೂರಿನ ಭಾರತೀಯ ವಿದ್ಯಾಭವನದ ಸಾಹಿತ್ಯ ಉಪನ್ಯಾಸ ಮಾಲಿಕೆಯಲ್ಲಿ ಡಿವಿಜಿ ಕುರಿತು ಮಾತನಾಡಲು ನನ್ನನ್ನು ಡಾ।। ಹೆಚ್.ಕೆ. ರಂಗನಾಥ್ ಅವರು ನೇಮಿಸಿದರು. ಅಂಜಿಕೆ, ಅಳುಕುಗಳಿಂದಲೇ ನಾನು ಆ ಕೆಲಸ ಮಾಡಿದೆ. ''ಪತ್ರಿಕಾ ವ್ಯವಸಾಯಕ್ಕೆ ತೊಡಗಿದಾಗ ನನಗೆ ಇದ್ದ ಬಂಡವಾಳ ಎರಡೇ–ಕುರುಡು ಶ್ರದ್ಧೆ ಮತ್ತು ಅಜ್ಞಾನದ ಬಲ'' ಎಂದಿದ್ದಾರೆ ಡಿವಿಜಿ. ಅವರ ಬಗೆಗೆ ಹೇಳಲು ನನಗೆ ಇದ್ದ–ಇರುವ–ಸಾಮರ್ಥ್ಯ ಎಂದರೆ ಕೇವಲ ಗೌರವ, ಆಸಕ್ತಿ, ಆದರ. ಅಂದಿನ ಆ ಭಾಷಣದ ಕೆಲಸ ನನ್ನನ್ನು ಡಿವಿಜಿಯವರ ಬಳಿಗೆ ಕರೆದೊಯ್ದಿತು. ಅದೇ ಈ ಕೃತಿಗೂ ಹೇತುವಾಯಿತು. ಈ ಎರಡು–ಮೂರು ವರ್ಷವೂ ಆ ಧೀಮಂತ ವ್ಯಕ್ತಿಯ ಜೀವಿತ, ಸಾಧನೆ, ಸಾಹಿತ್ಯಗಳ ಪರಿಚಯ ಅಭ್ಯಾಸಗಳು ನಡೆಯುತ್ತ ಬಂದಿವೆ. ಹೊಸ ಅನುಭವವನ್ನು ನೀಡುತ್ತಿವೆ.

ನ್ಯಾಷನಲ್ ಬುಕ್ ಟ್ರಸ್ಟ್ ನಮ್ಮ ನಾಡಿನ ಹಿರಿಯ ಪ್ರಕಟನ ಸಂಸ್ಥೆ, ರಾಷ್ಟ್ರ ಮಟ್ಟದ್ದು. ಡಿವಿಜಿ ಅವರೂ ಶಿಖರಪ್ರಾಯ ವ್ಯಕ್ತಿ. ಅಂಥವರ ಬಗೆಗೆ ಅಂಥ ಉನ್ನತ ಸಂಸ್ಥೆಗಾಗಿ ಕೃತಿ ರಚಿಸುವುದು ವಿಶೇಷವೇ. ಇದರಲ್ಲಿ ನನಗೆ ಇರುವ ಅರ್ಹತೆಯ ಪರಿಮಿತಿಯನ್ನು ನಾನು ಬಲ್ಲೆ. ಅಷ್ಟರಲ್ಲೇ ನಾನು ಯಥಾಶಕ್ತಿ ಯಥಾಮತಿ ಕೆಲಸ ಮಾಡಿದ್ದೇನೆ.

ಈ ಕೆಲಸದಲ್ಲಿ ನನಗೆ ನೆರವು, ಸಲಹೆ, ಸೂಚನೆ ಹಲವು ಕಡೆಗಳಿಂದ ಒದಗಿಬಂದಿವೆ. ಪ್ರಧಾನವಾಗಿ ಭಾರತೀಯ ವಿದ್ಯಾಭವನ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಮಾನ್ಯರಾದ ನಿಟ್ಟೂರು ಶ್ರೀನಿವಾಸರಾವ್, ಡಿ.ಆರ್. ವೆಂಕಟರಮಣನ್, ಟಿ.ಎನ್. ಪದ್ಮನಾಭನ್, ವಿ.ಎಸ್. ನಾರಾಯಣರಾವ್, ಎಂ.ವಿ. ಸೀತಾರಾಮಯ್ಯ, ಡಿ.ವಿ. ರಾಮರಾವ್, ಎಚ್.ವೈ. ಶಾರದಾಪ್ರಸಾದ್, ಡಾ।। ಹೆಚ್.ಕೆ. ರಂಗನಾಥ್,

ಜಿ. ನಾರಾಯಣ, ಪು.ತಿ. ನರಸಿಂಹಾಚಾರ್, ಸ. ವೆಂಕಟಾಚಲಪತಿ ಮೊದಲಾದ ಹಿರಿಯರುಗಳಿಂದ ತುಂಬ ನೆರವು, ಮಾರ್ಗದರ್ಶನ, ಪ್ರೋತ್ಸಾಹ ಪಡೆದಿದ್ದೇನೆ. ಶ್ರೀ ವೆಂಕಟರಮಣನ್ ಅವರಂತೂ ಡಿವಿಜಿಯವರ ಆಪ್ತ ಶಿಷ್ಯರು, ಅಂತರಂಗವನ್ನು ಅರಿತವರು. ಅವರು ನನಗೆ ನೀಡಿದ ನೆರವು ಬೆಲೆಗೆ ಮೀರಿದ್ದು. ಡಿವಿಜಿಯವರ ಸಾಹಿತ್ಯ ರಾಶಿಯನ್ನೆಲ್ಲ ನನಗೆ ಒದಗಿಸಿದರು. ನನ್ನ ಬರಹವನ್ನು ಪರಿಶೀಲಿಸಿಕೊಟ್ಟರು. ಒಂದು ರೀತಿಯಲ್ಲಿ ಈ ಕೃತಿ ಹೀಗೆ ಹಲವರಿಂದ ಆದ ಕೆಲಸ ಎನ್ನಬೇಕು. ನಾನು ನಿಮಿತ್ತ ಮಾತ್ರ.

ಈ ಕೃತಿ ಡಿವಿಜಿಯವರ ಪೂರ್ಣಪ್ರಮಾಣದ ಜೀವನಚರಿತ್ರೆಯಾಗಲಿ, ಅವರ ಅಪಾರ ಸಾಹಿತ್ಯದ ವಿಮರ್ಶೆ, ಬೆಲೆ ಕಟ್ಟುವಿಕೆ ಆಗಲಿ, ಅವರ ತತ್ವದರ್ಶನದ ಸಮಗ್ರ ಪ್ರತಿಪಾದನೆ ಆಗಲಿ ಅಲ್ಲ ಎನ್ನುವುದು ನನಗೆ ಗೊತ್ತು. ಪರಿಚಯಾತ್ಮಕ ನಿರೂಪಣೆ ಇಲ್ಲಿನ ಉದ್ದೇಶ. ಇದೇ ಈ ಗ್ರಂಥಮಾಲೆಯ ಉದ್ದೇಶವೂ ಎಂದು ನನ್ನ ಭಾವನೆ. ಇದು ಡಿವಿಜಿಯವರ ಬಗ್ಗೆ ಓದುಗರಲ್ಲಿ ಹೆಚ್ಚಿನ ಕುತೂಹಲವನ್ನು, ಆಸಕ್ತಿಯನ್ನು ಮೊಳೆಯಿಸಿದರೆ ಕೃತಕೃತ್ಯವಾಗುತ್ತದೆ.

1987–ಇದು ಡಿವಿಜಿಯವರ ಜನ್ಮಶತಾಬ್ದಿಯ ಸಂದರ್ಭ. ಎರಡು ವರ್ಷಗಳ ಹಿಂದೆಯೆ ರಚಿತವಾಯಿತಾದರೂ, ಈಗ ಈ ಸುಸಂದರ್ಭದಲ್ಲಿ ಇದು ಪ್ರಕಟಗೊಳ್ಳುವ ಸುಯೋಗ ಒದಗಿದೆ. ಪ್ರಭಾ ಮುದ್ರಣಾಲಯದ ಹಿರಿಯರು ಶ್ರೀ ಕೃಷ್ಣಾಚಾರ್ಯರಂತೂ ಬರಿಯ ಮುದ್ರಕರಲ್ಲ, ಮಾರ್ಗದರ್ಶಕರೂ ಆಗಿದ್ದಾರೆ ನನಗೆ. ಅವರ ಅನುಭವ ಜ್ಞಾನ ಆತ್ಮೀಯತೆ ನಿಷ್ಠೆಗಳ ಪರಿಚಯವೂ ನನಗೆ ಒದಗಿಬಂದಿದೆ. ಡಿವಿಜಿ ಬಗೆಗಿನ ಅವರ ಆದರ ಗೌರವಗಳು ಈ ಮುದ್ರಣ ಕಾರ್ಯವನ್ನು ಚಂದಗೊಳಿಸಿವೆ. ಅವರಿಗೆ ನನ್ನ ನಮನ ಸಲ್ಲುತ್ತವೆ.

ಈ ಶತಾಬ್ದಿಯ ಐತಿಹಾಸಿಕ ಸಂದರ್ಭದಲ್ಲಿ ನನ್ನಿಂದ ಈ ನುಡಿಸೇವೆಯನ್ನು ಆಗಮಾಡಿಸಿದ ಎಲ್ಲ ವ್ಯಕ್ತಿ–ಶಕ್ತಿಗಳಿಗೂ ನಾನು ವಂದಿಸುತ್ತೇನೆ. ಇದಕ್ಕೆ ಸಹೃದಯರ ಲಾಲನೆ ದೊರೆತೀತು ಎಂದು ಆಶಿಸುತ್ತೇನೆ.

1987, ಆಗಸ್ಟ್
ಬೆಂಗಳೂರು

— ನೀಲತ್ತಹಳ್ಳಿ ಕಸ್ತೂರಿ

# ಪ್ರವೇಶ

ವನಸುಮದೊಲೆನ್ನ ಜೀವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ, ಹೇ ದೇವ ॥
ಜನಕೆ ಸಂತಸವೀವ ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್‌ಬಿಡದೆ ॥

ಈ ಪದ್ಯ ಪ್ರಕಟವಾದದ್ದು 1924ರಲ್ಲಿ. ಈ ಅರವತ್ತು ವರ್ಷಗಳಲ್ಲಿ ಇದು ಕನ್ನಡ ಬಲ್ಲವರಲ್ಲಿ ಬಹುತೇಕ ಮಂದಿಯ ನಾಲಿಗೆಯಲ್ಲಿ ನಲಿದಿದೆ. ಮನಕ್ಕೆ ವಿಚಾರದ ಬೆಳಕನ್ನೂ, ಹೃದಯಕ್ಕೆ ಭಾವದ ನಲವನ್ನೂ ನೀಡಿದೆ. ಅಕ್ಷರ ಅರಿತ ಬಹುಪಾಲು ಕನ್ನಡ ಜನ ಇದನ್ನು ಕೇಳಿದ್ದಾರೆ, ಓದಿದ್ದಾರೆ, ಹಾಡಿದ್ದಾರೆ.

ಇಂದ್ರಿಯಂಗಳ ಜಯಿಸಿ ಚಿತ್ತಶುದ್ಧಿಯ ಬಯಸಿ
ಲೋಭಮಂ ತ್ಯಜಿಸಿ ರೋಷವ ವರ್ಜಿಸಿ
..........................................................
..........................................................
ದೈವ ಸಂಪನ್ಮಾರ್ಗದರ್ಶಕಂ ಗಾಂಧಿಯಲ್ತೆ ।

ಕನ್ನಡದಲ್ಲಿ ಬಂದಿರುವ ಗಾಂಧೀಸಾಹಿತ್ಯವನ್ನು ಅಷ್ಟಿಷ್ಟು ನೋಡಿದವರಿಗೆಲ್ಲಾ ಈ ಸೀಸಪದ್ಯ ಚಿರಪರಿಚಿತ. ಗಾಂಧೀಜಿಯವರ ಜೀವನದರ್ಶನವೆಲ್ಲ ಈ ಪದ್ಯದ ಹದಿನಾಲ್ಕು ಸಾಲುಗಳಲ್ಲಿ ಒಡಮೂಡಿದೆ.

ಮೀನೊಂದು ವಾರಿಧಿಯೊಳಾನಂದದಿಂದಿರುತ
ತಾನೊಂದು ದಿನಮೆಂದಿತಚ್ಚರಿಯೊಳು ।
ನಾನಂಬುಧಿಯ ವರ್ತಮಾನವನು ಕೇಳಿರ್ಪೆ
ನಾ ನೀರರಾಶಿಯನು ಕಾಣ್ಬುದೆಂತು ?

ಜಿಜ್ಞಾಸುಗಳಾದ ಕನ್ನಡ ಜನದ ಎದುರಿಗೆ ಈ ಪ್ರಶ್ನೆ ಇದ್ದೇ ಇರುತ್ತದೆ.

ಕಾವೇರಿ ನದಿಯ ರಭಸವನ್ನು, ಓಟವನ್ನು ಕಂಡಾಗ ಕೆಳಗಿನ ಸಾಲುಗಳು ನೆನಪಿಗೆ ಬರುವುದು ತೀರ ಸಹಜ.

ಗಿರಿಯ ಕೆಲದಿ ಬನದ ನಡುವೆ ಝುರಿಯ ತೆರದಿ ಸುಳಿದು ಬರುತೆ
ತಲದ ಶಿಲೆಯನಿರಿದುಕೊರೆದು ಕೆಲದ ನೆಲವನರೆದು ಮುರಿದು
ವಿಮಲಜಲದ ವಿಪುಲಧಾರೆಯಮೃತ ಲಹರಿಯಂತೆ ತೋರೆ
ದಣಿವ ಕಳೆಯುವೆಲರ ಬೀರಿ ಮೃದುಲ ರವದಿ ಮುಂದೆ ಸಾರಿ
ಅತ್ತಲತ್ತ ಸುಳಿದು ಸುತ್ತಿ ಇತ್ತಲಿತ್ತ ಮೆಲ್ಲನೊತ್ತಿ
ಅಲ್ಲಿ ಬಳುಕುತಿಲ್ಲಿ ಬಾಗಿ ಅಲ್ಲಿ ಬಳಸುತಿಲ್ಲಿಸಾಗಿ
ನೊರೆಯ ಸೇಸೆಗಳನು ಸೂಸಿ ತೆರೆಯ ಚವರಗಳನೆ ಬೀಸಿ
ಬಾಲೆಯಂತೆ ನಲಿದು ಕುಣಿದು ಕಾಳಿಯಂತೆ ಕನಲಿ ಮೊರೆದು ।

ಆಕಾಶವನ್ನು ನೋಡಿ, ಮನಸೋತು, ಅದರ ಹಿಂದಿನ ರಹಸ್ಯವನ್ನು ಕುರಿತು ಚಿಂತಿಸುವವರ ಮನಸ್ಸಿನಲ್ಲಿ ಈ ಸಾಲುಗಳ ತೆರೆ ಏಳದಿರುವುದುಂಟೆ–

ಮೇಲೆ ನೋಡೆ ಕಣ್ಣಾತಣಿಪ, ನೀಲಪಟದಿ ವಿವಿಧರೂಪ
ಜಾಲಗಳನು ಬಣ್ಣಿಸಿರ್ಪ ಚಿತ್ರ ಚತುರನಾರ್ ।
ಕಾಲದಿಂದೆ ಮಾಸದಾ ವಿಚಿತ್ರವೆಸೆಪನಾರ್ ।

ಕೌತುಕದ ಈ ಸಾಲುಗಳು ಸಾಮಾನ್ಯರಿಗೂ ಅರ್ಥವಾಗುತ್ತವೆ. ಅಂತೆಯೆ ಈ ಪದ್ಯ ಕನ್ನಡಿಗರಿಗೆ ಚಿರಪರಿಚಿತ. ಆದರೆ ಕೆಳಗಿನ ಪದ್ಯವನ್ನು ಓದುವಾಗ ಉಸಿರು ಬಲವಾಗಿರಬೇಕು.

ಶ್ರೀರಾಮಾಂಘ್ರಿಸರೋಜಸಂಸ್ಪರುಶದಿಂದೊಂದಾದುದೀ ಭಾರತಂ ।
ಕಾರುಣ್ಯಾಪಗೆಯಿಂದಶೋಕಜನಪಂ ಕೆತ್ತಿದ್ದ ನೂರ್ಕಾಲ್ವೆಯಿಂ ।।
ಆರುಂದಾರಿಯುಮ್ ಒಂದೆದ್ವೈವದೆಡೆಗೆಂದಾಚಾರ್ಯನಾಯಾತ್ರೆಯಿಂ ।
ಓರಂತಿರ್ದುದು ನೈಜಸತ್ವದಿನೆ ಗಾಯಂ ಮಾಯಲೊಂದಾಗದೇ ।।

ಇಂಥ ನಾರಿಕೇಳಪಾಕ ವೃತ್ತಗಳನ್ನು ಅರ್ಥೈಸುವುದು ವಿದ್ವಾಂಸರಿಗೆ ಒಂದು ಸವಾಲು.

ಸಾವಿರ ಸಾವಿರ ಜನರ ಜೇಬಿನಲ್ಲೊ, ತಲೆದೆಸೆಯ ದಿಂಬಿನ ಪಕ್ಕದಲ್ಲೊ, ಕೈಚೀಲದೊಳಗೊ, ಪುಸ್ತಕದ ಬೀರುವಿನೊಳಗೊ ಕಡ್ಡಾಯವಾಗಿ ಇದ್ದು, ಕೈಗೆಟುಕುವಂತೆ ಇದ್ದು, ಪುಟತೆರೆದಾಗಲೆಲ್ಲ ತಿಳಿವಿನ ಗುಟುಕು ಕೊಡುವ, ಬೆಳಕಿನ ಹಾದಿತೋರುವ, ಬದುಕಿಗೆ ಬೆಂಗಾವಲು ನೀಡುವ 'ಮಂಕುತಿಮ್ಮನ ಕಗ್ಗ' ವನ್ನು ಯಾರು ಕೇಳಿಲ್ಲ?

ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ
ಕುದುರೆ ನೀನ್ ಅವನು ಪೇಳ್ದಂತೆ ಪಯಣಿಗರು
ಮದುವೆಗೋ ಮಸಣಕೋ ಹೋಗೆಂದಕಡೆಗೋಡು
ಪದಕುಸಿಯೆ ನೆಲವಿಹುದು–ಮಂಕುತಿಮ್ಮ

ನಲವತ್ತು ವರ್ಷಗಳಿಂದ ನಮಗೆಲ್ಲ ಹೀಗೆ 'ಭಯಬೇಡ', 'ಅಂಜದಿರಿ' ಎನ್ನುತ್ತಿದೆ ಕಗ್ಗ.

ಬೇಲೂರಿಗೆ ಹೋಗುತ್ತೇವೆ. ಚೆನ್ನಕೇಶವನ ಅಂತಃಪುರದಲ್ಲಿ ಸೇವೆ ಸಲ್ಲಿಸಲು ಸಜ್ಜಾಗಿ ವಿವಿಧ ಭಂಗಿಗಳಲ್ಲಿ ನಿಂತಿರುವ ಮದನಿಕಾ ವಿಗ್ರಹಗಳನ್ನು ನೋಡುತ್ತೇವೆ. ಆಗ ಅಂತಃಪುರ ಗೀತೆಯ ಹಾಡುಗಳಾಗಲಿ, "ಬೇಲೂರಿನ ಶಿಲಾ ಬಾಲಿಕೆಯರು" ಪದ್ಯದ ಸಾಲುಗಳಾಗಲಿ ನೆನಪಿಗೆ ಬಾರದಿರದೇ ?

ಕೃತಿಕಾರ ಯಾರು, ಎಷ್ಟೋ ವೇಳೆ ತಿಳಿಯದೆ ಇರಬಹುದು. ಕೃತಿ ಸಹೃದಯನ ಹೃದಯದಲ್ಲಿ ನೆಲೆಗೊಂಡಿರಬಹುದು.

ಬೆಂಗಳೂರಿನ ಬಸವನಗುಡಿಯ ದೊಡ್ಡ ಆಂಜನೇಯ ಗಣಪತಿ ಬಸವಣ್ಣನ ಗುಡಿಗಳು ಸುಪ್ರಸಿದ್ಧ. ಶ್ರದ್ಧಾಳುಗಳಿಗೆ ವಿಹಾರಪ್ರಿಯರಿಗೆ ನೆಲದಾಣ. ವಿಚಾರ ವಂತರಿಗೆ ಅಲ್ಲೆ ಪಕ್ಕದಲ್ಲೆ ಅಂಥದೆ ತಾಣ ಒಂದು ಉಂಟು. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ. ಒಳ್ಳೆಯ ಪ್ರಜೆ ಆಗಲು ಮಾನಸಿಕ, ಬೌದ್ಧಿಕ, ಸಾಂಸ್ಕೃತಿಕ ಸಿದ್ಧತೆ ಏನು ಬೇಕೊ ಅದನ್ನು ನೀಡಲು ಯತ್ನಿಸುತ್ತಿರುವ ಸಂಸ್ಥೆ. ದೇಶವಿದೇಶಗಳಲ್ಲಿ ಪ್ರಖ್ಯಾತ!

ಈ ಸಾಹಿತ್ಯಕೃತಿಗಳನ್ನು ಕೇಳಿದಾಗ, ಈ ಸಂಸ್ಥೆಯನ್ನು ನೋಡಿದಾಗ, ಇವುಗಳ ಕರ್ತೃ ಯಾರು ಎಂದು ನಮ್ಮ ಕುತೂಹಲ ಕೆರಳುತ್ತದೆ. "ವಸ್ತುಚಯುವನಿಂತು ರಚಿಪ ಶಿಲ್ಪಿವರ್ಯನಾರ್ ?" ಎಂಬ ಪ್ರಶ್ನೆ ನಮ್ಮಲ್ಲಿ ಏಳುತ್ತದೆ. ಬಲ್ಲ ಜನಕ್ಕೆ ಕೃತಿಕಾರನ ಬಗ್ಗೆ ಗೌರವ. ಉಳಿದವರಿಗೆ ಬೆರಗು. "ಯಾರಿದರ ಕರ್ತೃ ? ಯಾರದೀ ಕೃತಿ?"

ಇಂಥ ಗೌರವವನ್ನು, ಇಂಥ ಬೆರಗನ್ನು ಉಂಟುಮಾಡುವ ವ್ಯಕ್ತಿ ಡಿ.ವಿ.ಜಿ. ಈ ಎಪ್ಪತ್ತು ವರ್ಷಗಳ ಕನ್ನಡ ಸಾರಸ್ವತ ಹಾಗೂ ಸಾರ್ವಜನಿಕ ಸೇವಾ ಕ್ಷೇತ್ರಗಳಲ್ಲಿ ಧೀಮಂತರಾಗಿ ನಿಂತಿರುವ ಡಿ.ವಿ. ಗುಂಡಪ್ಪನವರು !

ಈ ಶತಮಾನದ ಆದಿಯಲ್ಲಿ ಕನ್ನಡದಲ್ಲಿ ಏನು ನವೋದಯ ಮೂಡಿತು, ನವಚೇತನ ಆಡಿತು, ನವಶಕ್ತಿ ಹರಿಯಿತು, ಅದಕ್ಕೆ ಕಾರಣಪುರುಷರಾದವರು ಹಲವು ಮಹಿಮರು. ಅದು ಹಿಮಾಲಯದ ಶಿಖರ ಶ್ರೇಣಿ. ಆ ಪೈಕಿ ಮೈಸೂರು ಪ್ರದೇಶದಲ್ಲಿ ಮೂವರು ಎದ್ದುಕಾಣುತ್ತಾರೆ. ಆಚಾರ್ಯ ಎನಿಸಿಕೊಂಡ ಬಿ.ಎಂ. ಶ್ರೀಕಂಠಯ್ಯ, ಆಸ್ತಿ ಎನಿಸಿಕೊಂಡ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಇಬ್ಬರು. ಮೂರನೆಯವರು ಅಂಥ ನಿರ್ದಿಷ್ಟ ವಿಶೇಷಣ ಇಲ್ಲದ ಆದರೆ ಎಲ್ಲ ವಿಶೇಷಣಗಳ ಮೊತ್ತವೇ ಆದ ಡಿ.ವಿ. ಗುಂಡಪ್ಪನವರು !

ಕನ್ನಡ ಚೇತನ ಸೊರಗಿದ್ದಾಗ, ಅದರಲ್ಲಿ ಪ್ರಾಣ ಸಂಚಾರಗೊಳಿಸಿದವರು ಬಿ.ಎಂ.ಶ್ರೀ. ತಮ್ಮ ಹೊಸಗನ್ನಡ ಕವಿತೆಯ ಮೂಲಕ, ನಿಂತನೀರಿಗೆ ಚಾಲನೆಯನ್ನು ಒದಗಿಸಿದರು. ನಾಡಲ್ಲೆಲ್ಲ ಓಡಾಡಿ ಕನ್ನಡದ ಪುನರುತ್ಥಾನದ ಸಂದೇಶವನ್ನು ಬೀರಿದರು. ಉಸಿರು ಕಟ್ಟಿದಾಗ ತಿಳಿಗಾಳಿ ಬೀಸಿ ತಂಪು ಕಂಪು ಇಂಪುಗಳನ್ನು ಸೂಸಿತು. ಕನ್ನಡಿಗರ ಕಣಕಣದಲ್ಲೂ ಜೀವ ಸಂಚರಿಸಿತು. ನವೋತ್ಸಾಹ ಉಂಟಾಯಿತು. ಬಿ.ಎಂ.ಶ್ರೀ. ಕನ್ನಡದ ಪ್ರಾಣವಾಯು.

ಮಾಸ್ತಿಯವರು ತಿಳಿಗೊಳದಂತೆ. ಅಲ್ಲ, ತಿಳಿನೀರಿನ ಹೊನಲುಂತೆ. ಅದು ನಿಂತ ನೀರಲ್ಲ, ಹರಿವ ಜಲ. ಅಲ್ಲಿ ಕಡಲಿನ ಅಬ್ಬರ ಇಲ್ಲ, ಬಿರುಗಾಳಿಯ ಬಿರುಸು ಇಲ್ಲ, ಪರ್ವತದ ಗಭೀರತೆ ಇಲ್ಲ. ಜೀವನಕ್ಕೆ ಅತಿ ಅಗತ್ಯವಾದ ಜೀವರಸ ಇದೆ. ತಿಳಿನೀರೇ ಜೀವನ. ಅವರ ಕತೆ, ಕವಿತೆ, ಕಾದಂಬರಿ, ನಾಟಕ, ವಿಮರ್ಶೆ, ಪ್ರಬಂಧ, ಭಾಷಣ, ಚಿಂತನ ಎಲ್ಲವೂ ತಿಳಿನೀರಿನ ಬುಗ್ಗೆಗಳೇ.

ಡಿವಿಜಿಯವರನ್ನು ಬೆಟ್ಟದ ಶಿಖರಕ್ಕೆ ಹೋಲಿಸುವುದು ನನಗೆ ಇಷ್ಟ.

ಗಭೀರತೆ ಗಂಭೀರತೆ ಉದಾರತೆ ಉದಾತ್ತತೆ ಔನ್ನತ್ಯ ಹಾಗೆಯೆ ಸೌಂದರ್ಯ ಇವುಗಳ ನೆಲೆ ಪರ್ವತ. ಸಾಹಸಿಗಳಿಗೆ ಅದು ಸವಾಲು, ಪಂಥಾಹ್ವಾನ. ಆರೋಹಿಗಳಿಗೆ ಎತ್ತರದ ನಿಲುಮೆಯನ್ನೂ ತತ್ಪರಿಣಾಮವಾಗಿ ದೃಷ್ಟಿವೈಶಾಲ್ಯವನ್ನೂ, ನಲ್ಮೆಯನ್ನೂ ನೀಡುತ್ತದೆ. ಬೆಟ್ಟ ಏರುವುದು ಕಷ್ಟ, ಕಲ್ಲುಮುಳ್ಳಿನ ಹಾದಿ, ಮೆಟ್ಟಿಲು ಎತ್ತರ. ತೊಡೆ ನಡುಗೀತು. ಬೆವರು ಹರಿದೀತು. ಆದರೆ ಆ ಶ್ರಮ ವ್ಯರ್ಥವೇನೂ ಅಲ್ಲ. ಅಲ್ಲಲ್ಲಿ ನಿಂತು ನಿಂತು, ಉಸಿರು ತೆಗೆದುಕೊಂಡು, ಮೇಲೆ ಮೇಲೆ ಏರಿ ಏರಿದಂತೆಲ್ಲ, ನಮಗೆ ಸಿಗುವ ಆನಂದ ಹೆಚ್ಚುತ್ತ ಹೋಗುತ್ತದೆ. ಬೆಟ್ಟ ಉನ್ನತ. ಶಿಖರದ ಮೇಲೆ ಪ್ರಖರ ಪ್ರಭೆ. ಮೈಮೇಲೆ ನಿತ್ಯಹಸಿರಿನ ಸಿರಿ. ಒಡಲಲ್ಲಿ ಜೀವರಕ್ಷಕ ಜೀವತಾರಕ ಮೂಲಿಕೆಗಳು, ಧಾತುವಿಶೇಷಗಳು. ಕಣ್ಮನ ತಣಿಸುವ ಹೂಗಳ ಸೊಬಗು. ತೀಡುವ ತಂಗಾಳಿ. ಅಲ್ಲಲ್ಲಿ ತಿಳಿಜಲದ ತೊರೆಗಳು. ಸಣ್ಣದೊ ದೊಡ್ಡದೊ ಜಲಪಾತಗಳು. ಶಿವನ ಮುಡಿಯಿಂದ ಗಂಗೆ ಇಳಿವತೆರ !

ಗಾಳಿ ಇಲ್ಲದೆ ಜೀವ ಇಲ್ಲ. ನೀರು ಇಲ್ಲದೆ ಜೀವನ ಇಲ್ಲ. ಬೆಟ್ಟ ಇಲ್ಲದೆ ಬದುಕು ಇಲ್ಲ.

ವಿಚಾರದ ಹರವಿನಿಂದ ಬೆರಗು, ಪಾಂಡಿತ್ಯದ ಆಳದಿಂದ ಭಯ, ರಸಿಕತೆ ಇಂದ ನಲವು, ಜೀವನೋತ್ಸಾಹದಿಂದ ಗೆಲುವು, ಸರಸಸಲ್ಲಾಪದಿಂದ ಒಲವು,

ಸಾರ್ವಜನಿಕ ಸೇವಾನಿಷ್ಠೆಯಿಂದ ಶ್ರದ್ಧಾಗೌರವ–ಡಿವಿಜಿಯವರ ಬದುಕು ಹಾಗೂ ಕೆಲಸ ಬಗೆಬಗೆಯಾಗಿ ನಮ್ಮ ಎದುರಿಗೆ ಕಾಣಿಸಿಕೊಳ್ಳುತ್ತದೆ.

"ಹಿಮಾಲಯೋ ನಾಮ ನಗಾಧಿರಾಜಃ, ದೇವತಾತ್ಮಾ''–ಕಾಲಿದಾಸನ ಮಾತು ನೆನಪಿಗೆ ಬರುತ್ತದೆ.

ವಿನೋಬಾ ಭಾವೆ ಎಳೆತನದಲ್ಲಿ ತಪಸ್ಸಿನ ಹಂಬಲದಿಂದ ಹಿಮಾಲಯಕ್ಕೆ ಹೊರಟರಂತೆ. ನಡುದಾರಿಯಲ್ಲಿ ಗಾಂಧೀಜಿಯನ್ನು ಕಂಡರು. ದಿಕ್ಕು ಬದಲಾಯಿತು, "ಈ ಮಾನವ ಹಿಮಾಲಯವನ್ನು ಕಂಡ ಮೇಲೆ ಹಿಮಾಲಯ ಪರ್ವತಕ್ಕೆ ಹೋಗುವ ಬಯಕೆ ಹಿಂದಾಯಿತು'' ಎಂದುಕೊಂಡರು. ಗಾಂಧೀ ಪರಿವಾರ ಸೇರಿದರು. ಸಹಯಾತ್ರಿಕ ಆದರು.

ಡಿ.ವಿ. ಗುಂಡಪ್ಪ ಬೆಟ್ಟದಂಥ ಜೀವ !

# 2. ಹಿನ್ನೆಲೆ

ಡಿವಿಜಿಯವರದು ಸಾಧಾರಣ ಮನೆತನ. ಅವರ ಹಿಂದಿನ ಹಲವು ತಲೆ ಮಾರುಗಳಲ್ಲಿ ಪ್ರತಿಭೆಯಾಗಲಿ, ಪಾಂಡಿತ್ಯವಾಗಲಿ ಎದ್ದು ಕಾಣಿಸುವಂಥದೇನೂ ಇರಲಿಲ್ಲ. ಯಾರೊ ಒಬ್ಬಾತ ವೆಂಕಟಶರ್ಮ ಎಂಬವರು ಗುಮ್ಮಲಾಪುರ ಎಂಬಲ್ಲಿ ಇದ್ದರಂತೆ. ರುದ್ರಭಟ್ಟನ 'ಜಗನ್ನಾಥ ವಿಜಯ'ಕ್ಕೆ ವ್ಯಾಖ್ಯಾನ ಬರೆದಿದ್ದ ರಂತೆ. ಇದು ಕವಿಚರಿತ್ರಕಾರ ರಾ. ನರಸಿಂಹಾಚಾರ್ಯರ ಅಂಬೋಣ. ಹಾಗೆಂದು ಡಿವಿಜಿಯೆ ಒಂದೆಡೆ ಹೇಳಿಕೊಂಡಿದ್ದಾರೆ. ಆ ವಂಶದಲ್ಲಿದ್ದ ಪಾಂಡಿತ್ಯಕ್ಕೆ ನಿದರ್ಶನ ಇಷ್ಟೆ. ಉಳಿದಂತೆ ಸಾಮಾನ್ಯ. ಹೊಟ್ಟೆ ಹೊರೆದುಕೊಳ್ಳಲು ಬ್ರಾಹ್ಮಣಿಕೆಯೊ, ಪೌರೋಹಿತ್ಯವೊ, ಬೇಸಾಯವೊ, ಸಣ್ಣಪುಟ್ಟ ಕೆಲಸಗಳೊ, ವಕೀಲಿಯೊ, ಮೇಷ್ಟ್ರ ಗಿರಿಯೊ ಏನೊ ಒಂದು ಅಷ್ಟೆ. ಹಬ್ಬ-ಹುಣ್ಣಿಮೆಗೆ ಬೇಕಾದಷ್ಟು ಶಾಸ್ತ್ರಜ್ಞಾನ ಹಾಡು ಹಸೆ. ಬದುಕನ್ನು ನಿಭಾಯಿಸಲು ತಕ್ಕಷ್ಟು ವ್ಯವಹಾರ ಕೌಶಲ, ಕಾರ್ಯ ಸಾಮರ್ಥ್ಯ.

ಈ ಮನೆತನದ ಜನ ಮೂಲತಃ ತಮಿಳು ದೇಶದವರು. ಅವರ ಮೂಲ ನೆಲೆ ತಿರುಚಿನಾಪಳ್ಳಿಯ ಸೀಮೆ. ತಿರುಚಿನಾಪಳ್ಳಿಗೂ, ಸಿದ್ಧರ ಕೋಯಿಲ್ ಊರಿಗೂ ನಡುವೆ 'ಮಂಜಾಪುತ್ತೂರು' ಗ್ರಾಮ. ಹಳೆಯ ಕಾಲದ ಅಗ್ರಹಾರ. ವೈದಿಕರ ನೆಲೆ. 'ಮಂಜಾ'ದ ಮೂಲ ರೂಪ 'ಮುಂಜಾ' ಅಂದರೆ ದರ್ಭೆ. ಪುತ್ತ ಅಂದರೆ ಹುತ್ತ. ದರ್ಭೆ-ಹುತ್ತ ಬಹಳ ಇದ್ದ ಊರು ಮಂಜಾಪುತ್ತೂರು. ದರ್ಭೆ ವೈದಿಕರ ಅವಶ್ಯಕ ವಸ್ತು. ಶುಭ ಅಶುಭ ಎಲ್ಲಕ್ಕೂ ಬೇಕು. ಅಲ್ಲಿನ ಈ ಪಂಗಡಕ್ಕೆ ಮಂಜಾಪುತ್ತೂರು ಬೃಹಚ್ಚರಣದವರು ಎಂದೇ ಹೆಸರು. ಬೃಹಚ್ಚರಣ ದ್ರಾವಿಡದೇಶದ ಸ್ಮಾರ್ತ ಬ್ರಾಹ್ಮಣರಲ್ಲಿ ಒಂದು ಪಂಗಡ.

ವೈದಿಕ ಕರ್ಮದ ಆಚರಣೆ ಆ ಪಂಗಡದಲ್ಲಿ ಪ್ರಧಾನವಾಗಿತ್ತಂತೆ–ಬೃಹತ್ ಆಚರಣೆ. ಆದ್ದರಿಂದ ಬೃಹದಾಚರಣರು ಎಂದೂ ಪ್ರತೀತಿ. ಡಿವಿಜಿ ಆ ಬೃಹಚ್ಚರಣ ಪಂಗಡದವರು.

ಐದಾರು ನೂರು ವರ್ಷದ ಹಿಂದಿನ ಮಾತು. ಮಂಜಾಪುತ್ತೂರಿನ ಅಂತಹ ಕೆಲವು ವೈದಿಕ ಕುಟುಂಬಗಳು ಹೊಟ್ಟೆಪಾಡಿಗಾಗಿ ವಲಸೆ ಹೊರಟವು. ಕೆಲವರು ಕೊಯಮತ್ತೂರು, ಸೇಲಂ ದಾಟಿ ಮೈಸೂರು ನಾಡಿಗೆ ಬಂದರು. ಕೋಲಾರ, ಬೆಂಗಳೂರು ಜಿಲ್ಲೆಗಳ ದಕ್ಷಿಣ ಭಾಗಗಳಲ್ಲಿ ನೆಲೆಸಿದರು—ಆನೆಕಲ್ಲು, ಸರ್ಜಾಪುರ ಮುಂತಾದೆಡೆ. ಕೆಲವರು ಕೋಲಾರದ ದೇವನಹಳ್ಳಿ ಮತ್ತು ಮುಳಬಾಗಿಲುಗಳ ಕಡೆಗೂ ಹರಡಿಕೊಂಡರು. ಕ್ರಮೇಣ ಆ ಜನದ ಭಾಷೆ, ಆಚಾರ ವ್ಯವಹಾರ, ಶಾಸ್ತ್ರ ಸಂಪ್ರದಾಯ ಎಲ್ಲವೂ ದ್ರಾವಿಡದಿಂದ ದೂರವಾಗುತ್ತ ಬಂದವು. ಅವರು ಕರ್ನಾಟಕದವರೇ ಆಗಿಹೋದರು. ತಮಿಳು ಬೆರಕೆ ಆಯಿತು. ಈಗಂತೂ ಕನ್ನಡವೇ ಆಗಿ ಹೋಗುತ್ತಿದೆ.

ದೇವನಹಳ್ಳಿ ತಾಲ್ಲೂಕಿನ ಸೋಮತ್ತನಹಳ್ಳಿಯಲ್ಲಿ ಹುಟ್ಟಿದ ಗುಂಡಪ್ಪ ಎನ್ನುವರು ಡಿವಿಜಿಯವರ ಮುತ್ತಜ್ಜ. ನೂರಾರು ವರ್ಷದ ಹಿಂದಿನ ಮಾತು. ಅಲ್ಲಿಂದಾಚೆಗೆ ಪ್ರಾಯಶಃ ಆ ಜನ ದೇವನಹಳ್ಳಿಯವರೇ ಆಗಿಹೋದರು. ಡಿವಿಜಿಯ ಸ್ಥಳ ದೇವನಹಳ್ಳಿ ಆದದ್ದು ಹೀಗೆ.

ಮುತ್ತಜ್ಜ ಗುಂಡಪ್ಪ ಶೇಕದಾರರು. ಸಣ್ಣ ಸರ್ಕಾರಿ ಕೆಲಸ. ಕಮಿಷನರ್ ಕಾಲ. ಹಳ್ಳಿಗಾಡಿನಲ್ಲಿ ದರ್ಪದಿಂದ ನಡೆದುಕೊಂಡವರು ಗುಂಡಪ್ಪ. ಅವರೇ ಮುಳು ಬಾಗಿಲಿನಲ್ಲಿ ಮನೆ ಕಟ್ಟಿದ್ದು. 'ಶೇಕದಾರ್ ಗುಂಡಪ್ಪಗಾರಿಲ್ಲು' ಹೆಸರುವಾಸಿ.

ಶೇಕದಾರ್ ಗುಂಡಪ್ಪನವರಿಗೆ ಮೂವರು ಗಂಡು ಮಕ್ಕಳು (ಬಾಲ್ಯದಲ್ಲಿ ತೀರಿಕೊಂಡ ಒಬ್ಬ ಮಗನನ್ನು ಬಿಟ್ಟು). ಹಿರಿಯಾತ ಶೇಷಗಿರಿಯಪ್ಪ. ನಾಲ್ಕು ಅಕ್ಷರ ಇಂಗ್ಲಿಷ್ ಕಲಿತವರು. ಪ್ಲೀಡರ್ (ವಕೀಲಿ) ಪರೀಕ್ಷೆ ಮಾಡಿದರು. ಕೋಲಾರದಲ್ಲಿ ವಕೀಲಿ ನಡೆಸಿದರು. ಆಚಾರವಂತರು ದಯಾಶೀಲರು ಕಷ್ಟಸಹಿಷ್ಣು. ಮುಳು ಬಾಗಿಲಿನಲ್ಲಿದ್ದ ದೊಡ್ಡ ಸಂಸಾರದ ನಿರ್ವಹಣೆಯ ಭಾರ ಅವರದೇ. ಗುಂಡಪ್ಪಗಾರಿಲ್ಲಿಗೆ ಸೇರಿದಂತೆ ದೊಡ್ಡ ಮನೆ ಕಟ್ಟಿಸಿದರು.

ಶೇಷಗಿರಿಯಪ್ಪನವರ ತಮ್ಮ ರಾಮಣ್ಣ. ಸುಂಕದ ಇಲಾಖೆಯಲ್ಲಿ ಉದ್ಯೋಗಿ. ಈ ಇಬ್ಬರು ಸೋದರರೂ ಚಿಕ್ಕಂದಿನಲ್ಲಿಯೆ ಹೆಂಡತಿಯರನ್ನು ಕಳೆದುಕೊಂಡರು, ಒಂಟಿಗಳಾದರು. ಶೇಕದಾರ್ ಗುಂಡಪ್ಪನವರ ಮೂರನೆಯ ಮಗ ಶೀನಪ್ಪ ಅಬ್ಕಾರಿ ಗುಮಾಸ್ತೆ. ಆತನ ಹೆಂಡತಿಗೂ ಅಲ್ಪಾಯುಸ್ಸು. ತನ್ನ ಮಕ್ಕಳನ್ನು ರಾಮಣ್ಣನ ಬಳಿ ಬಿಟ್ಟು ಕಾಶೀಯಾತ್ರೆಗೆ ಹೊರಟುಹೋದರು. ಯಾವಾಗಲೂ ಬರುವುದು ಹೋಗುವುದು. ಹೀಗಾಗಿ ಕುಟುಂಬದ ಬಹುಪಾಲು ಹೊಣೆಯೆಲ್ಲ ರಾಮಣ್ಣನವರದೇ.

ಶೇಷಗಿರಿಯಪ್ಪನವರ ಮಗ ವೆಂಕಟರಮಣಯ್ಯ. ಆತನಿಗೆ ಹದಿಮೂರನೆಯ ವಯಸ್ಸಿಗೇ ಮದುವೆ. ಗುಂಜೂರು ನಾರಣಪ್ಪ ಎಂಬುವರ ಮಗಳು ಅಲಮೇಲಮ್ಮನೇ ವಧು. ಐದಾರು ವರ್ಷದ ಬಾಲೆ. ಅಲಮೇಲಮ್ಮನ ತಾಯಿ ಸಾಕಮ್ಮ. ಗಂಡನನ್ನು ಕಳೆದುಕೊಂಡು ದಿಕ್ಕು ಕಾಣದೆ ಮುಳುಬಾಗಿಲಿಗೆ ಬಂದು ರಾಮಣ್ಣನವರ ಆಶ್ರಯ ಪಡೆದಾಕೆ. ಶೇಷಗಿರಿಯಪ್ಪ ತನ್ನ ಗಂಡನಿಗೆ ಹಿಂದೆ ಮಾಡಿದ್ದ ಉಪಕಾರಸ್ಮರಣೆಗಾಗಿ ಮಗಳನ್ನು ಆತನ ಮಗ ವೆಂಕಟರಮಣಯ್ಯನಿಗೆ ಧಾರೆ ಎರೆದುಕೊಟ್ಟರು. ವೆಂಕಟರಮಣಯ್ಯ ಅಲಮೇಲಮ್ಮ ಇವರ ಹಿರಿಯ ಮಗ ಡಿ.ವಿ. ಗುಂಡಪ್ಪ. ಮುತ್ತಜ್ಜನದೇ ಹೆಸರು. ಹುಟ್ಟಿದ ದಿನ 17–3–1887. ಡಿ.ವಿ. ಶೇಷಗಿರಿರಾವ್, ಡಿ.ವಿ. ರಾಮರಾವ್ ಗುಂಡಪ್ಪನವರ ತಮ್ಮಂದಿರು. ಶೇಷಗಿರಿರಾಯರು ಕನ್ನಡ ಅಧ್ಯಾಪಕರು. ರಾಮರಾಯರು ಅಚ್ಚುಕೂಟ ನಡೆಸಿದರು. ಕರ್ನಾಟಕ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್. ಈಗ ಈ ಇಬ್ಬರು ತಮ್ಮಂದಿರೂ ಉದ್ಯೋಗದಿಂದ ವಿಶ್ರಾಂತರು. ಈ ಸೋದರರಿಗೆ ಇಬ್ಬರು ಸೋದರಿಯರು.

ಡಿವಿಜಿ ಬೆಳೆದದ್ದು ಚಿಕ್ಕತಾತ ರಾಮಣ್ಣನವರ ಆಶ್ರಯದಲ್ಲಿ; ರಾಮಣ್ಣ ಅವರ ವಾತ್ಸಲ್ಯ, ತಾಯಿಯ ತಾಯಿ ಸಾಕಮ್ಮನವರ ಅಕ್ಕರೆ, ಸೋದರಮಾವ ತಿಮ್ಮಪ್ಪನವರ ಪ್ರೀತಿಯಲ್ಲಿ. ಅಜ್ಜಿ ಸಾಕಮ್ಮನವರ ಬಗ್ಗೆ ಡಿವಿಜಿ ಅವರಿಗೆ ಪೂಜ್ಯಭಾವನೆ. ''ನನ್ನ ಜೀವಮಾನದಲ್ಲಿ ನಾನು ಕಂಡಿರುವ ಮನುಷ್ಯ ವ್ಯಕ್ತಿಗಳಲ್ಲಿ ಮಹರ್ಷಿಪ್ರಾಯಳಾದವಳು ನನ್ನ ತಾಯಿಯ ತಾಯಿ ಸಾಕಮ್ಮನವರು. ಆಕೆಗೆ ರಾಮಾಯಣ ಭಾರತಾದಿ ಸಮಸ್ತ ಪುರಾಣಗಳೂ ಹೃದಯಸ್ಥವಾಗಿದ್ದವು. ಆಕೆ ಹೇಳುತ್ತಿದ್ದ ದೇವರ ನಾಮಗಳು ನೂರಿನ್ನೂರು ಇರಬಹುದು. ಆಕೆ ಸಹಿಸಿದ ಕಷ್ಟಗಳನ್ನಂತೂ ಕಣ್ಣು ಒದ್ದೆಯಾಗದೆ ವರ್ಣಿಸಲಾಗದು. ಎಲ್ಲ ಕಷ್ಟಗಳನ್ನೂ ಸಹಿಸಿ ಭಗವದ್ಗೀತೆ ಎಲ್ಲಕ್ಕಿಂತ ಮೇಲಿನದೆಂದು ನಂಬಿ, ಪರೋಪಕಾರ ಸಾಧುಸಜ್ಜನ ಸೇವಾನಿರತಳಾಗಿ ಆಯುಷ್ಯವನ್ನು ಮುಗಿಸಿಕೊಂಡಾಕೆ ನನ್ನ ಅಜ್ಜಿ'' ಎಂದು ನೆನೆಸಿಕೊಂಡಿದ್ದಾರೆ. ಆ ಅಜ್ಜಿಯ ಇಂಥ ಕೆಲವು ಗುಣಗಳು ಡಿವಿಜಿಯವರಲ್ಲೂ ನೆಲೆಸಿದ್ದವು ಎನ್ನಲು ಅಡ್ಡಿಯಿಲ್ಲ.

ಎಳೆತನದಲ್ಲಿ ಡಿವಿಜಿಯವರ ಮೇಲೆ ಪ್ರಭಾವ ಬೀರಿದ ಇನ್ನೊಬ್ಬರೆಂದರೆ ಸೋದರಮಾವ ತಿಮ್ಮಪ್ಪ. ಮಗುವಿಗೆ ಆತನೇ ಗೆಳೆಯ. ಆಟ ಆಡಿಸುವುದು, ಎತ್ತಿಕೊಂಡು ಓಡಾಡಿಸುವುದು, ಬೇಕಾದುದನ್ನು ತಂದುಕೊಡುವುದು, ಲಾಲಿಸುವುದು ಎಲ್ಲ ತಿಮ್ಮಪ್ಪನವರದೇ. ತಂದೆ ವೆಂಕಟರಮಣಯ್ಯ ಕೋಪಿಷ್ಠರು. ಅದೇ ಬಾಳಿ

ಡಿವಿಜಿಯವರಲ್ಲೂ ಸ್ವಲ್ಪ ಇತ್ತು. ಹಾಗೆ ತಂದೆಯ ಕೋಪಕ್ಕೆ ತುತ್ತಾದಾಗ ರಕ್ಷಣೆಗೆ ಬರುವವರು ಅಜ್ಜಿ ಸಾಕಮ್ಮ, ಮಾವ ತಿಮ್ಮಪ್ಪ. ತಂದೆಯ ಕೋಪದ ಝಳದಿಂದ ಹುಡುಗನನ್ನು ಪಾರು ಮಾಡುವುದು ಆ ಇಬ್ಬರ ವಾತ್ಸಲ್ಯದ ಕೊಡೆ. ವೆಂಕಟರಮಣಯ್ಯ ಶಾಲಾ ಮಾಸ್ತರು. ತಿಮ್ಮಪ್ಪನವರೂ ಮಾಸ್ತರೇ. ಪ್ರಾಥಮಿಕ ಶಾಲೆಯಲ್ಲಿ ತೆಲುಗು ಮಾಸ್ತರು. ಡಿವಿಜಿ ಅವರಿಗೆ ಶಾಸ್ತ್ರೋಕ್ತವಾಗಿ ಅಕ್ಷರಾಭ್ಯಾಸ ಆದಮೇಲೆ, ಮಾವನೇ ಹೆಗಲ ಮೇಲೆ ಕೂರಿಸಿಕೊಂಡು ಶಾಲೆಗೆ ಕರೆದೊಯ್ಯುತ್ತ ಇದ್ದರು. ಅಲ್ಲಿ ನೆಲದ ಮೇಲೆ ಮರಳಿನಲ್ಲಿ ಅಕ್ಷರ ಬರೆಯುವುದು ಬೆರಳಿನಿಂದ. ಬೆರಳು ಸವೆಯದೆ ಇರಲು ಅದಕ್ಕೆ ಗಜ್ಜುಗದ ಕಾಯಿನ ಚಿಪ್ಪಿನ ಟೋಪಿ.  ಕಾಗುಣಿತ ಮಗ್ಗಿ ಎಲ್ಲ ಬಾಯಿಪಾಠವೇ ಆಗಬೇಕು. ಮಗ್ಗಿ ಎಂದರೆ ಡಿವಿಜಿ ಅವರಿಗೆ ಅಷ್ಟಕ್ಕಷ್ಟೆ. ರಾತ್ರಿ ಮನೆಯಲ್ಲಿ ಮಗ್ಗಿ ಹೇಳಬೇಕು. ಕಡ್ಡಾಯ. ಮಾವನ ಸಹಾಯ ಈ ಎಲ್ಲಕ್ಕೂ. ಮಗ್ಗಿ ಹೇಳುವ ಪಡಿಪಾಟಲನ್ನು ಡಿವಿಜಿ ಅವರ ಮಾತಿನಲ್ಲೇ ಕೇಳಬೇಕು.

“ಒಂದರಿಂದ ಹತ್ತೊಂದಲವರೆಗೂ ಹಾಗೂ ಹೀಗೂ ನಿರ್ವಾಹ ಮಾಡುತ್ತ ಇದ್ದೆ. ಹನ್ನೆರಡೊಂದಲಿಂದ ಮುಂದಕ್ಕೆ ತಪ್ಪುಗಳು—ನನ್ನ ಸೋದರ ಮಾವಂದಿರು ಈ ಮೇಲಣ ಎಲ್ಲ ಪಾಠಗಳಿಗೂ ನನ್ನನ್ನು ತಯಾರು ಮಾಡಿದರು. ಅವರ ವಿಶೇಷಾಂಶ ಲೆಕ್ಕ. ಆದರ ವಿಚಕ್ಷಣೆ ಹೀಗೆ : ನಮ್ಮ ನಡುಮನೆಯಲ್ಲಿ ಒಂದು ಕತ್ತಲೆ ಮೂಲೆಯಲ್ಲಿ ಅವರು ಕುಳಿತು ನನ್ನನ್ನು ಹತ್ತಿರ ಕೂಡಿಸಿಕೊಳ್ಳುವರು. ನನ್ನ ಅಜ್ಜಿ ಏನಾದರೂ ತಿಂಡಿ ಕೋಡುಬಳೆ, ಚಕ್ಕಲಿ ಇತ್ಯಾದಿ ಹವಣಿಸುವರು. ನನ್ನ ಮಾವ ಘಟ್ಟಿಯಾದ ಧ್ವನಿಯಲ್ಲಿ ‘ಹದಿನೆಂಟಾರಲ ಎಷ್ಟು?’ ಎಂದು ಕೇಳುವರು. ಮರುಕ್ಷಣವೇ ಮೆಲುದನಿಯಲ್ಲಿ ನನ್ನ ಕಿವಿಯಲ್ಲಿ ‘ನೂರೆಂಟು’ ಎಂದು ಉಸಿರುವರು. ನಾನು ಘಟ್ಟಿಯಾಗಿ ‘ನೂರೆಂಟು’ ಎಂದು ಕೂಗುವೆ. ಆಗ ಒಂದು ಚೂರು ಕೋಡುಬಳೆ ಬಾಯಿಗೆ.

“ಇದರ ಅಂತರಂಗವನ್ನು ಕೇಳಬೇಕು. ನನಗೆ ಹದಿನೆಂಟಾರಲ ಎಷ್ಟೆಂದು ಗೊತ್ತಿಲ್ಲವೆಂದು ನನ್ನ ಮಾವನಿಗೆ ಗೊತ್ತು. ನನ್ನ ಬಾಯಿಂದ ತಪ್ಪು ಹೊರಟರೆ ಅದು ನನ್ನ ತಂದೆಯ ಕಿವಿಗೆ ಬಿದ್ದೀತು. ಆಗ ನನಗೆ ದಡ್ಡು ಬಡ್ಡು ದಾಸಯ್ಯ ಆದೀತು. ನಾನು ಪೆಟ್ಟು ತಿಂದು ಅತ್ತರೆ ನನ್ನ ಮಾವನಿಗೂ, ನನ್ನ ಅಜ್ಜಿಗೂ ತಡೆಯಲಾರದಷ್ಟು ನೋವು. ಈ ಸಂಕಟವನ್ನು ಪಡಲಾರದೆ ನನ್ನ ಮಾವ ಒಂದು ಒಳ್ಳೆಯ ಸುಳ್ಳಿನಿಂದ ನನ್ನನ್ನು ಕಾಪಾಡುತ್ತಿದ್ದರು. ಕೊಂಚ ಕಾಲದ ಮೇಲೆ ನನ್ನ ತಂದೆ ಈ ನಮ್ಮ ಕತ್ತಲೆ ಕೋಣೆ ಉಪಾಯವನ್ನು ಕಂಡು ನನಗೂ, ನನ್ನ ಮಾವನಿಗೂ ಇಬ್ಬರಿಗೂ ತಕ್ಕ ಶಾಸ್ತಿಯವನ್ನು ಸಲ್ಲಿಸಿದರು.’’

ತಿಮ್ಮಪ್ಪಮಾವನ ವಾತ್ಸಲ್ಯದ ಬಗ್ಗೆ ಡಿವಿಜಿ ಅವರಿಗೆ ಭಾವುಕ ಗೌರವ. ಅವರ ಅಮರ ಕೃತಿ 'ಮಂಕುತಿಮ್ಮನ ಕಗ್ಗ'ದ ಪೀಠಿಕೆಯ 'ಕಗ್ಗದ ಕಥೆ'ಯ ಮೋಷ್ಟು ತಿಮ್ಮಗುರುವಿನ ಚಿತ್ರಣ ಈ ಮಾವ ತಿಮ್ಮಪ್ಪನವರನ್ನೇ ಉದ್ದೇಶಿಸಿದ್ದು ಎನ್ನಲಾಗಿದೆ. ಆ ತಿಮ್ಮಗುರು ಬರೆದು ಇಟ್ಟಿದ್ದ ಕಂತೆಯೆ 'ಕಗ್ಗ' ಎಂಬ ಕಲ್ಪನೆ ಕವಿಯದು; ಆ ಗುರುವಿನ ಚಿತ್ರಣ ಆತ್ಮೀಯ, ಹೃದಯಸ್ಪರ್ಶಿ.

ಎಳೆತನದಲ್ಲಿ ಮನಸ್ಸಿನಲ್ಲಿ ನಿಂತು ಮುಂದೆ ಬಲವಾಗಿ ಬೇರೂರಿ ಬದುಕನ್ನು ಆವರಿಸಿದ ಇನ್ನೊಂದು ಅಂಶ ಮುಳುಬಾಗಿಲಿನ ದೈವ ಶ್ರೀಮದಾಂಜನೇಯ ಸ್ವಾಮಿ. ಆ ವೀರಾಂಜನೇಯ ಭಾರಿ ವಿಗ್ರಹ, ಭಾವುಕರನ್ನು ಬೆರಗು ಮಾಡುವಂಥದು. ತಿರುಪತಿಯ ತಿಮ್ಮಪ್ಪನನ್ನು ಕಾಣಲು ಇತ್ತಣಿಂದ ಹೋಗುವ ಎಲ್ಲಾ ಯಾತ್ರಿಕರು ಮುಳುಬಾಗಿಲಿನ ಆಂಜನೇಯನಿಗೆ ಅಡ್ಡಬಿದ್ದು ಮುಂದೆ ಸಾಗುವುದು ವಾಡಿಕೆ. ಆ ಪ್ರಾಂತ್ಯಕ್ಕೇ ಕಾಪುದೈವ ! ಆ ದೈವ, ಆ ಪರಿಸರ ಎಲ್ಲವೂ ಡಿವಿಜಿ ಅವರನ್ನು ತುಂಬಿಕೊಂಡಿದ್ದವು. ಊರಿನ ವೈದಿಕರ ಆಚಾರ, ಶಾಸ್ತ್ರಗಳು, ಹೆಂಗಸರ ಸಂಪ್ರದಾಯಗಳು, ಸಂಸ್ಕೃತ ವೇದಾಧ್ಯಯನಗಳು, ಸಂಗೀತಾದಿ ಕಲೆಗಳು, ಎಳೆಯರ ಆಟಪಾಠಗಳು, ಹಿರಿಯರ ಮಮತೆಯ ಲಾಲನೆ–ಪಾಲನೆ, ಬದುಕಿನ ಆ ಸರಳತೆ ಸಹಜತೆ ನಿರಾಳತೆಗಳು, ನೆಚ್ಚಿಗೆ ನಂಬಿಕೆಗಳು, ಸ್ನೇಹ ಸೌಹಾರ್ದಗಳು—ಎಲ್ಲವೂ ಹುಡುಗ ಡಿವಿಜಿಯನ್ನು ರಂಜಿಸಿದವು, ರೂಪಿಸಿದವು.

'ಕಗ್ಗ'ದಲ್ಲಿ, ಅನಂತರ ಬಂದ 'ಶ್ರೀಮದಾಂಜನೇಯಸ್ವಾಮಿ' ಕೃತಿಯಲ್ಲಿ ಡಿವಿಜಿ ಆ ತಮ್ಮ ದೈವ ಆಂಜನೇಯನಿಗೆ ಶ್ರದ್ಧೆಯ ಕವನ ಕುಸುಮಗಳ ರೂಪದಲ್ಲಿ ಕೃತಜ್ಞತೆಯನ್ನು ಅರ್ಪಿಸಿದ್ದಾರೆ. ಆ ಆಂಜನೇಯನಿಗೆ ಕೇತಕಿ (ತಾಳೆ) ಹೂವಿನ ಸಿಂಗಾರ ವಿಶೇಷ. ಡಿವಿಜಿ ಅವರ ಕೊನೆಯ ಕವನ ಸಂಕಲನ 'ಕೇತಕೀವನ'. *ಬಾಳಿಗೊಂದು ನಂಬಿಕೆ* ಗ್ರಂಥದಲ್ಲಿ ಆಂಜನೇಯನನ್ನೇ ಮಾನವನಿಗೆ ಆದರ್ಶ ವ್ಯಕ್ತಿಯಾಗಿ ಉದಹರಿಸುತ್ತಾರೆ.

# 3. ಎಳೆತನ

ಡಿವಿಜಿಯವರ ಎಳೆತನ ಕಳೆದದ್ದು ಬಹುಪಾಲು ಮುಳುಬಾಗಿಲಿನಲ್ಲಿ. ಹಳೆಯ ಕಾಲದ ಸಣ್ಣ ಊರು. ಅಲ್ಲಿನ ವಿಶೇಷ ಎಂದರೆ ಆಂಜನೇಯನ ಗುಡಿ ಒಂದೇ. ಪಾಂಡಿತ್ಯ, ಕಲೆ, ಕಸಬು, ಚೆಲುವು, ಯಾವುದರಲ್ಲೂ ಹೇಳಿಕೊಳ್ಳುವಂಥ ಪರಿಸರವೇನಿರಲಿಲ್ಲ. ಬಳಗದವರಾಗಲಿ, ಹಿರಿಯರಾಗಲಿ, ಸುತ್ತಲವರಾಗಲಿ ಸಾಮಾನ್ಯ ಜನ ; ಅಲ್ಪತೃಪ್ತರು. ಜೀವನೋಪಾಯಕ್ಕೆ ಎಷ್ಟು ಬೇಕೋ ಅಷ್ಟು ವಿದ್ಯೆ, ಏನೋ ಒಂದು ಕಸಬು. ಆಚಾರಕ್ಕೆ ಬೇಕಾದಷ್ಟು ಸಂಸ್ಕೃತ, ಶಾಸ್ತ್ರಜ್ಞಾನ.

ಆದರೂ ಅಂದಿನ ಕಾಲದಲ್ಲಿ ಅಂಥ ಸ್ಥಳಗಳಲ್ಲೂ ಸಹ ಸಣ್ಣಪುಟ್ಟ ಪ್ರಮಾಣದಲ್ಲಿಯಾದರೂ ಸಂಗೀತ, ಸಂಸ್ಕೃತ, ಕಾವ್ಯಾಸಕ್ತಿ, ನರ್ತನಕಲೆ, ಹರಿಕಥೆ ಇವೆಲ್ಲ ದಿನನಿತ್ಯದ ಸಾಮಾನ್ಯ ಲಕ್ಷಣಗಳಾಗಿದ್ದವು. ಮೇಲಾಗಿ ಜೀವನಾಸಕ್ತಿ ಉತ್ಸಾಹ ತುಂಬಿದ ವಾತಾವರಣ ಹಾಗೂ ವ್ಯಕ್ತಿಗಳು ಇದ್ದರು. ಡಿವಿಜಿಯವರ ಹಲವಾರು ಚಿತ್ರಣಗಳಲ್ಲಿ ಅಂಥ ಅನೇಕ ಜೀವನರಸಿಕರನ್ನು ನಾವು ಕಾಣುತ್ತೇವೆ. ಸರಳತೆ, ಸಂತೃಪ್ತಿ ಅಂದಿನ ಕಾಲದ ಮುಖ್ಯ ಅಂಶಗಳು. ಪಾಲಿಗೆ ಬಂದದ್ದನ್ನು ಪರಮಾನ್ನ ಎಂದು ಭಾವಿಸುವ ಪ್ರವೃತ್ತಿ. ಹೊಸದರ ಬಗ್ಗೆ ಹೆಚ್ಚಿನದರ ಬಗ್ಗೆ ಅನಾಸ್ಥೆ ಎಂದೇನೂ ಅಲ್ಲ. ಅಂಥದು ಒದಗಿಬಂದಾಗ ಅದು ಸ್ವಾಗತಾರ್ಹ. ಅನುಭವಿಸುವಂಥ ತೆರೆದ ಮನ ಉಂಟು. ಆದರೆ ಅದು ಬರಲಿಲ್ಲ ಎಂಬ ಹಾತೊರಿಕೆಯೂ ಇಲ್ಲ. ಪಡೆಯಲು ಆತುರ ಇಲ್ಲ, ಪಡೆಯದಿದ್ದಾಗ ಬೇಸರವೂ ಇಲ್ಲ. ಈ ವಾತಾವರಣ ಡಿವಿಜಿಯವರ ಮನೋಭೂಮಿಕೆಯನ್ನು ಎಳೆತನದಲ್ಲಿ ತುಂಬಿತ್ತು. ಕೊನೆಯವರೆಗೂ ಇತ್ತು ಎನ್ನಲೂಬಹುದು.

ಸಂಸಾರ ದೊಡ್ಡದು ; ಅಣ್ಣ ತಮ್ಮ, ಅಕ್ಕ ತಂಗಿಯರು, ಅಜ್ಜ ಅಜ್ಜಿಯರು, ಅಕ್ಕ ಭಾವಂದಿರು, ಸೊಸೆಯರು, ಮಕ್ಕಳು ಮೊಮ್ಮಕ್ಕಳು. ಹೊತ್ತಿಗೆ 20–25 ಜನ ಊಟಕ್ಕೆ. ಅವಿಭಕ್ತ ಕುಟುಂಬ. ಅಂಥ ಮನೆಯಲ್ಲಿ ಒಂದು ಸುರಕ್ಷಣೆಯ ವಾತಾವರಣವಿರುವುದು ಸಹಜ. ಒಬ್ಬರಿಗೆ ಒಬ್ಬರು ಆಧಾರ. ಪರಸ್ಪರ ಅರಿವು,

ಸಹಕಾರ ಅವಶ್ಯ. ತಾನು–ತನ್ನದು ಎಂಬುದನ್ನು ಸ್ವಲ್ಪ ತಗ್ಗಿಸಿಕೊಂಡು ಒಟ್ಟು ಮನೆತನದ ಹಿತವನ್ನೇ ಬಯಸುವ ಕಾಲ. ಮನೆಯಲ್ಲಿ ಇದ್ದ ಅನೇಕರ ಜೊತೆಗೆ, ಬರಹೋಗುವ ಅತಿಥಿಗಳು, ಊರಿನ ನೆರೆಹೊರೆಯ ಜನ, ಪರಿಚಿತರು, ಆಗಾಗ ಬಂದು ಠಿಕಾಣಿ ಹಾಕುವ ದಾಸರು, ಫಕೀರರು ಯಾರುಯಾರೋ! ಬದುಕಿನ ನೂರಾರು ಎಳೆಗಳು, ನೂರಾರು ಬಗೆಗಳು, ನೂರಾರು ಭಾವನೆಗಳು, ವಿಚಾರಗಳು— ಕಾಣುವ ಕಣ್ಣು ಅರಿಯುವ ಮನ ಇದ್ದವನಿಗೆ ಇವೆಲ್ಲ ಅಪಾರ ಅನುಭವವನ್ನು ನೀಡುವಂಥವು. ಡಿವಿಜಿ ಅವರಿಗೆ ಆದ ಆ ಅನುಭವವೆಲ್ಲದರ ಇಣುಕು ನೋಟವನ್ನು ಅವರ ಜ್ಞಾಪಕ ಚಿತ್ರಶಾಲೆಯ ಸಂಪುಟಗಳಲ್ಲಿ ನಾವು ನೋಡ ಬಹುದು.

ಸಾಕಷ್ಟು ಜಮೀನು. ದೊಡ್ಡಮನೆ, ಹತ್ತಾರು ಅಂಕಣದ್ದು ; ಬಾವಿಗಳು, ಕೈತೋಟ. ವರ್ಷಾಕಾಲ ಆಗುವಷ್ಟು ದವಸಧಾನ್ಯ, ಕಾಯಿಪಲ್ಲೆ. ಎಂದೂ ನಿಲ್ಲದ ಕರಾವು. ಸ್ವಂತದಿಂದಲೋ, ಬಡ್ಡಿಗಾಗಿಯೋ, ದಾನವಾಗಿಯೋ ಬರುವ ಬೆಲ್ಲ ಇತ್ಯಾದಿ. 'ಮಹಸೂಲ್'ನಿಂದ (ರಸ್ತೆ ಸಾಲುಮರಗಳ ಹಕ್ಕುದಾರಿಕೆ) ಬರುವ ಹುಣಿಸೇಹಣ್ಣು ವಗೈರೆ ನೆಮ್ಮದಿಯ ಬದುಕಿಗೆ ಸಾಕಾಗಿತ್ತು. ಅಷ್ಟರಲ್ಲೇ ಸಂತೃಪ್ತಿ, ಸಮೃದ್ಧಿ.

'ಮಹಸೂಲ್' ವಸೂಲಿಗಾಗಿ ಎಳೆಯ ಹುಡುಗ ಡಿವಿಜಿ ಹೋದದ್ದೂ ಉಂಟು. ಆಳಿನ ಹೆಗಲೇರಿ ಹೋಗುವುದು. ರಸ್ತೆ ಮರಗಳ ನೆರಳಲ್ಲಿ ಕುರುಕಲು ತಿಂಡಿ ತಿನ್ನುತ್ತಾ ಕುಳಿತಿರುವುದು. ಆಳುಗಳು ಹುಣಿಸೇ ಹಣ್ಣನ್ನು ಉದುರಿಸುವುದರ ಮೇಲೆ ಈ ಚೋಟಾರಿ ಯಜಮಾನನ ಉಸ್ತುವಾರಿ ! ಮತ್ತೆ ವಾಪಸಾಗುವಾಗ ಆಳಿನ ಹೆಗಲ ಸವಾರಿ—ಈ ಚಿತ್ರವನ್ನೆಲ್ಲ ಡಿವಿಜಿ ಕೊಟ್ಟಿದ್ದಾರೆ.

ಅಂದಿನ ಮತ್ತೊಂದು ಅಂಶ ಡಿವಿಜಿಯವರ ನೆನಪಿನ ಚಿತ್ರಗಳಿಂದ ಕಾಣ ಸಿಗುತ್ತದೆ. ಅದು ಜನರಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದ್ದ ಪರಸ್ಪರ ಸಹನೆ ಸೌಹಾರ್ದ. ಜಾತಿಗಳು ಬೇರೆ, ಅವುಗಳ ಕಟ್ಟಳೆಗಳು ಬೇರೆ, ಮೇಲು–ಕೀಳು ಎಲ್ಲ ದಿಟವೇ. ಆದರೆ ಅಲ್ಲಿ ಸಂಘರ್ಷ ಕಡಿಮೆ. ಸೌಹಾರ್ದವೇ ಹೆಚ್ಚು. ಬದುಕಿನಲ್ಲಿ ಒಂದು ರೀತಿಯ ಹೊಂದಾಣಿಕೆ. ನಾಲ್ಕು ದಿನದ ಆಟ ಈ ಬದುಕು, ಹೇಗೋ ತಳ್ಳೋಣ ; ಇದರಲ್ಲಿ ವಿರಸ, ಜಗಳ, ತಂಟೆ–ತಕರಾರು ಏಕೆ ಎಂಬ ಭಾವನೆ ಅಥವಾ ನಮ್ಮ ನಸೀಬೇ ಇಷ್ಟು ಎಂಬ ನಿರುತ್ಸಾಹ ; ಅರಿವಿನ ಅಭಾವ ಅಥವಾ ಬಂದುದನ್ನು ಕೊಂಡುಂಡು ಬಾಳುವ ಜಾಣತನ—ಅಂತೂ ಬದುಕು ಸರಳ, ನೇರ, ಸಹಜ, ಸಂತೃಪ್ತಿಮಯ.

ಈ ಮೌಲ್ಯಗಳೆಲ್ಲ ಡಿವಿಜಿಯವರಲ್ಲಿ ಮೂಡಿದ್ದವು. ಹಳ್ಳಿಯಲ್ಲಿ ಆಗಾಗ

ನಡೆಯುವ ಹಬ್ಬಗಳು, ಮನೆಯಲ್ಲಿನ ಆಚರಣೆಗಳು, ವ್ರತಾದಿಗಳು, ವೈಶ್ಯರ ವಾಚಕ ಕಾರ್ಯಕ್ರಮಗಳು (ಕಾವ್ಯವಾಚನ)—ತಂದೆಯವರೇ ಒಳ್ಳೆ ವಾಚಕರು—ಆಂಧ್ರಭಾಗವತ, ಮನುಚರಿತೆ, ಅಜನೃಪ ಚರಿತೆ, ದಿಲೀಪ ಚರಿತೆ ಮುಂತಾದುವುಗಳ ಪರಿಚಯ. ಆಂಜನೇಯನ ಉತ್ಸವ, ಬೆಳದಿಂಗಳಿನ ರಾತ್ರಿಯ ಉತ್ಸವಗಳು, ಕೋಲಾಟಗಳು, ಇತರ ದೇವರುಗಳ ಉತ್ಸವಗಳು, ಧಾತ್ರೀ ಹವನದ ಸೊಗಸು, ಹಿರಿಯರ ಪ್ರೀತಿ ವಿಶ್ವಾಸಗಳು, ತಂದೆಯ ಕೋಪತಾಪಗಳು, ಸೋದರತ್ತೆಯ ಸಾಂತ್ವನ–ಹಾಸ್ಯ ಕವಿತ್ವಗಳು, ಹಬ್ಬವೊ, ಹರಿದಿನವೊ, ಹುಟ್ಟಿದ ಹಬ್ಬವೊ, ತಿಥಿಯೊ ಏನಾದರೂ ಒಂದು ನೆವದಲ್ಲಿ ಸದಾ ಸಿಗುತ್ತಿದ್ದ ತಿಂಡಿತೀರ್ಥಗಳು, ಸಂಗೀತದ ಸುಬ್ಬಣ್ಣನವರ ಹಾಡುಗಳು, ಆಶುಕವಿತೆಗಳು–ಪೈಪೋಟಿ ಧಾವಂತ ಇಲ್ಲದ ನೆಮ್ಮದಿಯ ಬದುಕು. "ನನ್ನ ಬಾಲ್ಯದ ಕಾಲ ಭೋಜನ ಸಮೃದ್ಧಿಯ ಕಾಲ, ಪ್ರೀತಿ ವಾತ್ಸಲ್ಯಗಳ ಕಾಲ, ಸುಭಿಕ್ಷದ ಕಾಲ........ ನನ್ನ ತಿಂಡಿಪೋತತನ, ಭಂಡಬಾಳು ಅತ್ತೆ ಹೇಳಿದ ಹಾಗೆಯೆ ಕೊನೆಯವರೆಗೂ ಸಾಗಿತು" ಎಂದಿದ್ದಾರೆ ಡಿವಿಜಿ.

ಆಗಾಗ ಸಂನ್ಯಾಸಿಗಳು, ಫಕೀರರು, ಜೋಗಿಗಳು ಬರುತ್ತಿದ್ದರು. ಆಂಧ್ರದ ಕಡೆಯಿಂದ ಗೋದಾವರಿ ಬ್ರಾಹ್ಮಣರು ಬರುತ್ತಿದ್ದರು. ಅವರ ನಿರಾಳವಾದ ಯಾವ ಜವಾಬ್ದಾರಿಯೂ ಇಲ್ಲದ ಅಲಕ್‌ನಿರಂಜನ್ ಬದುಕು ಹುಡುಗ ಡಿವಿಜಿಯನ್ನು ಸೆಳೆದಿತ್ತು. ತಾನೂ ಏಕೆ ಹೀಗೆ ಆರಾಮವಾಗಿ ಓಡಾಡಿಕೊಂಡು ಇರಬಾರದು, ಈ ಮನೆಮಠ ತಂಟೆತರಲೆ ಏಕೆ ಎನಿಸಿದ್ದುಂಟು. ಮುಂದೆ ಬೆಂಗಳೂರಿನಲ್ಲಿ ಬೈರಾಗಿಗಳ ಬೆನ್ನು ಹತ್ತಿದ್ದೂ ಉಂಟು. ಆದರೆ ಅದು ಮುನ್ನಡೆಯಲಿಲ್ಲ. ಅದಕ್ಕೆ "ನನ್ನ ಅಂಜುಬುರುಕುತನ, ಕಾಯಕ್ಲೇಶಭಯ ಹಾಗೂ ಸಮಾಜದ ಹೆದರಿಕೆ" ಇವು ಕಾರಣ ಎಂದಿದ್ದಾರೆ. ಅಲ್ಲದೆ ಸ್ವಲ್ಪ ಇಂಗ್ಲಿಷ್ ಕಲಿತ ಮೇಲೆ ಅವರ ಕೈಗೆ ಬಂದ ಒಂದು ಪುಸ್ತಕ ಈ ಬೈರಾಗಿ ಬದುಕಿನ ಆಸೆಯನ್ನು ಹಿಮ್ಮೆಟ್ಟಿಸಿತು. ವಿಶ್ವೇಶ್ವರಯ್ಯನವರ ಬಂಧುಗಳಾಗಿದ್ದ ಮೋಕ್ಷಗುಂಡಂ ವೆಂಕಟೇಶಯ್ಯ ಕೊಟ್ಟದ್ದು ಆ ಪುಸ್ತಕ "ಸಾಕ್ರಟೀಸನ ವಿಚಾರಣೆ ಹಾಗೂ ಮರಣ" *(Trial and Death of Socrates)*. ಅದು ಡಿವಿಜಿಯವರ ನಿತ್ಯ ಪಾರಾಯಣದ ಗ್ರಂಥ ಆಯಿತು. "ಸಾಕ್ರೇಟಿಸನ ಸಂವಾದ"ಗಳೂ ಮನಸೆಳೆದವು. ಸಮಾಜ ಸಂಪ್ರದಾಯಗಳ ಬಗ್ಗೆ ಇದ್ದ ತಿರಸ್ಕಾರ, ಜಿಗುಪ್ಸೆ ಹೋಯಿತು. ಅವೂ ಗೌರವಾರ್ಹ ಎಂಬ ನಂಬಿಕೆ ಬಲಗೊಂಡಿತು. ಜೊತೆಗೆ ಮದುವೆಯೂ ಈ ಹಕ್ಕಿಯಂತೆ ಹಾರುವ ಹಂಬಲವನ್ನು ಹಿಮ್ಮೆಟ್ಟಿಸಿತು.

ಮುಂದೆ ಒಮ್ಮೊಮ್ಮೆ ಸಂನ್ಯಾಸದ ಸೆಳೆತ ಮತ್ತೆ ಬಂದದ್ದೂ ಉಂಟು. ಆದರೆ

ಆ ವೇಳೆಗೆ ಡಿವಿಜಿ ಲೋಕಜೀವನದ ಹಲವು ಎಳೆಗಳಲ್ಲಿ ತೊಡಗಿಹೋಗಿದ್ದರು. ಸೆಳೆತ ಸೋತಿತು. ಡಿವಿಜಿ ಸಂಸಾರದಲ್ಲೇ ನಿಂತರು. ಲೋಕಸಂಸಾರಿಯೆ ಆದರು. ಮಾನಸಿಕವಾಗಿ ಮಾತ್ರ ಅವರ ಮನ ನಿರಾಳಕ್ಕೆ, ನಿಶ್ಚಿಂತೆಗೆ ಮಿಡಿಯುತ್ತಲೇ ಇತ್ತು. ಅವರ 'ಹಕ್ಕಿಯ ಪಯಣ' ಪ್ರಬಂಧ ಈ ಭಾವನೆಗೆ ಹಿಡಿದ ಕನ್ನಡಿ.

# 4. ಕಲಿಕೆ

"ನಾನು ಪ್ಯಾಸು ಮಾಡಿದ್ದು ಎರಡೇ ಪರೀಕ್ಷೆಗಳು. ಮೊದಲನೆಯದು ಕನ್ನಡ ಲೋವರ್ ಸೆಕೆಂಡರಿ. ಅದು ಬಹುಶಃ 1898–99ರಲ್ಲಿ. ಎರಡನೆಯದು ಇಂಗ್ಲಿಷ್ ಲೋವರ್ ಸೆಕೆಂಡರಿ. ಪ್ರಾಯಶಃ 1900ರಲ್ಲಿ'' ಎಂದಿದ್ದಾರೆ ಡಿವಿಜಿ.

ಅವರ ಕಲಿಕೆ ಮೊದಲಾದದ್ದು ಮನೆಯಲ್ಲೆ. 'ಓನಾಮ'ದ ಅಕ್ಷರಾಭ್ಯಾಸದಿಂದ. ಕುಲಗುರು ವೇದಮೂರ್ತಿ ವೆಂಕಟರಮಣ ಭಟ್ಟರಿಂದ ಪಾಠ. ತಂದೆ ವೆಂಕಟರಮಣಯ್ಯನವರಿಂದಲೂ ಪಾಠ. ಪುಟ್ಟಪ್ಪ ಎಂಬ ಇನ್ನೊಬ್ಬ ಮಾಸ್ತರೂ ಅಕ್ಷರಜ್ಞಾನ ಕಕಾಕಿಕೀ ಹೇಳಿಕೊಟ್ಟರು. ಸೋದರಮಾವ ತಿಮ್ಮಪ್ಪ ತಮ್ಮೊಂದಿಗೆ ಈ ಹುಡುಗನನ್ನೂ ಶಾಲೆಗೆ ಎತ್ತಿಕೊಂಡು ಹೋಗುವರು. ತೆಲುಗು ಶಾಲೆ. ಅಲ್ಲಿ ಮರಳಿನಲ್ಲಿ ಅಕ್ಷರ ತಿದ್ದುವುದು. ಕಾಗುಣಿತ ಹೇಳುವುದು. ವಾರ, ತಿಂಗಳು, ಋತು, ಸಂವತ್ಸರ ಇತ್ಯಾದಿಗಳ ಬಾಯಿಪಾಠ. ಮಗ್ಗಿ ಮತ್ತು ಅದರ ತಕರಾರನ್ನೂ ಈ ಹಿಂದೆಯೆ ನೋಡಿಯಾಗಿದೆ.

ಶಾಲಾ ಮಾಸ್ತರರ ಪೈಕಿ ಹೆಡ್‌ಮಾಸ್ಟರ್ ಚಂದ್ರಶೇಖರ ಶಾಸ್ತ್ರಿ ಹಾಗೂ ಕೆ.ವಿ. ರಾಮಸ್ವಾಮಯ್ಯರ್ ಅವರನ್ನು ಡಿವಿಜಿ ತುಂಬ ಗೌರವದಿಂದ, ಕೃತಜ್ಞತೆಯಿಂದ ನೆನೆಸಿಕೊಂಡಿದ್ದಾರೆ. ಶಾಸ್ತ್ರಿಗಳು ಕನ್ನಡದ ಉಪಾಧ್ಯಾಯರು. ಮಕ್ಕಳಿಗೆ ಮೆಚ್ಚಿಗೆ ಆಗುವಂತೆ ಅವರ ಪಾಠ. ಅದು 'ಸರಸ ಸಾಹಿತ್ಯ ಸುಗ್ಗಿ'. ಕಾವ್ಯದ ಬಗ್ಗೆ ಆಸಕ್ತಿ ಹುಟ್ಟಿಸುವಂಥದು. ಶಾಲೆಯ ಒಳಗೆ ಮಾತ್ರವಲ್ಲ, ಹೊರಗೂ ಗುಡಿ, ಬೀದಿ, ಮನೆ ಪೇಟೆಗಳಲ್ಲಿ ಅವರು ಕಲಿಸಿದ ಪಾಠ ದೊಡ್ಡದು. "ಅವರೇ ನಿಜವಾದ ಗುರುಗಳು''.

ರಾಮಸ್ವಾಮಯ್ಯರ್ ಅವರು ಇಂಗ್ಲಿಷ್ ಮಾಸ್ತರು. ಅವರು ಮುಳುಬಾಗಿಲಿಗೆ ಕೆಲಸಕ್ಕೆ ಬಂದದ್ದು ತಮ್ಮ ಪುಣ್ಯ ಎಂದಿದ್ದಾರೆ ಡಿವಿಜಿ. "ನನ್ನ ಪಾಲಿಗೆ ಅದು ದೈವದ ಘಟನೆ, ನಾನು ನನ್ನ ಮನಸ್ಸಿನ ಅಂತರಾಳದಿಂದ ಹೇಳುತ್ತೇನೆ ; ನನಗೆ ಈಗ ಬರುವ ಇಂಗ್ಲಿಷು ರಾಮಸ್ವಾಮಯ್ಯರ್ ಕಲಿಸಿದ್ದೆಷ್ಟೋ ಅಷ್ಟೇ. ಇದು

ಉಪಚಾರದ ಮಾತಲ್ಲ. ನನ್ನ ಮುಖಸ್ತೋತ್ರಕ್ಕೆ ಈಗ ರಾಮಸ್ವಾಮಯ್ಯನವರು ಬಹು ದೂರವಾಗಿದ್ದಾರೆ''—ಇದು ಎಪ್ಪತ್ತು ಮೀರಿದ ಪಕ್ವಜೀವಿ ಡಿವಿಜಿ ತಮ್ಮ ಎಳೆತನದ ಆದಿಗುರುವನ್ನು ನೆನೆಸಿಕೊಂಡಿರುವ ಬಗೆ.

ಡಿವಿಜಿಯವರಿಗೆ ಇಂಗ್ಲಿಷ್ ತಿಳಿವಿನ ಅಡಿಪಾಯ ಹಾಕಿದ್ದೇ ಈ ರಾಮಸ್ವಾಮಯ್ಯರ್ ಅವರು. ಆ ಭಾಷೆಯ ಒನಪ್ಪುಗಳು, ಪ್ರಭೇದಗಳು, ಉಚ್ಚಾರಣೆಗಳು, ಪದಬಳಕೆಗಳು, ವ್ಯಾಕರಣ ವಿಶೇಷಗಳು, ಅರ್ಥಸ್ವಾರಸ್ಯಗಳು, ಸ್ವರಭಾರಗಳು, ಸಾಹಿತ್ಯಕೃತಿಗಳು ಎಲ್ಲದರ ಅರಿವನ್ನು ಕೊಟ್ಟರು. ಡಿವಿಜಿ ಅವರು ಮುಂದೆ ಕನ್ನಡದಲ್ಲಿ ಹೇಗೋ ಹಾಗೆಯೆ ಇಂಗ್ಲಿಷ್‌ನಲ್ಲಿಯೂ ಪಾರಂಗತರಾದರು. ಸರ್ ಮಿರ್ಜಾ ಅಂಥವರೂ ತಮ್ಮ ಇಂಗ್ಲಿಷ್ ಲೇಖನ ಭಾಷಣಗಳನ್ನು ಡಿವಿಜಿಯವರಿಗೆ ತೋರಿಸಿ ತಿದ್ದಿಸಿಕೊಳ್ಳುತ್ತಿದ್ದರು. ಅಂಥ ಭಾಷಾಪ್ರೌಢಿಮೆಗೆ ಆಧಾರಬೀಜ ಬಿತ್ತಿದವರು ಶ್ರೀ ರಾಮಸ್ವಾಮಯ್ಯರ್. ತರಗತಿಯ ಪಾಠವಷ್ಟೇ ಅಲ್ಲ, ಬಿಡುವಿನ ವೇಳೆಯಲ್ಲಿ ಇತರ ಹಲವು ಇಂಗ್ಲಿಷ್ ಕೃತಿಗಳನ್ನು ಮಕ್ಕಳಿಗೆ ಹೇಳಿಕೊಟ್ಟರು. ಸಾಹಿತ್ಯದಲ್ಲಿ ಆಸಕ್ತಿ ಕುದುರಿಸಿದರು. ಜೊತೆಗೆ ಅವರ ನೀತಿ–ನಡತೆಗಳನ್ನು ರೂಪಿಸಿದರು.

1899ರಲ್ಲಿ ಮದರಾಸಿನಿಂದ ಥಾಮಸ್ ಡನ್‌ಹ್ಯಾಮ್ ಎಂಬುವರು ಎಜ್ಯುಕೇಷನಲ್ ರಿವ್ಯೂ ಎಂಬ ಆಂಗ್ಲ ಪತ್ರಿಕೆಯನ್ನು ನಡೆಸುತ್ತಿದ್ದರು. ಅದನ್ನು ರಾಮಸ್ವಾಮಯ್ಯರ್ ತರಿಸುತ್ತಿದ್ದರು. ಅದರಲ್ಲಿ ಬರುತ್ತಿದ್ದ ಪುಸ್ತಕ ವಿಮರ್ಶೆಯ ಲೇಖನಗಳನ್ನು ಅವರು ವಿದ್ಯಾರ್ಥಿಗಳಿಗೆ ಓದಿ ಹೇಳುತ್ತಿದ್ದರು. ಇದರಿಂದ ಆಯಾ ಕೃತಿಗಳ ಪರಿಚಯ ಆದದ್ದು, ಇಂಗ್ಲಿಷ್ ಭಾಷೆಯ ನವಿರು, ವ್ಯಾಕರಣ ಸೂಕ್ಷ್ಮಗಳು ಎಲ್ಲದರ ಪಾಠ ಆದದ್ದು–ಹೀಗೆ ಎರಡು ಪ್ರಯೋಜನ ದಕ್ಕಿದವು.

ಮುಳುಬಾಗಿಲಿಗೆ ಸಬ್‌ರಿಜಿಸ್ಟ್ರಾರ್ ಆಗಿ ಬಂದ ರಾಮದಾಸಪ್ಪ ಎಂಬುವರಿಂದಲೂ ಡಿವಿಜಿ ಅವರಿಗೆ ಇಂಗ್ಲಿಷಿನ ಹೆಚ್ಚಿನ ಅರಿವು ದೊರೆಯಿತು. ತಪ್ಪು ಇಲ್ಲದೆ, ಸರಳವಾಗಿ ಆದರೆ ಗಂಭೀರವಾಗಿ ವೀರ್ಯವತ್ತಾಗಿ ಬರೆಯುವ ಕಲೆ ಕೈಗೂಡಿತು. 'ಮದರಾಸ್ ಮೇಲ್' ಪತ್ರಿಕೆಯನ್ನು ಓದುವ ಅವಕಾಶವಾಯಿತು. ಇದು ಡಿವಿಜಿಯವರ ಪತ್ರಿಕಾ ವ್ಯವಸಾಯದ ಮೊದಲ ಉಳುಮೆ.

ಕನ್ನಡ ಲೋವರ್ ಸೆಕೆಂಡರಿ ತೇರ್ಗಡೆ ಆಯಿತು. "ಇವನಿಗೆ ಇಂಗ್ಲಿಷೂ ಚೆನ್ನಾಗಿ ಗೊತ್ತಿದೆ. ನೇರವಾಗಿ ಇಂಗ್ಲಿಷ್ ಲೋವರ್ ಸೆಕೆಂಡರಿಗೆ ಕೂಡಿಸಬಹುದು'' ಎಂದು ಉಪಾಧ್ಯಾಯರು ಶಿಫಾರಸು ಮಾಡಿದರು. ಹಿಂದೆಯೆ ಡಬಲ್ ಪ್ರಮೋಷನ್ ಸಹ ಸಿಕ್ಕಿತ್ತು. ಆದರೆ ಐದನೆಯ ತರಗತಿ ಓದಬೇಕು ಎಂಬ

ಕಾನೂನಿನ ಅಡ್ಡಿ ಬಂತು. ಡಿವಿಜಿಗೆ ಬೇಸರ. ಸಾಮರ್ಥ್ಯ ಇದ್ದರೂ ಫಲವಿಲ್ಲ! ಊರಿನ ಹಿರಿಯರೊಬ್ಬರು ಕಾಶಿ ಯಾತ್ರೆ ಹೊರಟರು. "ಅವರ ಜೊತೆ ನಾನೂ ಹೋಗುತ್ತೇನೆ" ಎಂದು ಡಿವಿಜಿ ಹಠ ಹಿಡಿದರು. ಅಜ್ಜಿಯವರಿಗೆ ದಂಗು ಬಡಿಯಿತು. ಎಳೆಹುಡುಗ. ಕಾಶಿಗೆ ಹೋಗುವುದೇ ! ಹಿರಿಯರೆಲ್ಲ ಮತ್ತೆ ಪ್ರಯತ್ನಿಸಿದರು. ಮೈಸೂರಿನ ಆಗಿನ ವಿದ್ಯಾ ಇಲಾಖೆಯ ಮುಖ್ಯಸ್ಥ ಬಾಬಾ ಸಾಹೇಬರು. ಅವರಿಗೆ ಅಹವಾಲು ಹೋಯಿತು. ಆತ ಮಹಾ ಸಂಭಾವಿತ. ಡಿವಿಜಿ ಅವರ ಉತ್ತರಪತ್ರಿಕೆಗಳನ್ನು ನೋಡಿದರು. ನಿಯಮಗಳನ್ನು ಬದಿಗೆ ಸರಿಸಿದರು. ಇಂಗ್ಲಿಷ್ ಎಲ್.ಎಸ್. ಪರೀಕ್ಷೆಗೆ ಅವಕಾಶ ಕೊಡಿಸಿದರು. 1900ರಲ್ಲಿ ಆ ಪರೀಕ್ಷೆಯಲ್ಲಿ ತೇರ್ಗಡೆ ಆಯಿತು.

ಓದು ಸಾಕು, ಮನೆತನದ ಕೆಲಸ ಏನಾದರೂ ಮಾಡಿಕೊಂಡಿರಲಿ ಎಂದು ಕೆಲವರ ವಿಚಾರ. ಹುಡುಗ ಬುದ್ಧಿಶಾಲಿ. ಮುಂದೆ ಓದಲಿ ಎಂದು ಇನ್ನು ಕೆಲವರ ಮತ. ಅಂತಹವರ ಪೈಕಿ ತಂದೆಯ ಸ್ನೇಹಿತ ರಸೂಲ್‌ಖಾನ್ ಅವರ ಒತ್ತಾಯ ಬಲ ಗೆದ್ದಿತು. ಅವರೇ ಹುಡುಗನನ್ನು ಬಂಡಿಯಲ್ಲಿ ಕೂಡಿಸಿಕೊಂಡು ರಾಬರ್ಟ್‌ಸನ್ ಪೇಟೆಗೆ ಕರೆದೊಯ್ದರು, ರೈಲು ಹತ್ತಿಸಿದರು. ಡಿವಿಜಿ ಮೈಸೂರು ತಲುಪಿದರು. ಮಹಾರಾಜಾ ಕಾಲೇಜಿಗೆ ಸೇರಿದ್ದ ಹೈಸ್ಕೂಲಿಗೆ ಸೇರಿದರು. ಹಾಸ್ಟಲಿನಲ್ಲಿ ವಾಸ್ತವ್ಯ.

ಬಾಪೂ ಸುಬ್ಬರಾಯರು ಉಪಾಧ್ಯಾಯರು, ಸಾಹಿತ್ಯಾಸಕ್ತರು. 'ವಿದ್ಯಾದಾಯಿನಿ' ಪತ್ರಿಕೆ ಹಾಗೂ ಕರ್ಣಾಟಕ ಗ್ರಂಥಮಾಲೆಯ (ಮ.ಅ. ರಾಮಾನುಜ ಅಯ್ಯಂಗಾರ್ಯರ) ಪುಸ್ತಕಗಳ ಪರಿಚಯ ಡಿವಿಜಿ ಅವರಿಗೆ ಲಭಿಸಿದ್ದು ಸುಬ್ಬರಾಯರಿಂದಲೇ. ಪುಸ್ತಕದ ಅಂಗಡಿಗೆ ಭೇಟಿ, ಪುಸ್ತಕದ ಆಕರ್ಷಣೆ. 'ಯೂನಿವರ್ಸಲ್ ಲೈಬ್ರರಿ' ಗ್ರಂಥಮಾಲೆಯ $2^1/_2$ ಆಣೆ ಬೆಲೆಯ ಪುಸ್ತಕಗಳ ಪರಿಚಯ, ಶೇಕ್ಸ್‌ಪಿಯರ್ ಅಧ್ಯಯನ ಪುಸ್ತಕಗಳ ಪರಿಚಯ, ಶೇಕ್ಸ್‌ಪಿಯರ್ ಅಧ್ಯಯನ, ಗಿಬ್ಬನ್ ಇತಿಹಾಸಕಾರನ ಅಧ್ಯಯನ, ಡಿ.ಟಿ.ಎ. ಪ್ರೆಸ್ (Graduate Trading Association) ಅವರ ವಿಜ್ಞಾನ, ಬಾಲ ಸಾಹಿತ್ಯಗಳ ಹೊಸ ಹೊಸ ಪುಸ್ತಕಗಳು, ಮೇಲಾಗಿ 'ಪಂಕ್ತಿಪಾವನ' ಮೈಸೂರು ವೆಂಕಟಕೃಷ್ಣಯ್ಯ (ತಾತಯ್ಯ) ಅವರಂಥ ಮಹಿಮಾನ್ವಿತ ನಾಯಕರ ದರ್ಶನ, ಭೇಟಿ, ಪರಿಚಯ ಹಾಗೂ ಅವರ ಪತ್ರಿಕಾಲಯಕ್ಕೆ ಭೇಟಿ—ತರುಣ ಡಿವಿಜಿ ಈ ವಾತಾವರಣಕ್ಕೆ ಹೊಂದಿಕೊಂಡರು.

ಬೆಳವಾಡಿ ದಾಸಪ್ಪ ಎಂಬ ಉಪಾಧ್ಯಾಯರು ಡಿವಿಜಿ ಅವರ ಭಾಷಾಸಾಹಿತ್ಯ ಜ್ಞಾನಕ್ಕೆ ಸಾಣೆ ಹಿಡಿದರು, ಹೊಳಪು ಕೊಟ್ಟರು.

ಪ್ರೀತಿಯ ಅಜ್ಜ ರಾಮಣ್ಣ, ಅಜ್ಜಿ ಸಾಕಮ್ಮ ಅವರುಗಳು ತೀರಿಕೊಂಡುದು, ಊರಿನಲ್ಲಿ ಪ್ಲೇಗಿನ ಹಾವಳಿ, ಹಿಂದೆಯೆ ಸಂಭವಿಸಿದ ಕಳವು, ಅತಿವೃಷ್ಟಿಯಿಂದ ಬೇಸಾಯಕ್ಕೆ ಆದ ಹಾನಿ, ಲೇವಾದೇವಿಯಲ್ಲಿ ನಷ್ಟ–ಎಲ್ಲ ಅನರ್ಥ ಪರಂಪರೆ ಡಿವಿಜಿಯವರ ಮೈಸೂರು ವಾಸ್ತವ್ಯವನ್ನು ಮೊಟಕುಮಾಡಿತು. ಶಾಲೆ ಬಿಟ್ಟು ಊರಿಗೆ ಮರಳಬೇಕಾಯಿತು. ಕುಟುಂಬದ ನೆಮ್ಮದಿ ಕಡಿಮೆ ಆಗಿತ್ತು. ಬಡತನ ಆವರಿಸಿತ್ತು.

ಸ್ವಲ್ಪ ಚೇತರಿಕೆ ಬಂದ ಮೇಲೆ ವ್ಯಾಸಂಗವನ್ನು ಮುಂದುವರಿಸುವ ಯೋಚನೆ ಬಂತು. ರಾಮದಾಸಪ್ಪನವರ ನೆರವಿನಿಂದ ಕೋಲಾರದಲ್ಲಿ ಊಟ, ವಸತಿಗೆ ಜಾಗ ಸಿಕ್ಕಿತು. ಆಶ್ರಯದಾತರ ಮನೆಯಲ್ಲಿ ದೇವರ ಪೂಜೆ, ಮಕ್ಕಳಿಗೆ ಪಾಠ. ಕೋಲಾರದ ಪ್ರೌಢಶಾಲೆಯಲ್ಲಿನ ವ್ಯಾಸಂಗ ಡಿವಿಜಿ ಅವರ ಇಂಗ್ಲಿಷ್ ಕನ್ನಡ ಎರಡರ ಜ್ಞಾನವನ್ನೂ ವೃದ್ಧಿಸಿತು. ಕನ್ನಡ ಉಪಾಧ್ಯಾಯ ಹನುಮಂತರಾಯರು ಕನ್ನಡ ಸಾಹಿತ್ಯದ ಆಳವಾದ ಅರಿವನ್ನು, ಆಸಕ್ತಿಯನ್ನು ಉಂಟುಮಾಡಿದರು. ಖ್ಯಾತ ಆಂಗ್ಲ ಲೇಖಕ ಆರ್.ಕೆ. ನಾರಾಯಣ್ ಅವರ ತಂದೆ ಆರ್.ವಿ. ಕೃಷ್ಣ ಸ್ವಾಮಯ್ಯರ್ ಇಂಗ್ಲಿಷ್ ಉಪಾಧ್ಯಾಯರು. ಠೀಕಾದ ವ್ಯಕ್ತಿತ್ವ, ಪ್ರಸನ್ನತೆ, ಗಾಂಭೀರ್ಯ, ಆಕರ್ಷಕ ಮಾತು, ಬೋಧನಕ್ರಮ. ಅವರ ಅಪಾರ ಸಾಹಿತ್ಯ ಭಂಡಾರವೆಲ್ಲ ಡಿವಿಜಿಯವರ ಮನಸ್ಸನ್ನು ತುಂಬಿಕೊಂಡಿತು. ಪಠ್ಯೇತರ ಪುಸ್ತಕಗಳಲ್ಲಿ ಕುತೂಹಲ, ಆಸಕ್ತಿ ಬೆಳೆಯಿತು. ಆಂಗ್ಲ ಇತಿಹಾಸ, ಸಾಹಿತ್ಯಗಳ ಸುಗ್ಗಿ ದೊರೆಯಿತು. ಮಹಾಕವಿಗಳ ಪರಿಚಯ ಆಯಿತು. ಮುಖ್ಯವಾಗಿ, ಲಾರ್ಡ್ ಮಾರ್ಲೇ ಬರೆದ ಗ್ಲಾಡ್‌ಸ್ಟನ್‌ನ ಜೀವನ ಚರಿತ್ರೆ ಅದೇ ತಾನೇ ಪ್ರಕಟವಾಗಿತ್ತು. ಅದರ ಬಗ್ಗೆ ಕೃಷ್ಣಸ್ವಾಮಿ ಅಯ್ಯರ್ ಹೇಳಿದ ಪರಿಚಯದ ಮಾತು ಡಿವಿಜಿ ಅವರ ಅಂತರಂಗದಲ್ಲಿ ದೀಪ ಬೆಳಗಿಸಿತು. ಇಂಥ ಮಹಾಪುರುಷರು, ಇಂಥ ಲೇಖಕರು ಇದಾರಲ್ಲ ಎಂಬ ಗೌರವ ಉಂಟಾಯಿತು. ಮಾರ್ಲೇ ಡಿವಿಜಿಯವರ ವಿಚಾರಯಾತ್ರೆಯಲ್ಲಿ ಕೈದೀವಿಗೆ ಆದದ್ದು ಮುಂದಿನ ಇತಿಹಾಸ.

ಕೋಲಾರದಲ್ಲಿ ವ್ಯಾಸಂಗದ ಒಂದು ವರ್ಷ ಕಳೆಯಿತು. ಕಾಯಿಲೆಯ ರೂಪದಲ್ಲಿ ಮತ್ತೆ ವಿಘ್ನ ಬಂತು. ಊರಿಗೆ ಬರಬೇಕಾಯಿತು. ಚೇತರಿಕೆ ಆದ ಮೇಲೆ ಮುಂದಿನ ವರ್ಷ ವಿದ್ಯೆ ಮುಂದುವರಿಯಿತು. ಹಾಸ್ಟಲಿನಲ್ಲಿ ವಸತಿ. ಎಸ್.ಎಸ್.ಎಲ್.ಸಿ. ಪರೀಕ್ಷೆ ಆಯಿತು. ತೇರ್ಗಡೆ ಆಗಲಿಲ್ಲ. ಕನ್ನಡ ಗಣಿತ ವಿಜ್ಞಾನಗಳು ಕೈಕೊಟ್ಟವು. ತಮಗೆ ಎರಡು ಸಲ ಡಬ್ಬಲ್ ಪ್ರಮೋಷನ್ ದೊರೆತದ್ದು, ಇಂಗ್ಲಿಷ್ ಮಾಧ್ಯಮದ ತೊಡಕು, ಮೈಸೂರಿನಲ್ಲಿ ಪಾಠಕ್ಕೆ ಒದಗಿದ

ಅಡಚಣೆ, ಮೈಸೂರಿನ ಪಾಠ–ಪ್ರವಚನಕ್ಕೂ, ಕೋಲಾರದ್ದಕ್ಕೂ ಹೊಂದಾಣಿಕೆ ಆಗದೆ ಹೋದದ್ದು ಇವು ತಮ್ಮ ವಿಫಲತೆಗೆ ಕಾರಣವಾಗಿರಬಹುದು ಎಂದಿದ್ದಾರೆ ಡಿವಿಜಿ. "ಒಟ್ಟಿನಲ್ಲಿ ನನ್ನ ಓದಿಗೆ ಬುಡ ಭದ್ರವಿರಲಿಲ್ಲ". ಆದರೇನು? ಅವರ ಜ್ಞಾನವೃಕ್ಷದ ಬೇರು ಆಳಕ್ಕೆ ಇಳಿದದ್ದು, ಕನ್ನಡ, ಇಂಗ್ಲಿಷ್, ಸಂಸ್ಕೃತ, ಭಾರತೀಯ, ವಿದೇಶೀಯ ಎಲ್ಲ ಮೂಲಗಳಿಂದಲೂ ಸಾರವನ್ನು ಹೀರಿಕೊಂಡು ಸೊಂಪಾಗಿ ಬೆಳೆದದ್ದು, ಒಳ್ಳೆಯ ರುಚಿಕಟ್ಟಾದ, ಪುಷ್ಟಿಯುತವಾದ ಫಲದ ಸುಗ್ಗಿಯನ್ನು ಕೊಟ್ಟಿದ್ದು ಒಂದು ಪವಾಡದಂಥ ಸಂಗತಿಯೆ.

ಕಾರಣ ಸ್ಪಷ್ಟ. ಡಿವಿಜಿ ಜ್ಞಾನ ಪಡೆದದ್ದು ಬಹುಪಾಲು ಶಾಲೆಯಿಂದ ಹೊರಗೇ. ಬದುಕೇ ಅವರಿಗೆ ಶಾಲೆ. ಅದೇ ಗುರು.

ಮನೆಯಲ್ಲಿ ಚಿಕ್ಕತಾತ ರಾಮಣ್ಣನವರಿಗಾಗಿ *ಶ್ರೀಕೃಷ್ಣರಾಜ ವಾಣೀವಿಲಾಸ* ಎಂಬ ಮಹಾಭಾರತ ಗ್ರಂಥವನ್ನು ಓದುತ್ತಿದ್ದರು. ಇತರ ಕಾವ್ಯಗಳ ಪಠನವೂ ನಡೆಯುತ್ತಿತ್ತು. ಕನ್ನಡ ಅರಿವು ಇದರಿಂದ ಹೆಚ್ಚಿತು.

ಸಂಸ್ಕೃತದ ಪರಿಚಯ ಮನೆಯಲ್ಲೇ ಪ್ರಾರಂಭ. ವೈದಿಕ ಮನೆತನವಾದ್ದ ಕಾರಣ ಮನೆಯಲ್ಲಿ ಮಂತ್ರ ಸ್ತೋತ್ರಗಳ ಮೂಲಕ ಅಲ್ಪಸ್ವಲ್ಪ ಸಂಸ್ಕೃತ ಇದ್ದೇ ಇತ್ತು. ಕಾಶೀ ರಾಘವೇಂದ್ರಾಚಾರ್ಯರಲ್ಲಿ ಪಾಠ, ಶಬ್ದಮಂಜರಿ, ರಾಮಾಯಣ ಇತ್ಯಾದಿ. ಮೊದಲು ಸಂಸ್ಕೃತ ಶಬ್ದ ಪಾಠ ಒಂದು ಪೀಡೆಯೆ ಎನಿಸಿತ್ತು. ಅದರಿಂದಾಗಿ ತಂದೆಯಿಂದ ಬಯ್ಗುಳ, ಏಟು ಎಲ್ಲ ಆಗುತ್ತಿತ್ತು. ಆದರೂ ಡಿವಿಜಿಯವನ್ನು ಸಂಸ್ಕೃತ ಬಿಡಲಿಲ್ಲ. ಶಾಲೆಯಲ್ಲಿ ಕ್ರಮವಾಗಿ ಅಧ್ಯಯನ ಆಗಲಿಲ್ಲ. ಆದರೆ ಹೊರಗೆ ಪಾಠ ಬೇಕಾದಷ್ಟು ಆಯಿತು. ಮುಂದೆ ಬೆಂಗಳೂರಿಗೆ ಬಂದ ಮೇಲೆ ಅಲ್ಲಿ ಇಲ್ಲಿ ಉದ್ಯೋಗಕ್ಕೆ ಪರದಾಡುವಾಗಲೂ, ಇಲ್ಲವೇ ಸಾರ್ವಜನಿಕ ಓಡಾಟಗಳ ನಡುವೆಯೂ ಅವರು ಸಂಸ್ಕೃತ ಕಾವ್ಯಶಾಸ್ತ್ರಗಳ ಕಲಿಕೆಯನ್ನು ಮುಂದುವರಿಸಿದರು. ಅನುಕೂಲ ಇಲ್ಲವಾದರೆ ಏನು, ಕಾಣುವ ಕಣ್ಣು, ಅರಿಯುವ ಆಸೆ, ಮಥಿಸುವ ಮನ ಇದ್ದವಲ್ಲ.

ಬೆಂಗಳೂರಿನಲ್ಲಿ ಆಗ ಸೆಂಟ್ರಲ್ ಕಾಲೇಜಿನಲ್ಲಿ ಸಂಸ್ಕೃತ ಪಂಡಿತರು ಛಪ್ಪಲ್ಲಿ ವಿಶ್ವೇಶ್ವರ ಶಾಸ್ತ್ರಿಗಳು. ಅವರ ಬಳಿ ಸ್ವಲ್ಪ ಕಾವ್ಯಪಾಠ ನಡೆಯಿತು. ಹಾನಗಲ್ಲು ವಿರೂಪಾಕ್ಷ ಶಾಸ್ತ್ರಿಗಳು ಆಗಿನ ಮಹಾ ವಿದ್ವಾಂಸರು—ತರ್ಕ, ವೇದಾಂತಶಾಸ್ತ್ರ ಪಂಡಿತರು, ಸದಾಚಾರ ಸಂಪನ್ನರು, ಪ್ರಾಮಾಣಿಕರು. ಬಿ. ವಿ. ಲಕ್ಷ್ಮಣರಾವ್ ಎಂಬ ಗೆಳೆಯರ ಮೂಲಕ ಬೆಂಗಳೂರಿನ ಶಂಕರಮಠದಲ್ಲಿ ಅವರ ಪರಿಚಯ ವಾಯಿತು. ಶಾಸ್ತ್ರಿಗಳ ಮೂಲಕ *ಅದ್ವೈತಸಿದ್ಧಿ, ಜಾಗದೀಶೀ, ಗಾದಾಧರೀ*

ಮುಂತಾದ ತರ್ಕಗ್ರಂಥಗಳು, 'ತತ್ತ್ವಕೌಸ್ತುಭ', 'ಶಬ್ದಕೌಸ್ತುಭ'ಗಳು, ಉಪನಿಷತ್ ಭಾಷ್ಯಗಳು, ಸೂತ್ರ ಭಾಷ್ಯಗಳು ಎಲ್ಲದರ ಪರಿಚಯ ಆಯಿತು. ಶಾಸ್ತ್ರಿಗಳು 'ವಿದ್ಯಾನಿಧಿ', 'ತರ್ಕಪಂಚಾನನ', 'ಮಹಾಮಹೋಪಾಧ್ಯಾಯ' ಮುಂತಾದ ಬಿರುದಾಂಕಿತರು. ಮುಂದೆ ಸಂನ್ಯಾಸವನ್ನೇ ಸ್ವೀಕರಿಸಿದರು.

1906ರ ವೇಳೆಗೆ ಡಿವಿಜಿಯವರ ವಿದ್ಯೆ "ಪಾರವನ್ನು" ಮುಟ್ಟಿತ್ತು. ಮುಂದಿನ ಜ್ಞಾನಸಂಪಾದನೆ ಎಲ್ಲವೂ ಸ್ವಾಧ್ಯಾಯದಿಂದ, ಗೆಳೆಯರ ಸಹವಾಸದಿಂದ, ವಿದ್ವಾಂಸರ ಪರಿಚಯದಿಂದ, ಪುಸ್ತಕ–ಪತ್ರಿಕೆಗಳಿಂದ, ಮೇಲಾಗಿ ಬದುಕಿನ ಹೋರಾಟದಿಂದ.

ಹೇಳಿಕೊಳ್ಳುವಂಥ ಮಹಾಗುರು ತಮಗೆ ದೊರೆಯಲಿಲ್ಲ ಎಂದು ಡಿವಿಜಿ ವ್ಯಥೆ ಪಟ್ಟದ್ದೂ ಉಂಟು. ಆದರೆ ಎಳೆತನದಿಂದ ತಮಗೆ ಅಷ್ಟಿಷ್ಟಾದರೂ ಅರಿವನ್ನು ಇತ್ತ, ಜ್ಞಾನದೇಗುಲದ ಬಾಗಿಲಿಗೆ ಕರೆದೊಯ್ದ ಹಲವಾರು ಗುರುಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡಿದ್ದಾರೆ. ತಮ್ಮ ಕೊನೆಗಾಲದಲ್ಲಿ ಬರೆದ 'ಜ್ಞಾಪಕ ಚಿತ್ರಶಾಲೆ'ಯಲ್ಲಿ ಈ ಗುರುಸ್ಮರಣೆ, ಕೃತಜ್ಞತೆಗಳ ಅನೇಕ ಸಂದರ್ಭಗಳು ಕಾಣಸಿಗುತ್ತವೆ.

ಅಂತೂ ತಮ್ಮ 18–19ರ ಪ್ರಾಯದ ವೇಳೆಗೆ ಡಿವಿಜಿ ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಸಾಕಷ್ಟು ಮಟ್ಟಿನ ಜ್ಞಾನವನ್ನೂ, ಸಾಮರ್ಥ್ಯವನ್ನೂ ಪಡೆದುಕೊಂಡಿದ್ದರು; ಬಹುಪಾಲು ಸ್ವಪ್ರಯತ್ನದಿಂದ. ಡಿವಿಜಿ ಯಾವ ಕಾಲೇಜನ್ನೂ ಕಾಣಲಿಲ್ಲ. ಯಾವ ಪಂಡಿತ ಪರೀಕ್ಷೆಯನ್ನೂ ಮಾಡಲಿಲ್ಲ. ಆದರೆ ಅವರ ಕೃತಿಗಳು ಕಾಲೇಜುಗಳಲ್ಲಿ ಉನ್ನತ ವ್ಯಾಸಂಗಕ್ಕೆ ಪಠ್ಯಗಳಾದವು. ಅವರು ಪಂಡಿತ ಪರೀಕ್ಷೆಗಳಿಗೆ ಪರೀಕ್ಷಕರಾದರು, ಜ್ಞಾನಿ ಎನಿಸಿಕೊಂಡರು.

ತನ್ನ ಗುರುಗಳು ಇಂಥವರು ಎಂದು ಡಿವಿಜಿ ಹೇಳಿಕೊಂಡಿಲ್ಲವಾದರೂ, ಒಬ್ಬ ಮಹನೀಯರನ್ನು ಮಾತ್ರ ತಮ್ಮ 'ಆತ್ಮಗುರು' ಎಂದು ಭಾವಿಸಿದ್ದರು. ಅವರು ಎನ್. ನರಸಿಂಹಮೂರ್ತಿ ಎಂಬುವರು. ಆತ್ಮಗುರು ಎಂದರೆ 'ಇಷ್ಟಗುರು' ಎಂಬ ಅರ್ಥದಲ್ಲಿ ಭಾವಿಸಿದ್ದರು. 1907–08ರ ಸುಮಾರಿನಲ್ಲಿ ಅವರ ಪರಿಚಯ ಆದುದು. ಆತ ಪ್ರಸಿದ್ಧರಾದ ಎನ್.ಎಸ್.ಸುಬ್ಬರಾಯರ ಅಣ್ಣ, ಸರ್ಕಾರಿ ಉದ್ಯೋಗಿ, ಸಾಹಿತ್ಯ ಪ್ರೇಮಿ, ಅಭ್ಯಾಸಿ. ಅವರಿಂದ ಡಿವಿಜಿಗೆ ಅನೇಕ ವಿಧವಾಗಿ ನೆರವು ದೊರೆಯಿತು. ಪತ್ರಿಕೆಯ ನಿರ್ವಹಣೆಯಲ್ಲಿ ನೆರವು, ಅಂದಿನ ಹಲವಾರು ಮಹನೀಯರ ವಿದ್ವಾಂಸರ ಮಿತ್ರಗೋಷ್ಠಿಯ ಪರಿಚಯ, ಆಂಗ್ಲಸಾಹಿತ್ಯದ ಘಟಾನುಘಟಿಗಳ ಕೃತಿಗಳ ಪರಿಚಯ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಗ್ರಂಥಗಳ

ಅಭ್ಯಾಸ, ಅಮೆಚೂರ್ ನಾಟಕ ಮಂಡಲಿಯ ಸ್ನೇಹ, ಸಂಗೀತಕ್ಕೆ ಕಿವಿಗೊಡುವ ರಸಿಕತೆ, ಸಾರ್ವಜನಿಕ ಕೆಲಸದ ಅನುಭವಗಳು, ವಿಮರ್ಶನಾ ದೃಷ್ಟಿ, ಸರಳ ಜೀವನ—ಇದೆಲ್ಲ ಎನ್. ನರಸಿಂಹಮೂರ್ತಿಗಳ ಬಳುವಳಿ. ಅವರ ಬಗ್ಗೆ ಡಿವಿಜಿ ಅವರಿಗೆ ತುಂಬಾ ಗೌರವ. "ನರಸಿಂಹಮೂರ್ತಿಗಳು ನನ್ನ ಬಡಜೀವನದಲ್ಲಿ ಬೆಳಕು ತೋರಿಸಿದ ಮಹಾತ್ಮರು........ ನನ್ನ ಬುದ್ಧಿವೃತ್ತಿಯನ್ನು ನನ್ನ ಯೋಗ್ಯತೆಯ ಪರಿಮಿತಿಗೆ ಒಳಪಟ್ಟು ತಿದ್ದಿ ಪರಿಷ್ಕಾರ ಪಡಿಸಿದವರು..... ಸೌಜನ್ಯ, ಉದಾತ್ತ ಮನಸ್ಕತೆ, ಪ್ರಾಮಾಣಿಕತೆ– ಈ ಗುಣಗಳ ವಿಷಯದಲ್ಲಿ ನನಗೆ ಆದರ್ಶಪ್ರಾಯರಾಗಿ ಗುರು ಸ್ಥಾನದಲ್ಲಿರುವ ಆ ಮಹನೀಯರಿಗೆ ಪುನಶ್ಚ ಭೂಯೋಽಪಿ ನಮೋ ನಮಸ್ತೇ'' ಎಂದಿದ್ದಾರೆ.

# 5. ಉದ್ಯೋಗ

ಆ ಕಾಲದ ಪದ್ಧತಿಯಂತೆ ಡಿವಿಜಿ ಅವರಿಗೆ 16 ಅಥವಾ 17ನೆಯ ವಯಸ್ಸಿಗೇ ಮದುವೆ ಆಯಿತು. ಹಿರಿಯರು ಗೊತ್ತು ಮಾಡಿದ ಸಂಬಂಧ. ಕನ್ಯೆ ಭಾಗೀರಥಮ್ಮ. ಸಂಸಾರ ಗಂಟು ಬಿತ್ತು. ಸಂಪಾದನೆ ಮಾತ್ರ ಇರಲಿಲ್ಲ. ಹೈಸ್ಕೂಲಿನಲ್ಲಿ ಓದುತ್ತ ಇರುವಾಗಲೇ ಚಿಂತೆ ಹತ್ತಿತ್ತು. ಮನೆಯ ಪರಿಸ್ಥಿತಿಯೂ ಚೆನ್ನಾಗಿರಲಿಲ್ಲ ಎನ್ನುವುದನ್ನು ಆಗಲೇ ನೋಡಿದ್ದೇವೆ.

ಮಗ ಸರ್ಕಾರಿ ನೌಕರಿ ಹಿಡಿಯಬೇಕು, ಲಾಯರ್ ಆಗಬೇಕು ಇತ್ಯಾದಿ ಆಸೆ ತಂದೆಯವರಿಗೆ. ಡಿವಿಜಿಗೆ ತಾಪೇದಾರಿ ಎಂದರೆ ವಾಕರಿಕೆ. ತನ್ನ ಕಾಲ ಮೇಲೆ ತಾನು ನಿಲ್ಲುವ ಹಂಬಲ. ಮೊದಲು ಕೆಲವು ದಿನ ಬದಲಿ ಶಾಲಾ ಮಾಸ್ತರರ ಕೆಲಸ ಮಾಡಿದರು. ಮನಸ್ಸು ಮಾಡಿದ್ದರೆ ಅದೇ ಖಾಯಂ ಆಗುತ್ತಿತ್ತೇನೊ. ಅವರ ಪಾಠಪ್ರವಚನ ಆಗಿನ ಜಿಲ್ಲಾಧಿಕಾರಿ ಸರ್ ಕೆ.ಪಿ. ಪುಟ್ಟಣ್ಣ ಶೆಟ್ಟರ ಗಮನ ಸೆಳೆದಿತ್ತು. ಮೆಚ್ಚುಗೆ ಪಡೆದಿತ್ತು. ಇದರ ಸದುಪಯೋಗ ಪಡೆದು, ಮಗನಿಗೆ ಖಾಯಂ ನೌಕರಿ ಕೊಡಿಸಲು ತಂದೆಗೆ ತವಕ. ಶೆಟ್ಟರನ್ನು ಹೋಗಿ ಕಾಣಲು ಮಗನನ್ನು ಒತ್ತಾಯಿಸಿದರು. ಒಲ್ಲದ ಮನಸ್ಸಿನಿಂದ ಡಿವಿಜಿ ಅರ್ಜಿ ಬರೆದರು. ಜಿಲ್ಲಾಧಿಕಾರಿಗಳನ್ನು ನೋಡಲು ಹೋಗುವಾಗ ತಲೆಗೆ ರುಮಾಲು ಧರಿಸಿರಬೇಕು. ಡಿವಿಜಿ ಅವರ ತಲೆಯ ಮೇಲಿದ್ದುದು ಟೋಪಿ. ರುಮಾಲಿಗೆ ಅವರು ಒಪ್ಪರು. ತಕರಾರು ಬಿತ್ತು. ಕೊನೆಗೆ ಮಧ್ಯಸ್ಥಿಕೆ ಆಯಿತು. ಜಿಲ್ಲಾಧಿಕಾರಿಗಳ ಬಿಡಾರದವರೆಗೂ ಟೋಪಿಯಲ್ಲೇ ಹೋಗುವುದು, ಅಲ್ಲಿ ಒಂದು ಕ್ಷಣ ರುಮಾಲು ಧರಿಸಿ ಸಾಹೇಬರನ್ನು ನೋಡುವುದು ! ಒಂದು ಕೈಯಲ್ಲಿ ರುಮಾಲು ಒಂದರಲ್ಲಿ ಅರ್ಜಿ ಹಿಡಿದು ಹೊರಟರು. ಆದರೆ ಸೆಟ್ಟಿ ಸಿಂಗಾರ ಆಗುವ ವೇಳೆಗೆ ಪಟ್ಟಣ ಸೂರೆ ಹೋಗಿತ್ತು ! ಸಾಹೇಬರ ಸಮಯ ಮೀರಿತ್ತು. ವಿಶ್ರಾಂತಿಗೆ ತೆರಳಿದ್ದರು. ಭೇಟಿ ಆಗಲಿಲ್ಲ. ಪ್ರಸಂಗ ಮುಗಿಯಿತು. ಗುಂಡಪ್ಪನವರಿಗೇನೂ ನಿರಾಶೆ ಆಗಲಿಲ್ಲ. ಆದರೆ ತಂದೆಯ ಬೈಗುಳ ತಡೆದುಕೊಳ್ಳುವುದು ಭಾರಿ ಕಷ್ಟವಾಯಿತು.

ಹಿರಿಯಜ್ಜ ಲಾಯರ್ ಶೇಷಗಿರಿಯಪ್ಪನವರ ಪುಸ್ತಕ ಸಂಗ್ರಹವನ್ನು ನೋಡುವಾಗ ಡಿವಿಜಿಗೆ ಒಂದು ಮಾತು ಕಾಣಿಸಿತು "A good lawyer is a bad neighbour" (ಒಳ್ಳೆ ವಕೀಲ ಕೆಟ್ಟ ನೆರೆಹೊರೆ). ಮಾತು ಮನಸ್ಸನ್ನು ನಾಟಿತು. ಲಾಯರಿ ಕೆಲಸ ಸುತರಾಂ ಕೂಡದು ಎಂದು ನಿಶ್ಚಯವಾಯಿತು. ಲಾಯರ್ ಆದರೆ, ತಾತನ ಹಾಗೆ ಸಂಪಾದಿಸಿ ಮನೆಯ ಬಡತನ ನೀಗುತ್ತಾನೆ ಎಂಬ ತಂದೆಯ ಆಸೆ ಪೊಳ್ಳಾಯಿತು. "ನನ್ನ ತಾತ ಅದೃಷ್ಟಶಾಲಿ. ತಾತನ ಅದೃಷ್ಟ ಮೊಮ್ಮಗನಿಗೆ ದಾಯವಾಗಿ ಬರುವುದಿಲ್ಲ. ನನ್ನ ಜಾತಕದಲ್ಲಿ ಫಕೀರತನ ಬರೆದಿದೆ'' ಎಂದಿದ್ದಾರೆ ಡಿವಿಜಿ.

ಮದರಾಸಿನ ಸ್ಕೂಲ್ ಆಫ್ ಆರ್ಟ್ಸ್ ಸಂಸ್ಥೆಯಲ್ಲಿ ಷೀಟ್‌ಮೆಟಲ್ ಕೈಗಾರಿಕೆಗೆ ತರಬೇತು ಪಡೆಯುತ್ತೇನೆ ಎಂದು ತಂದೆಯವರಿಗೆ ತಿಳಿಸಿದರು. ಕ್ಷೌರದ ಬಟ್ಟಲು ತಯಾರಿಸುವ ಈ ಕೆಲಸ ನಮಗೆ ಕೂಡದು ಎಂದರು ತಂದೆ. ಕಂಪನಿ ಏಜೆಂಟರಾಗುವ ಯೋಚನೆ ಮಾಡಿದರು ಡಿವಿಜಿ. ಗೆಳೆಯರು ಬೇಡ ಎಂದು ಹಿಮ್ಮೆಟ್ಟಿಸಿದರು. ಅಂಚೆ ಇಲಾಖೆ ಸೇರಲು ನೋಡಿದರು. ಪಟೇಲಗಿರಿಗೆ ಆಸೆ ಪಟ್ಟರು. ಬಣ್ಣದ ಕಾರ್ಖಾನೆ ನಡೆಸಲು ಹೊರಟರು. ಕೈ ಖಾಲಿ ಮಾಡಿಕೊಂಡರು. ಪೌರೋಹಿತ್ಯದ ಕಡೆ ಮನ ಓಡಿತು. ಚಿಕ್ಕತಾತ ರಾಮಣ್ಣನವರಂತೆ ಮಸಿ ಕಸಬಿಗೆ ಕೈ ಹಾಕಿದರು. ಛಾಪಾ ಕಾಗದ ಬಿಕರಿ, ಅರ್ಜಿ ಪತ್ರ ವಗೈರೆ ಬರೆಯುವ ಬಿಕ್ಕಲಂ ಕೆಲಸ. ಕೈ ಹತ್ತಲಿಲ್ಲ. 1905ರ ಸುಮಾರಿಗೆ ಕೆ.ಜಿ.ಎಫ್.ನಲ್ಲಿ ಒಂದು ಸೋಡಾ ಕಾರ್ಖಾನೆಯಲ್ಲಿ ಗುಮಾಸ್ತಗಿರಿ ಮಾಡಿದರು. ಬಿಡುವಿಲ್ಲದ ದುಡಿತ. ಸಾಕಾಯಿತು.

ಕೊನೆಗೆ ಅದೃಷ್ಟ ಹುಡುಕಿಕೊಂಡು ಬೆಂಗಳೂರಿಗೆ ಬಂದರು. 1905ರ ಸುಮಾರು. ಚಿಕ್ಕಮಾವನ ಮನೆಯಲ್ಲಿ ಬಿಡಾರ. ಕೆಲಸ ಹುಡುಕಿಕೊಂಡು ದಿನವೂ ಮುಂಜಾನೆಯಿಂದ ಸಂಜೆವರೆಗೆ ಅಲೆತ. ಬರಿಗಾಲಿನ ಅಲೆತ. ಕಾಲೆಲ್ಲ ಹೊಪ್ಪಳ. ಕಣ್ಣಲ್ಲಿ ನೀರು ! ತಮ್ಮ ಸ್ಥಿತಿ–ಅಲ್ಲ ಗತಿಯನ್ನು–ಹೀಗೆ ಬಣ್ಣಿಸಿದ್ದಾರೆ—

"ಒಂದೊಂದು ಕಛೇರಿಗೂ ಹೋಗಿ ಹಲ್ಲು ಕಿರಿದು ಬೇಡಿದ್ದೇನೆ. ಒಂದೊಂದು ಮಳಿಗೆಗೂ ಒಂದೊಂದು ಅಂಗಡಿಗೂ ಹೋಗಿ ಬೇಡಿದ್ದೇನೆ. ಗವರ್ನಮೆಂಟ್ ಪ್ರೆಸ್ಸಿನ ಪಕ್ಕದಲ್ಲಿದ್ದ ಇಂಡಸ್ಟ್ರೀಸ್ ವರ್ಕ್‌ಷಾಪಿನ ಮುಂದುಗಡೆ ಗೋಡೆಗೆ ಮೊಳೆ ಹೊಡೆದು ಭದ್ರಪಡಿಸಿದ್ದ ಬೋರ್ಡಿನ ಮೇಲೆ 'No vacancy' (ಕೆಲಸ ಖಾಲಿ ಇಲ್ಲ) ಎಂಬುದು ದೊಡ್ಡ ದೊಡ್ಡ ಬಣ್ಣದ ಅಕ್ಷರಗಳಲ್ಲಿ ಶಿಲಾ ಶಾಸನದಂತೆ ಕಾಣುತ್ತಿತ್ತು. ಮಿಕ್ಕ ಆಫೀಸುಗಳವರೂ ಹಾಗೆಯೇ ಮಾಡಿದ್ದಿದ್ದರೆ ನನಗೆ ದೇಹ ಶ್ರಮ ಕೊಂಚ ಕಡಿಮೆಯಾಗುತ್ತಿತ್ತು. ಅನೇಕ ದೇವರುಗಳಿಗೆ ಕೈ ಮುಗಿದೆ. ವಿಧಿ ನನಗೆ ಗೊತ್ತು

ಮಾಡಿದ್ದ ಜಾಗ ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯಲ್ಲಿತ್ತು. ಆಗ ನನಗೆ ಎಲ್ಲಿಯಾದರೂ ಮಾಹೆಯಾನ 12–15 ರೂಪಾಯಿ ತಲಬಿನ ಚಾಕರಿ ದೊರೆತಿದ್ದಿದ್ದರೆ ಎಷ್ಟೋ ನೆಮ್ಮದಿಯಾಗಿರುತ್ತಿದ್ದೆನೆಂದು ಈಗಲೂ (1928) ಅನ್ನಿಸುತ್ತದೆ. ವಾಸ್ತವವಾಗಿ ಜಟಕಾಗಾಡಿಗೆ ಬಣ್ಣ ಬಳಿಯುವ ಒಂದು ಸಣ್ಣ ಕಾರ್ಖಾನೆಯಲ್ಲಿ 10–12 ರೂಪಾಯಿ ತಲಬಿನ ಮೇಲೆ ಮೂರು ನಾಲ್ಕು ತಿಂಗಳು ಗುಮಾಸ್ತನಾಗಿದ್ದೆ. ಆ ಕಾರ್ಖಾನೆಯ ಮಾಲೀಕನಿಗೆ ಬೇರೆ ಐಶ್ವರ್ಯ ಬಂದದ್ದರಿಂದ ಈ ಸಣ್ಣ ವ್ಯಾಪಾರವನ್ನು ಮುಚ್ಚಿದ. ನಾನು ಮತ್ತೆ ಬೀದಿಯ ಪಾಲಾದೆ.''

ಕನ್ನಡ ಜನಜೀವನಕ್ಕೆ ಮೆರಗು ಕೊಡುವುದು ಡಿವಿಜಿಯವರ ಪಾಲಿಗೆ ಇದ್ದ ದೆಸೆ. ಜಟಕಾಗೆ ಬಣ್ಣ ಬಳಿಯುವ ಅಂಗಡಿ ಕೆಲಸದಲ್ಲಿ ನಿಂತೀತೇ ?

ಆದರೆ ಆ ಕೆಲಸ ಡಿವಿಜಿಯವರಿಗೆ ಇನ್ನೊಂದು ದಾರಿಯನ್ನು ತೋರಿಸಿತ್ತು. ಆರ್ಕಾಟು ಶ್ರೀನಿವಾಸಾಚಾರ್ ರಸ್ತೆಯ ಆ ಕಾರ್ಖಾನೆಯ ಸಮೀಪದಲ್ಲೆ ನವರತ್ನ ಪ್ರೆಸ್. ಅಲ್ಲಿಗೆ ಡಿವಿಜಿ ಕಾಲಿಡುವುದಾಯಿತು. ಬರೆಹದ ನೆವದಲ್ಲಿ. 1906. ಬೆಂಗಳೂರಿಗೆ ಸ್ವಾಮಿ ಅಭೇದಾನಂದರು ದಯಮಾಡಿಸಿದ್ದರು. ಭಾರಿ ಸಂಭ್ರಮ. ಅದೇ ತಾನೇ ಸ್ವಾಮಿ ವಿವೇಕಾನಂದರು ಅಮೆರಿಕಾದಲ್ಲಿ ಹೊಡೆದ ದಿಗ್ವಿಜಯದ ಮೊಳಗು ಎಲ್ಲೆಲ್ಲೂ. ಇಂಗ್ಲಿಷಿನಲ್ಲಿ ಪದ್ಯ ಬರೆಯುವುದು ಆ ಕಾಲದಲ್ಲಿ ಅನೇಕರ "ಗೂಢವ್ಯಾಧಿ''. ಡಿವಿಜಿ ಅವರೂ ಸ್ವಾಮಿ ಅಭೇದಾನಂದರ ಗೌರವಾರ್ಥ ಇಂಗ್ಲಿಷ್ ಪದ್ಯ ಹೊಸೆದರು. ಅದನ್ನು ಅಚ್ಚು ಮಾಡಿಸಲೆಂದು ನವರತ್ನ ಪ್ರೆಸ್ಸಿಗೆ ಹೋದರು. ಪರಿಚಯ ಬೆಳೆಯಿತು. ಅಲ್ಲಿ 'ಸೂರ್ಯೋದಯ ಪ್ರಕಾಶಿಕಾ' ಎಂಬ ಕನ್ನಡ ವಾರಪತ್ರಿಕೆ ಅಚ್ಚಾಗುತ್ತಿತ್ತು. ದಿವಾನ್ ವಿ.ಪಿ. ಮಾಧವರಾಯರ ದರ್ಬಾರು. ವಿರೋಧವನ್ನು ಸಹಿಸುತ್ತಿರಲಿಲ್ಲ. "ಬೆಂಗಳೂರು, ಕೋಲಾರ ಜಿಲ್ಲೆಗಳನ್ನು ಮದರಾಸಿಗೆ ಕೊಟ್ಟು, ಬಳ್ಳಾರಿ, ಅನಂತಪುರಗಳನ್ನು ಪಡೆಯಲು ದಿವಾನರು ಹವಣಿಸುತ್ತ ಇದ್ದಾರೆ'' ಎಂಬ ಸುದ್ದಿ ಆ ಪತ್ರಿಕೆಯಲ್ಲಿ ಬಂದಿತ್ತು. ಸರ್ಕಾರದಿಂದ ಪತ್ರಿಕೆಗೆ ಛಾಟಿಏಟಿನ ನೋಟೀಸು ಬಂತು. ಅದಕ್ಕೆ ಸೂಕ್ತ ಉತ್ತರ ಬರೆದುಕೊಡಲು ಡಿವಿಜಿಗೆ ಆಹ್ವಾನ ಬಂತು. ಆ ಕೆಲಸ ಆಯಿತು. ಪರಿಣಾಮ ಕೈಗೆ ಲೇಖನಿ ಬಂತು. ಆಗಿನ್ನೂ ಸಂಸಾರ ಹೂಡಿರಲಿಲ್ಲ. ದಿನವೂ ಬೆಳಗಿನಿಂದ ಸಂಜೆಯವರೆಗೆ ಪ್ರೆಸ್ಸಿನಲ್ಲಿ ಬೈಠಕ್ಕು. ಎದುರು ಹೋಟೆಲಿನಿಂದ ಘಮಘಮಿಸುವ ದೋಸೆ, ಪಕೋಡಗಳ ಉಪಾಹಾರ. ಕೈಗೆ ತಿಂಗಳಿಗೆ 20 ರೂಪಾಯಿ. ನಾಲ್ಕು ಮುಖ್ಯ ಲೇಖನ, ನಾಲ್ಕು ಕಾಲಂ ಸಣ್ಣ ಲೇಖನ ಒದಗಿಸುವುದು ಕೆಲಸ.

ಪತ್ರಿಕಾ ವ್ಯವಸಾಯ ಆರಂಭ ! ಸಂಪಾದನೆ ಕಡಿಮೆ ಆದರೂ, ಹೊಟ್ಟೆಪಾಡಿಗೆ ಒಂದು ದಾರಿ! ದೊಡ್ಡ ರೀತಿಯ ಸಾರ್ವಜನಿಕ ಕಾರ್ಯಕ್ಕೇ ಹೆದ್ದಾರಿ !

ಅಂದು ಹಾಗೆ ಕೈಗೆ ಬಂದ ಲೇಖನಿಯೆ ಡಿವಿಜಿ ಅವರ ಬದುಕಿನ ಉದ್ದಕ್ಕೂ ದಾರಿದೀಪ ಆಯಿತು. ಮುಂದೆ ದಿವಾನ್ ವಿಶ್ವೇಶ್ವರಯ್ಯನವರ ಕಾಲದಲ್ಲಿ, ಮಿರ್ಜಾರ ಕಾಲದಲ್ಲಿ ಸರ್ಕಾರಿ ಕೆಲಸಗಳ ಹಲವಾರು ಆಹ್ವಾನ ಬಂದವು. ಯಾವ ತಾಪೇದಾರಿಗೂ ಡಿವಿಜಿ ಒಪ್ಪಲಿಲ್ಲ. ಸುಖಜೀವನ, ಸುಭದ್ರ ಜೀವನದ ಉದ್ಯೋಗದ ಹಾದಿಯನ್ನು ದೂರೀಕರಿಸಿದರು. ಬರೆದೇ ಬದುಕುವ ಕಷ್ಟದ ಕಾಡುಹಾದಿಯನ್ನು ಹಿಡಿದರು.

# 6. ಪತ್ರಿಕೆಯ ಪಾಡು

ಗಾಂಧೀಜಿ ತಮ್ಮ ಒಂದು ವಿಚಾರಣೆಯಲ್ಲಿ ತಮ್ಮನ್ನು 'ನೇಕಾರ' ಎಂದುಕೊಂಡಿದ್ದರು. ಡಿವಿಜಿ 'ತಾವು ಪತ್ರಕರ್ತ' ಎಂದುಕೊಳ್ಳುತ್ತಿದ್ದರು. ಪತ್ರಿಕಾ ವ್ಯವಸಾಯ ಅವರ ಬದುಕಿನುದ್ದಕ್ಕೂ ನಡೆಯಲಿಲ್ಲ, ಬಿಡಲೂ ಇಲ್ಲ. ಅದರಿಂದ ಹೊಟ್ಟೆಪಾಡು ಪೂರೈಸಿದ್ದೂ ಇಲ್ಲ. ಅದೊಂದು ವ್ರತ, ಒಂದು ಕರ್ತವ್ಯ. ದೇಶಸೇವೆಯ ಒಂದು ದಾರಿ.

ಆದರೆ ಡಿವಿಜಿ ಲೇಖನಿ ಹಿಡಿದದ್ದು ಇಂಥ ಯಾವ ಘನೋದ್ದೇಶದಿಂದಲೂ ಅಲ್ಲ. ಹೊಟ್ಟೆಪಾಡಿಗೆ ಒಂದು ಕೆಲಸವನ್ನು ಅರಸುತ್ತ ಹೊರಟಾಗ ಕಾಲಿಗೆ ತೊಡರಿದ್ದು ಈ ಬಳ್ಳಿ.

'ನವರತ್ನ ಪ್ರೆಸ್'ಗೆ ಕಾಲಿಟ್ಟ ಸಂದರ್ಭವನ್ನು ನೋಡಿದೆವು. ಆ ಗಳಿಗೆ ಎಂಥದೋ ಏನೊ, ನೆಂಟು ಬಲವಾದ ಗಂಟೇ ಆಯಿತು. ಪತ್ರಿಕಾವೃತ್ತಿ ಜೀವನ ಧರ್ಮವೇ ಆಯಿತು.

'ಸೂರ್ಯೋದಯ ಪ್ರಕಾಶಿಕಾ' ಪತ್ರಿಕೆಗೆ ಲೇಖನ ಬರೆಯುವುದರ ಜೊತೆಗೇ ಬೆಂಗಳೂರು ದಂಡಿನ ಪ್ರದೇಶದ 'ಈವಿನಿಂಗ್ ಮೇಲ್' ಎಂಬ ಇಂಗ್ಲಿಷ್ ಪತ್ರಿಕೆಯ ಸಂಪರ್ಕವೂ ಒದಗಿತು. ಇಲ್ಲಿ ಕನ್ನಡ ಬರೆಹ. ಅಲ್ಲಿ ಇಂಗ್ಲಿಷ್. ವಾರಕ್ಕೆ ಎರಡು ಇಂಗ್ಲಿಷ್ ಲೇಖನ. ಎಂಟು ರೂಪಾಯಿ ಗಳಿಕೆ.

ಹೀಗೆ ಪತ್ರಿಕಾವ್ಯವಸಾಯಕ್ಕೆ ತೊಡಗಿದಾಗ ಡಿವಿಜಿಗೆ ಇದ್ದ ಸಾಮರ್ಥ್ಯ, "ಕುರುಡು ಶ್ರದ್ಧೆ ಮತ್ತು ಅಜ್ಞಾನದ ಬಲ". "ಬಹುಕಾಲ ಚಾಕರಿಗಾಗಿ ಒದ್ದಾಡಿದವನಿಗೆ ದೇವರು ಯಾವುದೋ ಒಂದು ಗತಿ ತೋರಿಸಿದನಲ್ಲ ! ಅದನ್ನು ಕಳೆದುಕೊಳ್ಳಬಾರದು—ಎಂಬ ನಿಶ್ಚಯದ ಬಲವೊಂದೇ ನನಗಿದ್ದ ಬಂಡವಾಳ."

ಆದರೆ ಹಿಂದೆ ಅವರು ಸಂಪಾದಿಸಿಕೊಂಡಿದ್ದ ಹಲಕೆಲವು ಅರಿವು ಈಗ ಒದಗಿ ಬಂತು. ಕೋಲಾರದ ಹೈಸ್ಕೂಲಿನಲ್ಲಿ ಇದ್ದಾಗಲೇ ಅವರು ಕಾಂಗ್ರೆಸ್ ಅಧ್ಯಕ್ಷರುಗಳ ಭಾಷಣಗಳನ್ನೆಲ್ಲ ಓದುತ್ತಿದ್ದರು. ದೇಶದ ಸಾರ್ವಜನಿಕ ಜೀವನದ

ಆಗು ಹೋಗುಗಳನ್ನು ಅರಿತುಕೊಂಡಿದ್ದರು. ಸ್ವಾಮಿ ವಿವೇಕಾನಂದರ ಉಪನ್ಯಾಸಗಳನ್ನು, ಮ್ಯಾಕ್ಸ್ ಮುಲ್ಲರ್ ಅವರ ಉಪನ್ಯಾಸಗಳನ್ನು ಓದಿದ್ದರು. 'ಮದ್ರಾಸ್ ಮೇಲ್' ಪತ್ರಿಕೆಯನ್ನು ಸಬ್ ರಿಜಿಸ್ಟ್ರಾರ್ ರಾಮದಾಸಪ್ಪನವರಿಗಾಗಿ ಓದುತ್ತಿದ್ದರಲ್ಲ. ಅದರಿಂದ ಸಾರ್ವಜನಿಕ ವಿಚಾರಗಳ ತಿಳಿವಳಿಕೆ ದೊರೆತಿತ್ತು.

ಬಂಡವಾಳ ಇಷ್ಟು ಮೊಂಡುಧೈರ್ಯ ಬೇಕಾದಷ್ಟು ಬದುಕಿನ ಭಾರಿ ಸವಾಲು; ಅದನ್ನು ಎದುರಿಸಲೇಬೇಕು ಎನ್ನುವ ಛಲ ! ಮನಸ್ಸಿದ್ದರೆ ಮಹಾದೇವ ! ಅಂದಿನ ಸಣ್ಣಸಣ್ಣ ಪತ್ರಿಕೆಗಳ ಜೊತೆಗೇ ಅವರು ಪತ್ರಿಕಾವೃತ್ತಿಯ ಒಳಹೊರಗು ಎಲ್ಲವನ್ನೂ ಕರಗತ ಮಾಡಿಕೊಂಡರು. ಲೇಖನ ಸಿದ್ಧತೆ, ಅದರ ವಿಚಾರ, ಭಾಷೆ, ಪದಪ್ರಯೋಗಗಳು, ಶೀರ್ಷಿಕೆಗಳು, ಧ್ಯೇಯ–ಧೋರಣೆಗಳು, ಇವೆಲ್ಲ ಒಂದು ಪಕ್ಕ. ಅಚ್ಚಿನ ಮೊಳೆ ಜೋಡಣೆ, ಕರಡು ತಿದ್ದುವಿಕೆ, ಕಾಗದ ಹದಗೊಳಿಸುವಿಕೆ, ಮಡಿಸುವಿಕೆ, ಅಂಚೆಗೆ ರವಾನಿಸಲು ಸಿದ್ಧತೆ– ಇನ್ನೊಂದು ಮುಖ. ಎಲ್ಲದರ ಪರಿಚಯ ಅನುಭವಗಳೂ ತಾವೇ ತಾವಾಗಿ ಆದವು.

ಆದರೆ ಹಾದಿ ಅಷ್ಟು ಸಲೀಸಾಗಲಿಲ್ಲ. ಹಿಡಿದ ಹಗ್ಗ ಹಾವು ಆಗಲಿಲ್ಲವಾದರೂ ಭಾರ ತಡೆಯಲಿಲ್ಲ. 1907ರಲ್ಲಿ 'ಸೂರ್ಯೋದಯ ಪ್ರಕಾಶಿಕಾ' ಪತ್ರಿಕೆ ನಿಂತು ಹೋಯಿತು. ಆ ಸನ್ನಿವೇಶವನ್ನು ಡಿವಿಜಿ ಹೀಗೆ ಬಣ್ಣಿಸಿದ್ದಾರೆ—

"1909–10. ಆಗ ನರಸಿಂಹಮೂರ್ತಿಗಳು ಯಾವುದೋ ಸಾಹಿತ್ಯ ಸಂಘದ ಆಶ್ರಯದಲ್ಲಿ ಒಂದು ಉಪನ್ಯಾಸ ಕೊಟ್ಟಿದ್ದರು. ಇಂಗ್ಲಿಷ್ ಕಾದಂಬರಿಕಾರರಲ್ಲಿ ಅಗ್ರಪಂಕ್ತಿಗೆ ಸೇರಿದ ಥ್ಯಾಕರೆಯನ್ನು ಕುರಿತದ್ದು ಆ ಉಪನ್ಯಾಸ. ಅದು 'ಸ್ಟ್ಯಾಂಡರ್ಡ್' ಪತ್ರಿಕೆಯಲ್ಲಿ ಪ್ರಕಟವಾಯಿತು. ಅದನ್ನು ಕುರಿತು ನನ್ನ ಮೆಚ್ಚಿಕೆಯನ್ನು ಮೂರ್ತಿಗಳಿಗೆ ಹೇಳಿದೆ. ಆ ಹೊತ್ತೇ ಅವರು ನನ್ನೊಡನೆ ಒಂದೆರಡು ನಿಮಿಷ ಮಾತನಾಡಿದ್ದು. ನನ್ನನ್ನು ಕೇಳಿದರು :

ಮೂ : ನೀವು ಈಗ ಏನು ಮಾಡುತ್ತಿದ್ದೀರಿ?

ನಾನು : ಆಗ ಥ್ಯಾಕರೆ ಮಾಡಿದ್ದನ್ನೇ.

ಮೂ : ಹಾಗೆಂದರೆ ?

ನಾನು : ಥ್ಯಾಕರೆಗೆ ಒಂದು ಪ್ಯಾರಿಸ್ ಪತ್ರಿಕೆಯಲ್ಲಿ ಬಾತ್ಮೀದಾರ ಕೆಲಸ ದೊರೆಯಿತು. ಆತ ಅದನ್ನು ನಂಬಿ ಮದುವೆ ಮಾಡಿಕೊಂಡ. ಆಮೇಲೆ ಒಂದೆರಡು ತಿಂಗಳಿಗೆ ಪತ್ರಿಕೆ ನಿಂತುಹೋಯಿತು. ಉದ್ಯೋಗಕ್ಕಾಗಿ ಪರದಾಡಿದ. ನಾನು 'ಸೂರ್ಯೋದಯ' ಪತ್ರಿಕೆಯನ್ನು ನಂಬಿಕೊಂಡು

ಸಂಸಾರ ಹೂಡಿದೆ. ಪತ್ರಿಕೆ ನಿಂತು ಹೋಯಿತು. ಈಗ ನಾನೂ ಉದ್ಯೋಗಕ್ಕಾಗಿ ಪರದಾಡುತ್ತಿದ್ದೇನೆ.

'ಸೂರ್ಯೋದಯ ಪ್ರಕಾಶಿಕೆ' ನಿಂತ ಮೇಲೆ 'ಭಾರತಿ' ಬಂತು. ಅದರ ಆಯಸ್ಸೂ ಅಲ್ಪವೇ.

ಅದೇ ಕಾಲದಲ್ಲಿ ಎಂ. ಶ್ರೀನಿವಾಸಯ್ಯಂಗಾರ್ ಎಂಬ ವಿದ್ವಾಂಸರು 'ಮೈಸೂರು ಸ್ಟ್ಯಾಂಡರ್ಡ್' ಎಂಬ ಇಂಗ್ಲಿಷ್ ಅರ್ಧವಾರ ಪತ್ರಿಕೆಯನ್ನೂ, 'ನಡೆಕನ್ನಡಿ' ಎಂಬ ಕನ್ನಡ ವಾರಪತ್ರಿಕೆಯನ್ನೂ ನಡೆಸುತ್ತಿದ್ದರು. ಒಳ್ಳೆ ಮೊನಚು ಪತ್ರಿಕೆಗಳು. ಡಿವಿಜಿ ಅವುಗಳಿಗೆ ಲೇಖನಗಳನ್ನು ಬರೆದರು. ಶ್ರೀನಿವಾಸ ಅಯ್ಯಂಗಾರ್ಯರು ಡಿವಿಜಿಗೆ ಒಳ್ಳೆಯ ಮಾರ್ಗದರ್ಶನ ನೀಡಿದರು.

ದಿವಾನ್ ವಿ.ಪಿ. ಮಾಧವರಾಯರು ಅಮಲಿಗೆ ತಂದ ಪತ್ರಿಕಾ ನಿರ್ಬಂಧದ ಕಾನೂನಿಗೆ ಪ್ರತಿಭಟನೆಯಾಗಿ ಮೈಸೂರಿನ ವೆಸ್ಲಿಮಿಷನ್ನಿನ ಎರಡನ್ನು ಬಿಟ್ಟು ಎಲ್ಲಾ ಪತ್ರಿಕೆಗಳೂ ನಿಂತು ಹೋದವು. ಆ ಕಾನೂನಿನ ಮೇಲೆ ಬಂದಿದ್ದ ನಾನಾ ಟೀಕೆ–ಟಿಪ್ಪಣಿಗಳನ್ನು ಸಂಗ್ರಹಿಸಿ ಕ್ರೋಢೀಕರಿಸಿ ಪುಸ್ತಕವಾಗಿ ಪ್ರಕಟಿಸಬೇಕು ಎಂಬ ವಿಚಾರ ಬಂತು. ಅದು ಡಿವಿಜಿಯವರನ್ನು ಶ್ರೀನಿವಾಸ ಅಯ್ಯಂಗಾರ್ಯರೊಂದಿಗೆ ಮದರಾಸಿಗೆ ಕೊಂಡೊಯ್ದಿತು. ಅವರು ಡಿವಿಜಿಗೆ ಎಲ್ಲ ಅವಕಾಶ ಒದಗಿಸಿಕೊಟ್ಟರು. ತತ್ಫಲವಾಗಿ 'Press Gag in Mysore' (ಮೈಸೂರಿನಲ್ಲಿ ಪತ್ರಿಕೆಗಳಿಗೆ ವಾಗ್ಬಂಧನ) ಎಂಬ ಪುಸ್ತಕ ಸಿದ್ಧವಾಯಿತು. ಗಣೇಶ್ ಅಂಡ್ ಕಂಪನಿಯಿಂದ ಪ್ರಕಟವಾಯಿತು. ಅದರಲ್ಲಿ ಲೇಖಕರ ಹೆಸರು ಇರಲಿಲ್ಲ. ಮದರಾಸಿನಲ್ಲೆ ನೆಲೆಸಿದ್ದ ಪಿ. ತಿರುಮಲಾಚಾರ್ ಎಂಬ ವಕೀಲರ ಹೆಸರಿನಲ್ಲಿ ಬಂತು ಪುಸ್ತಕ.

ಡಿವಿಜಿ ಅವರಿಗೆ ಮದರಾಸಿನ ವಾಸ್ತವ್ಯ, ಅಲ್ಲಿನ ಬುದ್ಧಿಜೀವಿಗಳ ಒಡನಾಟ, ರಾಷ್ಟ್ರೀಯ ಜಾಗೃತಿ ಎಲ್ಲ ಹಿಡಿಸಿತ್ತು. ಅಲ್ಲೇ ನಿಂತರೂ ಸರಿಯೆ ಎನಿಸಿತ್ತು. ಆದರೆ ಅವರು ಅಲ್ಲಿ ಮಾಡಿದ ಒಂದು ಭಾಷಣ ಇದಕ್ಕೆ ಅಡ್ಡಬಂತು. ತಿರುಮಲಾಚಾರ್ಯರೇ ಏರ್ಪಡಿಸಿದ ಕಾರ್ಯಕ್ರಮ. ಡಿವಿಜಿ ಭಾಷಣ ಸಾಕಷ್ಟು ಪ್ರಸಿದ್ಧಿ ಪಡೆಯಿತು. ಪತ್ರಿಕೆಗಳಲ್ಲಿ ಹೆಸರು ಬಂತು. ಅದು ಅಲ್ಲೇ ಓದುತ್ತಿದ್ದ ಶ್ರೀನಿವಾಸಯ್ಯ ಎಂಬ ಶ್ರೀನಿವಾಸಪುರದ ಪರಿಚಿತರ ಕಣ್ಣಿಗೆ ಬಿತ್ತು. ಅವರ ತಂದೆಗೂ ಡಿವಿಜಿ ತಂದೆಗೂ ಸ್ನೇಹ. ಹುಡುಗ ಗುಂಡಪ್ಪನ ಸಾಹಸ ಅಪಾಯಕರ, ಹದ್ದುಬಸ್ತಿನಲ್ಲಿ ಇರಿಸಿಕೊಳ್ಳಿ, ಇಲ್ಲವಾದರೆ ಪೋಲೀಸರು ಹಿಡಿದುಕೊಂಡು ಹೋದಾರು ಎನ್ನುವಂತೆ ಊರಿಗೆ ಪತ್ರ ಬರೆದರು. ತಂದೆಯವರ ಆಗ್ರಹದ ಕರೆ ಬಂತು.

ಮದರಾಸಿನಲ್ಲಿ ಇದ್ದಾಗಲೇ ಇನ್ನೂ ಒಂದೆರಡು ಕಸಬಿನ ಪ್ರಯತ್ನ ನಡೆದಿತ್ತು. ವಿದ್ವಾನ್ ಚೆನ್ನಕೇಶವ ಅಯ್ಯಂಗಾರ್ಯರೂ ರಾಮರಾವ್ ಎಂಬುವರೂ ನಡೆಸುತ್ತಿದ್ದ 'ವೀರ ಕೇಸರಿ' ಎಂಬ ಪತ್ರಿಕೆಯ ಕೆಲಸ ಒಂದು. ಇನ್ನೊಂದು ಇಂಗ್ಲಿಷ್ – ಕನ್ನಡ ಮಹಾನಿಘಂಟು ಸಿದ್ಧಪಡಿಸಬೇಕೆಂಬ ಹಂಬಲ. ಅದಕ್ಕಾಗಿ ಕನ್ನಡ ಅಚ್ಚಿನ ಮೊಳೆಗಳನ್ನು ಕೊರೆಯಿಸುವ ಕೆಲಸ.

'ಹಿಂದೂ' ಹಾಗೂ 'ಇಂಡಿಯನ್ ಪೇಟ್ರಿಯಟ್' ಪತ್ರಿಕೆಗಳಿಗೂ ಡಿವಿಜಿ ಬರೆಯುತ್ತಿದ್ದುದು ಉಂಟು. ಬಹುಮಟ್ಟಿಗೆ ಮೈಸೂರಿನ ರಾಜಕೀಯದ ಬಗ್ಗೆ. ಹಸಿಹಸೀ ಬರಹ. ಆದರೆ 'ಹಿಂದೂ'ವಿನ ಕಸ್ತೂರಿ ರಂಗಯ್ಯಂಗಾರ್ ಹಾಗೂ ಪೇಟ್ರಿಯಟ್‌ನ ಕರುಣಾಕರ ಮೆನನ್ ಅವರ ತಿದ್ದಾವಣೆ, ಪ್ರೋತ್ಸಾಹ ಸಿಗುತ್ತಿತ್ತು.

ಇದಾವುದೂ ತಂದೆಯವರ ವರಾತವನ್ನು ತಡೆಯಲಾಗಲಿಲ್ಲ. ಡಿವಿಜಿ ಬೆಂಗಳೂರಿಗೆ ಮರಳಬೇಕಾಯಿತು. "ಹೀಗೆ ನನಗೆ ದೊಡ್ಡ ಪ್ರಸಿದ್ಧಿಯ ಅವಕಾಶ ತಪ್ಪಿಹೋಯಿತು."

ದಿವಾನ್ ರಂಗಾಚಾರ್ಲು ಡಿವಿಜಿಯವರು ಮೆಚ್ಚಿಕೊಂಡಿದ್ದ ರಾಜನೀತಿಜ್ಞರಲ್ಲಿ ಒಬ್ಬರು. ವಿಜಯನಗರವನ್ನು ಸ್ಥಾಪಿಸಿದ್ದ ಶ್ರೀ ವಿದ್ಯಾರಣ್ಯರು ಜ್ಞಾನಿ, ತಪಸ್ವಿ, ವಿದ್ವಾಂಸ, ದಾರ್ಶನಿಕ ಹಾಗೂ ರಾಜನೀತಿಜ್ಞ. ಅವರು ರಾಜನೀತಿಗೆ ಯಾವ ಲಕ್ಷಣಗಳನ್ನು ಪ್ರತಿಪಾದಿಸಿದ್ದರೂ ಅವುಗಳಲ್ಲಿ ಬಹುಪಾಲು ರಂಗಾಚಾರ್ಲು ಅವರಲ್ಲಿ ಆವಾಹಿತವಾಗಿದ್ದವು. ವಿದ್ಯಾರಣ್ಯರ ಅನನ್ಯ ಭಕ್ತರಾಗಿದ್ದ ಡಿವಿಜಿಗೆ ಸ್ವತೇವ ರಂಗಾಚಾರ್ಲು ಅವರ ಬಗ್ಗೆ ಆದರ, ಅಭಿಮಾನ, ಗೌರವ ಮೂಡಿದವು. ಅವರ ಜೀವನ ಚರಿತ್ರೆಯನ್ನು ಬರೆದರು. ಅಲ್ಲದೆ 1910ರಲ್ಲಿ, ಮದರಾಸಿನ 'ಇಂಡಿಯನ್ ರೆವ್ಯೂ' ಪತ್ರಿಕೆಗೆ ಒಂದು ಇಂಗ್ಲಿಷ್ ಲೇಖನವನ್ನು ಬರೆದರು. ರಂಗಾಚಾರ್ಲು ಅವರ ದಿವಾನಗಿರಿಯ ವಿಮರ್ಶೆ. ಲೇಖನದಿಂದ ಹಣ ಬಂತು. ಮೇಲಾಗಿ ಅನೇಕ ದೊಡ್ಡ ಮನುಷ್ಯರ ಪರಿಚಯ ಲಾಭ! ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಗಮನ ಸೆಳೆಯಿತು ಲೇಖನ. ಪರಿಣಾಮ, ಪ್ರಶಂಸೆ ಹಾಗೂ ದೇಶ ಸೇವೆಯ ಕೆಲಸದಲ್ಲಿ ಸೇರಲು ಕರೆ, ಮೈಸೂರು ಸರ್ಕಾರ ಆರಂಭಿಸಿದ್ದ ಎಕನಾಮಿಕ್ ಕಾನ್‌ಫರೆನ್ಸ್ ಎಂಬ ಆರ್ಥಿಕಾಭಿವೃದ್ಧಿ ವಿಷಯಕ ಸಂಸ್ಥೆಯಲ್ಲಿ ಸಹಕರಿಸಲು ಆಹ್ವಾನ. ಹೀಗೆ ಈ ಲೇಖನ ಡಿವಿಜಿ ಅವರಿಗೆ ಮೈಸೂರಿನ ರಾಜಕೀಯ ಹಾಗೂ ಸಾರ್ವಜನಿಕ ಜೀವನದಲ್ಲಿ ಒಂದು ಪ್ರಾರಂಭಿಕ ಚಾಲನೆಯನ್ನು ಕೊಟ್ಟಿತು.

'ಸುಮತಿ' ಎನ್ನುವ ಕನ್ನಡ ವಾರಪತ್ರಿಕೆಯನ್ನು ಆರಂಭಿಸಿದರು. ಅದರದೂ ಅಲ್ಪಾಯಸ್ಸೇ. ಅದೇ ಕಾಲಕ್ಕೆ ಬೆಂಗಳೂರಿನಲ್ಲಿ 'ಮೈಸೂರು ಟೈಮ್ಸ್' ಎಂಬ ಇಂಗ್ಲಿಷ್ ಪತ್ರಿಕೆ ಹೊರಟಿತು. ಸಂಪಾದಕರು ಎನ್.ಎಸ್. ರಾಮಸ್ವಾಮಿ ಅಯ್ಯಂಗಾರ್. ಸಹ ಸಂಪಾದಕರು ಡಿ.ವಿ. ಗುಂಡಪ್ಪ. ಆ ಪತ್ರಿಕೆಯ ಲೇಖನ ಮೈಸೂರಿನ 'ತಾತಯ್ಯ' ವೆಂಕಟಕೃಷ್ಣಯ್ಯನವರ ಸ್ನೇಹವನ್ನು ಸಂಪಾದಿಸಿಕೊಟ್ಟಿತು.

ಸ್ವಲ್ಪ ಕಾಲ ಕೆಲಸ ಸುಗಮವಾಗಿ ಸಾಗಿತು. ನಡುವೆ ಒಂದು ತಕರಾರು ಎದ್ದಿತು. ಪತ್ರಿಕೆಯಲ್ಲಿ ಬಂದ ಒಂದು ಟೀಕೆಯ ಬಗ್ಗೆ ಸಂಪಾದಕರ ಮೇಲೆ ದಾವಾ ಒಂದು ಎದ್ದಿತು. ಡಿವಿಜಿ ಪ್ರಕಟಣೆಯನ್ನು ಸಮರ್ಥಿಸಿಕೊಂಡರು. ಆದರೂ ಅವರಿಗೆ ತಿಳಿಯದೆಯೆ, ಸಂಪಾದಕರು ಕೋರ್ಟಿನಲ್ಲಿ ಕ್ಷಮೆ ಕೋರಿದರು. ಇದನ್ನು ತಿಳಿದ ಡಿವಿಜಿ ಪತ್ರಿಕೆಯ ಕೆಲಸ ಬಿಟ್ಟರು. ಸ್ನೇಹಿತರು ಬೇಡ ಎಂದರೂ ಕೇಳಲಿಲ್ಲ. ತಮ್ಮ ಮನಸ್ಸಾಕ್ಷಿಗೆ ಬದ್ಧವಾಗಿರುವುದಾಗಿ ಹಠ ಹಿಡಿದರು.

ಆ ವೇಳೆಗೆ ತಂದೆಯವರೂ ನಿವೃತ್ತರಾಗಿ, ಸಂಸಾರವೆಲ್ಲ ಬೆಂಗಳೂರಿಗೇ ಬಂದಿತ್ತು. ಡಿವಿಜಿ ಅವರ ಹೊಣೆ ಹೆಚ್ಚಿತು.

ಮುಂದೆ ಡಿವಿಜಿ ತಾವೇ ಸ್ವತಂತ್ರವಾಗಿ ಪತ್ರಿಕೆ ನಡೆಸುವ ಪ್ರಯತ್ನ ಮಾಡಿದರು. 1912ರ ಸುಮಾರು. ಎಂ. ವಿಶ್ವೇಶ್ವರಯ್ಯನವರ ದಿವಾನಗಿರಿ. ಹಿಂದಿನ ದಿವಾನ ಮಾಧವರಾಯರ ಕಾಲದಲ್ಲಿ ಇದ್ದ ಪತ್ರಿಕಾ ವಿರೋಧ ತಗ್ಗುವ ನಿರೀಕ್ಷೆ ಎದ್ದಿತ್ತು. ಸ್ನೇಹಿತರೊಂದಿಗೆ ಸಮಾಲೋಚಿಸಿ ಪತ್ರಿಕೆಗೆ ಕೈಹಾಕಿದರು. ಸರ್ಕಾರದ ಅನುಮತಿ ಕೋರಿದರು. ವಿಶ್ವೇಶ್ವರಯ್ಯನವರ ಭೇಟಿ ಆಯಿತು. ಸೌಹಾರ್ದದ ಸ್ವಾಗತ. ಆಡಳಿತ ವಿಮರ್ಶೆಯ ಹಕ್ಕನ್ನು ಡಿವಿಜಿ ಸಮರ್ಥಿಸಿಕೊಂಡರು. "ಗುಣ ದೋಷ ವಿಮರ್ಶೆಯಿಂದ, ಗುಣವನ್ನು ತಿಳಿಸಿದರೆ ಸರ್ಕಾರಕ್ಕೆ ಜನದ ಬೆಂಬಲ ದೊರಕೀತು. ದೋಷವನ್ನು ತಿಳಿಸಿದರೆ ತಾವು ಅದನ್ನು ತಿದ್ದಿ ಸರಿಪಡಿಸುವಿರಿ" ಎಂದರು. ಈ ನೇರ ಮಾತು ವಿಶ್ವೇಶ್ವರಯ್ಯನವರನ್ನು ರಂಜಿಸಿತು. ಪತ್ರಿಕೆಗೆ ಅನುಮತಿ ದೊರೆಯಿತು.

1913 ಮಾರ್ಚಿ. "ಕರ್ನಾಟಕ" ಪತ್ರಿಕೆಯ ಮೊದಲನೆಯ ಸಂಚಿಕೆ ಹೊರ ಬಂತು. ಪ್ರತಿ ಬುಧವಾರ ಶನಿವಾರ ಪ್ರಕಟಣೆ. ಭಾಷೆ ಇಂಗ್ಲಿಷ್. ಕೆ.ಎಸ್. ಕೃಷ್ಣಯ್ಯರ್ ಅವರ ಐರಿಷ್ ಪ್ರೆಸ್‌ನಲ್ಲಿ ಮುದ್ರಣ. ಸಂಪಾದಕೀಯ ಕೆಲಸ ಡಿವಿಜಿಯದು. ವ್ಯವಹಾರ ಪ್ರೆಸ್ಸಿನದು. ಇದರಿಂದ ಕೃಷ್ಣಯ್ಯರ್ ಕೈಸುಟ್ಟುಕೊಂಡದ್ದೂ ಉಂಟು. ಪತ್ರಿಕೆಯ ನಿರ್ವಹಣೆಯಲ್ಲಿ ಎನ್. ನರಸಿಂಹಮೂರ್ತಿಗಳ ನೆರವು, ಪ್ರೋತ್ಸಾಹ ದೊಡ್ಡ ರೀತಿಯದು. ಪತ್ರಿಕೆ ವಿದ್ಯಾವಂತರೆಲ್ಲರಿಗೂ ಪ್ರಿಯವಾಯಿತು.

ಕೆಲವು ತಿಂಗಳಲ್ಲೇ ಕನ್ನಡ ಭಾಗವೂ ಮೊದಲಾಯಿತು. ನಾಲ್ಕು ಪುಟ. ಡಿವಿಜಿಯವರ ಕನ್ನಡ ಲೇಖನಗಳೇ ಅದರಲ್ಲಿ. ಬ್ರೌನಿಂಗನ "ಪೈಡ್ ಪೈಪರ್ ಆಫ್ ಹ್ಯಾಮಲಿನ್'' ಕವಿತೆಯ ಕನ್ನಡ ಅನುವಾದ ಬಂತು. ಕುವೆಂಪು ಅವರ "ಬೊಮ್ಮನಹಳ್ಳಿ ಕಿಂದರಜೋಗಿ'' ಆಮೇಲೆ ಬಂದು ಖ್ಯಾತಿ ಪಡೆಯಿತು. ಕ್ರಮೇಣ ಕನ್ನಡ ವಿಭಾಗ ನಿಲ್ಲಬೇಕಾಯಿತು. ಎರಡೂ ವಿಭಾಗದ ನಿರ್ವಹಣೆ ಕಷ್ಟವಾದದ್ದು ಇದಕ್ಕೆ ಕಾರಣ.

ಪತ್ರಿಕೆ 1920ರ ವರೆಗೆ ನಡೆಯಿತು. ಇದ್ದ ಆ ಆರೇಳು ವರ್ಷ ಪ್ರಭಾವಶಾಲಿ ಆಗಿತ್ತು. ಪ್ರಜಾಹಿತವೇ ಅದರ ಗುರಿ. ಸರ್ಕಾರವೂ ಗಮನಿಸಬೇಕಾದ ರೀತಿಯಲ್ಲಿ ಅದರ ಟೀಕೆ–ಟಿಪ್ಪಣಿ ವಿಮರ್ಶೆಗಳು. ನಿಷ್ಪಕ್ಷಪಾತದ ಸ್ವತಂತ್ರ ದೃಷ್ಟಿ. ತಾವು ಬಹುವಾಗಿ ಗೌರವಿಸುತ್ತಿದ್ದ ವಿಶ್ವೇಶ್ವರಯ್ಯನವರನ್ನೂ ಟೀಕೆ ಮಾಡದೆ ಬಿಡುತ್ತಿರಲಿಲ್ಲ. "ನೀನು ವಿಷಕಂಟಕಪ್ರಾಯನಾದ ವಿಮರ್ಶಕ'' ಎಂದು ಅವರಿಂದ ಹೇಳಿಸಿಕೊಂಡದ್ದುಂಟು. ಅಧಿಕಾರಿಗಳಿಗೆ ಪತ್ರಿಕೆ ನುಂಗಲಾರದ ತುತ್ತು. "ಕರ್ನಾಟಕ ಅಲ್ಲ ಕಾರ್ಕೋಟಕ'' ಎಂಬ ಮೂದಲಿಕೆ ಬಂತು.

ಪತ್ರಿಕೆಯ ಧೋರಣೆಗೆ ಬ್ರಿಟಿಷ್ ರೆಸಿಡೆಂಟನ ಆಕ್ಷೇಪ, ಅರಮನೆಯ ಕಡೆಯಿಂದ ಆಗ್ರಹ, ವಿಶ್ವೇಶ್ವರಯ್ಯನವರ ತಾಕೀತಿನಿಂದ ಅರಮನೆಗೆ ವಿರೋಧವಾಗಿ ಬರೆಯುತ್ತಿದ್ದಾನೆ ಎಂದು, ವಿಶ್ವೇಶ್ವರಯ್ಯನವರ ಆಯವ್ಯಯ ಧೋರಣೆಗೇ ವಿರೋಧದ ಟೀಕೆ—ಈ ಕಾರಣಗಳಿಂದ ಆಡಳಿತದ ಜೊತೆಗೆ ಸೆಣಸಾಟ. ಎಷ್ಟೋ ಸಲ ದಿವಾನರು ಗುಂಡಪ್ಪನವರನ್ನು ಕರೆಸಿ ಮಾತಾಡಿದರು, ಸಮಜಾಯಿಷಿ ಕೇಳಿದರು. ಗುಂಡಪ್ಪನವರ ಸ್ವತಂತ್ರ ವಿಮರ್ಶೆಯ ಹಕ್ಕಿನ ಬಗ್ಗೆ ಅವರಿಗೆ ಗೌರವ. ಆದರೆ ಆಡಳಿತದ ಚೌಕಟ್ಟಿನಲ್ಲಿ ಇರುವ ನಿರ್ಬಂಧಗಳು, ಇಕ್ಕಟ್ಟುಗಳು ಬೇರೆ! ಡಿವಿಜಿಯ ಟೀಕೆಗಳಿಂದ ಎಷ್ಟೇ ಇರಸುಮುರಸು ಆದರೂ, ದಿವಾನರು ವೃತ್ತಪತ್ರಿಕಾ ಕಾನೂನಿನ ದೊಣ್ಣೆಯನ್ನು ಎತ್ತಲಿಲ್ಲ. ಕಾರಣ "ವಿಶ್ವೇಶ್ವರಯ್ಯನವರು ಹುಟ್ಟಿನಿಂದಲೇ ದೊಡ್ಡ ಮನುಷ್ಯರು, ಅನ್ಯಾಯ ಮಾಡುವುದೂ ಹಿಂಸೆ ಮಾಡುವುದೂ ಅವರ ಸ್ವಭಾವಕ್ಕೆ ತೀರ ವಿರೋಧವಾದುದು....... ಅಂಥ ಮಹಾನುಭಾವರು ಸರ್ಕಾರ ನಡೆಸುತ್ತಿದ್ದ ಕಾಲದಲ್ಲಿ ಪತ್ರಿಕೆ ನಡೆಸುವುದು ಒಂದು ಸಂತೋಷದ ಕರ್ತವ್ಯವಾಗಿತ್ತು. ಅಂತಹವರ ಸಹಾನುಭೂತಿ ಪಡೆಯುವುದು ಒಂದು ಭಾಗ್ಯ'' ಎಂದಿದ್ದಾರೆ ಡಿವಿಜಿ.

ಪತ್ರಿಕೆ ನಿಲ್ಲಲು ಕಾರಣ ಎರಡು. ಧೋರಣೆ ಹಾಗೂ ಹಣಕಾಸು. ಡಿವಿಜಿ ಹೇಳುತ್ತಾರೆ—

"ನಿರ್ದಾಕ್ಷಿಣ್ಯವೂ ಕಟುವೂ ಆದ ಟೀಕೆಯನ್ನು ಸಹಿಸಬಲ್ಲವರು ಸಮರ್ಥರಾದ ಅಧಿಕಾರಿಗಳು. ಅಸಮರ್ಥರೂ, ಸಣ್ಣ ವಯಸ್ಸಿನವರೂ ಅಧಿಕಾರ ಪದವಿಗೆ ಏರಿದ ಮೇಲೆ ಪತ್ರಿಕಾವೃತ್ತಿ ಸಂತೋಷವಿಲ್ಲದ್ದಾಗುತ್ತದೆ. ಮೈಸೂರಿನಲ್ಲಿ ಪ್ರಜಾ ಪಕ್ಷವೆಂಬ ಪಾರ್ಟಿ ಹೊರಟ ಮೇಲೆ 'ಕರ್ನಾಟಕ' ಪತ್ರಿಕೆಯನ್ನು ನಿಲ್ಲಿಸತಕ್ಕದ್ದೆಂದು ನನಗೆ ತೋರಿತು.

"ಒಟ್ಟಿನಲ್ಲಿ ನನಗೆ ವೈಯಕ್ತಿಕವಾಗಿ ಒದಗಿದ್ದ ಕೆಲವು ಕಾರಣಗಳಿಗಾಗಿ ಆಗ ನಾನು ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಆಗ ಚಂದಾದಾರರುಗಳಿಂದ ಪತ್ರಿಕೆಗೆ ಬರಬೇಕಾಗಿದ್ದ ಬಾಕಿ ಸುಮಾರು ಏಳೆಂಟು ಸಾವಿರ ರೂಪಾಯಿಗಳಷ್ಟು!''

ಪತ್ರಿಕಾ ವೃತ್ತಿಯನ್ನೇ ಜೀವನೋಪಾಯವನ್ನಾಗಿ ಆರಿಸಿಕೊಂಡಿದ್ದ ಡಿವಿಜಿ ಸುಮ್ಮನೆ ಕೂತಾರು ಹೇಗೆ ? 1922ರಲ್ಲಿ "ಕರ್ನಾಟಕ ಅಂಡ್ ಇಂಡಿಯನ್ ರೆವ್ಯೂ ಆಫ್ ರೆವ್ಯೂಸ್'' ಎಂಬ ಪತ್ರಿಕೆಯನ್ನು ಆರಂಭಿಸಿದರು. ಅದರ ವ್ಯಾಪ್ತಿ ಸಮಗ್ರ ಭಾರತಕ್ಕೆ ಹಬ್ಬಿತ್ತು. ಭಾರತದ ನಾನಾ ಇಂಗ್ಲಿಷ್ ಪತ್ರಿಕೆಗಳಲ್ಲಿ ಬರುತ್ತಿದ್ದ ಪ್ರಮುಖ ಲೇಖನಗಳ ಆರಿಸಿದ ಭಾಗಗಳನ್ನು ಸಾರಾಂಶವನ್ನು ಒಳಗೊಂಡ ಪತ್ರಿಕೆ. ಪತ್ರಿಕೆ ಚೆನ್ನಾಗಿತ್ತು. ಉದ್ದೇಶವೂ ದೊಡ್ಡದೇ. ಆದರೆ ಬಾಲಗ್ರಹ ತಪ್ಪಲಿಲ್ಲ. ಒಂದೆರಡು ವರ್ಷದಲ್ಲೇ ಕಣ್ಣು ಮುಚ್ಚಿಕೊಂಡಿತು. ಪತ್ರಿಕೆಯ ಬರವಣಿಗೆ ಬಗ್ಗೆ ಡಿವಿಜಿ ಸಮರ್ಥರು. ಆದರೆ ವ್ಯವಹಾರದಲ್ಲಿ ತೀರಾ ಬೀಳು. ಪತ್ರಿಕೆಗೆ ಜಾಹೀರಾತು ತೆಗೆದುಕೊಳ್ಳುತ್ತಿರಲಿಲ್ಲ. ಚಂದಾ ಬಾಕಿ ವಸೂಲಿ ಮೇಲೆ ನಿಗಾ ಇಲ್ಲ. ಕೊಟ್ಟವರು ಕೊಟ್ಟರು. ಬಿಟ್ಟವರು ಬಿಟ್ಟರು.

ವಿಶ್ವೇಶ್ವರಯ್ಯನವರು ದಿವಾನರಾದ ಮೇಲೆ ಒಂದು ಅರ್ಥಸಾಧಕ ಪರಿಷತ್ತನ್ನು ನಡೆಸಿದರು. (Economic Conference) ಅದರ ನಿರ್ಣಯಗಳಂತೆ ಆ ಸಂಸ್ಥೆ ಮೈಸೂರು ಎಕನಾಮಿಕ್ ಜರ್ನಲ್ ಎಂಬ ಇಂಗ್ಲಿಷ್ ಪತ್ರಿಕೆಯನ್ನೂ ಅರ್ಥಸಾಧಕ ಪತ್ರಿಕೆ ಎಂಬ ಕನ್ನಡ ವಾರಪತ್ರಿಕೆಯನ್ನೂ ಹೊರಡಿಸಿತು. ವಿಶ್ವೇಶ್ವರಯ್ಯನವರ ದಿವಾನಗಿರಿ ಇರುವವರೆಗೂ ಇವು ಜೋರಾಗಿದ್ದವು. ಆಮೇಲೆ ಇಳಿಮುಖ.

1922–23ರ ಸುಮಾರಿಗೆ ಕನ್ನಡ ಪತ್ರಿಕೆಯ ಸಂಪಾದಕರಾಗಿ ಎಂದು ಡಿವಿಜಿಗೆ ಕರೆ ಬಂತು. ಡಿವಿಜಿ ಮೂರು ಷರತ್ತು ಹಾಕಿದರು : ಇದನ್ನು ಮಾಸಪತ್ರಿಕೆ ಮಾಡಬೇಕು. ಆರ್ಥಿಕ ವಿಷಯಗಳ ಜೊತೆಗೆ ಸಾಹಿತ್ಯ, ಸಾಮಾಜಿಕ ವಿಷಯಗಳೂ ಇರಬೇಕು. ಇದಕ್ಕಾಗಿ ಪತ್ರಿಕೆಯ ಹೆಸರನ್ನು 'ಕರ್ನಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ' ಎಂದು ಬದಲಾಯಿಸಬೇಕು. ಸರ್ಕಾರ ಒಪ್ಪಿತು. ಡಿವಿಜಿ ಪತ್ರಿಕೆಯನ್ನು ಕೈಗೆ ತೆಗೆದುಕೊಂಡರು. ಬದಲಾವಣೆಗಳನ್ನು ಮಾಡಿದರು.

1923 ಜನವರಿಯಲ್ಲಿ ಮೊದಲ ಸಂಚಿಕೆ ಬಂತು. ವಿಷಯ ವೈವಿಧ್ಯದಲ್ಲಿ, ಸಾಹಿತ್ಯದಲ್ಲಿ ಪತ್ರಿಕೆ ಮೇಲುಮಟ್ಟದ್ದಾಗಿತ್ತು. ಹನ್ನೆರಡು ಸಂಚಿಕೆ ಬರುವಷ್ಟರಲ್ಲಿ ಅಡ್ಡಿ–ಅಡಚಣೆ ಬಂದವು. ಆರ್ಥಿಕ ವ್ಯಾವಸಾಯಿಕ ವಿಷಯಗಳು ಕಡಿಮೆ ಆದವು ಎಂಬ ತಕರಾರು ಬಂತು. ಚಂದಾ ಬಾಕಿ ನಿಂತಿತು. ಮೇಲಾಗಿ ಡಿವಿಜಿಯವರಿಗೆ ಆದ ಪತ್ನೀ ವಿಯೋಗ–1924, ಫೆಬ್ರವರಿ–ಅವರನ್ನು ತುಂಬಾ ಕುಗ್ಗಿಸಿತು. ಏಪ್ರಿಲ್ ಸಂಚಿಕೆಯೇ ಕೊನೆಯದಾಯಿತು.

ಈಗ ವೃತ್ತಪತ್ರಿಕೆಗಳ ರೂಪ–ಸ್ವರೂಪಗಳು ಬಹುವಾಗಿ ಬೆಳೆದಿವೆ. ಹಳೆಯ ಪತ್ರಿಕೆಗಳು ಇವತ್ತಿಗೆ ಹಾಸ್ಯಕರವಾಗಿ ಕಾಣಬಹುದು. ಆದರೆ 'ಕರ್ನಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ'ಯ ಹಳೆಯ ಸಂಪುಟವನ್ನು ತಿರುವಿ ಹಾಕುವುದು ಈಗಲೂ ಒಂದು ಕುತೂಹಲಕರ ಅನುಭವ. ಎಲ್ಲ ವಿಷಯಗಳನ್ನು ಕನ್ನಡದಲ್ಲಿ ತಿಳಿಸಬೇಕು ಎಂಬ ಆರ್ಭಟ ಈಗ ಎಲ್ಲೆಲ್ಲೂ ಕಂಡುಬರುತ್ತದೆ. 60 ವರ್ಷದ ಹಿಂದೆಯೆ ನಮ್ಮ ಹಿರಿಯರು ಈ ನಿಟ್ಟಿನಲ್ಲಿ ಎಂಥ ಪ್ರಯತ್ನ ಮಾಡಿದರು ಎನ್ನುವುದಕ್ಕೆ ಸಾಕ್ಷಿ ಈ ಪತ್ರಿಕಾ ಸಂಪುಟ. ಹೆಸರಿಗೆ ತಕ್ಕಂತೆ ಅದು ಜೀವನದ ನಾನಾ ಮುಖಗಳನ್ನೂ ಸ್ಪರ್ಶಿಸುವ ಸ್ವರೂಪದ್ದಾಗಿತ್ತು. ಅದರಲ್ಲಿ ಬರುತ್ತಿದ್ದ ಲೇಖನಗಳ ವೈವಿಧ್ಯವನ್ನು ವಿಷಯ ವಿಸ್ತಾರವನ್ನು ನೋಡಬೇಕು. ಭೂವ್ಯವಸಾಯ, ರಾಜಕೀಯ ವ್ಯವಸ್ಥೆ, ನಮ್ಮ ಕಸಬುಗಳು–ಕೆಲಸಗಾರರು, ಸಹಕಾರ ಸಂಘಗಳು, ವೈಜ್ಞಾನಿಕ ಉಪನ್ಯಾಸಗಳ ಸಾರಾಂಶ, ಚರಕದ ಮಹಿಮೆ, ಕ್ರಿಮಿನಾಶಕಗಳು, ಕೈಮಗ್ಗ, ಮೈಸೂರಿನ ರೈಲ್ವೆ, ಗೋಖಲೆ ವಿಚಾರ, ಬುದ್ಧಿಶಕ್ತಿಯ ಅಳತೆ, ಮೇವಿನ ಹುಲ್ಲು, ಮೀರಾಬಾಯಿ, ಅರ್ಥಶಾಸ್ತ್ರ ಸ್ವರೂಪ, ಕ್ಷಯರೋಗ, ಪಂಚಮರ ಪ್ರಶ್ನೆ, ಆಹಾರ ಜೀರ್ಣಕಾರ್ಯ, ನೊಣ, ಹೊಸ ನಮೂನೆ ನೇಗಿಲು, ರಾಜ್ಯಶಾಸ್ತ್ರ, ಶುಂಠಿ, ಹೈನುಗಾರಿಕೆ, ಶಾಸನಗಳು, ವಿದ್ಯಾಭ್ಯಾಸದಲ್ಲಿ ನೂತನ ಕ್ರಮಗಳು—ಇಂಥ ವಿವಿಧ ವಿಷಯಗಳ ಲೇಖನಗಳು ಕಾಣಸಿಗುತ್ತವೆ. ಇದರ ಜೊತೆಗೆ ಸಾಹಿತ್ಯ ಧರ್ಮಪರ ವಿಚಾರವಂತೂ ಇದ್ದದ್ದೇ. ಬಿ.ಎಂ.ಶ್ರೀಕಂಠಯ್ಯ ಅವರ "ಇಂಗ್ಲಿಷ್ ಗೀತಗಳು", ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ, ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಆರ್. ಶ್ರೀನಿವಾಸಮೂರ್ತಿ, ಬಿ. ಪುಟ್ಟಯ್ಯ ಮೊದಲಾದವರ ಲೇಖನಗಳಿಗೆ ಈ ಪತ್ರಿಕೆಯೇ ತೊಟ್ಟಿಲು. ಡಿವಿಜಿ ಅವರ ಕವಿತೆಗಳು, ರಾಜ್ಯಶಾಸ್ತ್ರ ವಿಮರ್ಶೆ ಇತ್ಯಾದಿ ಎಲ್ಲ ಈ ಪತ್ರಿಕೆಯ ಮೂಲಕವೇ ಹೊರಬಂದವು.

ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಈ ಪತ್ರಿಕೆಯಲ್ಲಿ ಹೊಸಗನ್ನಡ ಶೈಲಿ ಭಾಷೆಗಳು, ಧೋರಣೆಗಳು ಚಿಗುರುತ್ತಿದ್ದುದು. ಇಂದು ಪತ್ರಿಕೆಯ ಭಾಷೆ

ತುಂಬಾ ಮುಂದೆ ಸಾಗಿದೆ. ಸ್ಪಷ್ಟತೆ, ನಿಷ್ಕೃಷ್ಟತೆ, ಸರಳತೆ, ಸಂಕ್ಷಿಪ್ತತೆ ಮುಂತಾದ ಅಗತ್ಯ ಗುಣಗಳನ್ನು ಮೈಗೂಡಿಸಿಕೊಂಡು ಆಕರ್ಷಕವಾಗಿ ಬೆಳೆದಿದೆ. ಈ ಪ್ರವೃತ್ತಿ .. ಹಾಗೂ ಪ್ರಗತಿಯ ಮುನ್ಸೂಚನೆಯನ್ನು ಅರವತ್ತು ವರ್ಷ ಹಿಂದಿನ ಈ ಪತ್ರಿಕೆಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಹಿಂದಿನ ಗಡುಸಾದ, ಕ್ಲಿಷ್ಟವಾದ ಶೈಲಿಯಿಂದ ಉದ್ದುದ್ದನೆಯ ವಾಕ್ಯಗಳ ರೀತಿಯಿಂದ ಸರಳತೆಯ ಕಡೆಗೆ ಸಾಗುವ ಪ್ರಯತ್ನಗಳನ್ನು ಕಾಣಬಹುದು. ಇದು ಕಾಲಮಹಿಮೆ ಹೇಗೊ, ಹಾಗೆಯೆ ಈ ಕೆಲಸ ಮಾಡಿದ ಡಿವಿಜಿ ಅಂಥವರ ಸಾಧನೆಯೂ ಹೌದು.

ಈ ಪತ್ರಿಕೆ ನಿಂತ ಮರುವರ್ಷವೇ 1925ರಲ್ಲಿ ಡಿವಿಜಿ ಮತ್ತೊಂದು ಪತ್ರಿಕೆಯನ್ನು ಹೊರಡಿಸಿದರು. ಅದು 'ಕರ್ನಾಟಕ' ಎಂಬ ಇಂಗ್ಲಿಷ್ ಮಾಸಪತ್ರಿಕೆ. ಇದೂ ಎರಡು ವರ್ಷಗಳಲ್ಲಿ ಕೊನೆಗೊಂಡಿತು. 1925–26ರಲ್ಲಿ 'ಇಂಡಿಯನ್ ರೆವ್ಯೂ ಆಫ್ ರೆವ್ಯೂಸ್' ಮತ್ತೆ ಕೆಲವು ದಿನ ನಡೆಯಿತು. ಅಲ್ಲಿಂದಾಚೆಗೆ ಕೆಲವು ವರ್ಷ ಡಿವಿಜಿ ಇತರ ಪತ್ರಿಕೆಗಳಿಗೆ ಬರೆಯುತ್ತಿದ್ದರೇ ವಿನಾ ತಮ್ಮದೇ ಪತ್ರಿಕೆ ಇರಲಿಲ್ಲ. ಗೋಖಲೆ ಸಾರ್ವಜನಿಕ ಸಂಸ್ಥೆ ನೆಲೆಗೊಂಡಮೇಲೆ, 1949ರಲ್ಲಿ ಅದರ ಮುಖಪತ್ರವಾಗಿ 'ಪಬ್ಲಿಕ್ ಅಫೇರ್ಸ್' ಎಂಬ ಮಾಸಿಕ 'ಸಾರ್ವಜನಿಕ' ಎಂಬ ಕನ್ನಡ ಪುರವಣಿಯ ಜೊತೆಗೆ ಆರಂಭವಾಯಿತು. ಅಂದಿನಿಂದ ಡಿವಿಜಿ ತಮ್ಮ ಕೊನೆಯ ವರೆಗೂ ಈ ಪತ್ರಿಕೆಯನ್ನು ನಡೆಸಿದರು.

ಪತ್ರಿಕೆಯ ಗಾತ್ರ ಕಿರಿದು. ಪ್ರಸಾರವೂ ಅಷ್ಟೆ ಸದಸ್ಯರಲ್ಲಿ ಮಾತ್ರ. ಪ್ರಚಲಿತ ವಿದ್ಯಮಾನಗಳ ಬಗ್ಗೆ ವಿಮರ್ಶೆ, ಟೀಕೆ–ಟಿಪ್ಪಣಿಗಳು, ಗೋಖಲೆ ಸಂಸ್ಥೆಯ ಕಾರ್ಯಕ್ರಮ ವಿವರಗಳು ಉಪನ್ಯಾಸಾದಿ ಸಮಾರಂಭಗಳ ವರದಿ ಸಾರಾಂಶಗಳು. ಇವುಗಳ ನಡುವೆ ಪ್ರತ್ಯೇಕ ಸ್ವಂತಿಕೆಯ ಲೇಖನಗಳಿಗೆ ಅವಕಾಶ ಕಡಿಮೆ. ಆದರೆ ಇದ್ದುದರಲ್ಲೇ ಡಿವಿಜಿ ತಮ್ಮ ಚಿಂತನವನ್ನು ನೀಡುತ್ತಿದ್ದರು. ಅವರ ಟಿಪ್ಪಣಿಗಳಂತೂ ವಿಷಯಗಳ ಅಧ್ಯಯನ ಹಾಗೂ ಅವುಗಳ ಮೇಲಿನ ಸಮತೂಕದ ವಿಮರ್ಶೆಗಳಿಗೆ ಮಾದರಿ. ಯಾವುದೇ ಸಮಸ್ಯೆ ಆಗಲಿ, ಪಕ್ಷಪಾತದ ದೃಷ್ಟಿಯನ್ನು ಬಿಟ್ಟು, ಉದ್ವೇಗರಹಿತವಾಗಿ, ಅದರ ಎಲ್ಲ ಮುಖಗಳನ್ನೂ ಪರಿಶೀಲಿಸುವುದು, ದೇಶದ ಹಿತದೃಷ್ಟಿಯಿಂದ ಅದನ್ನು ಪರಾಮರ್ಶಿಸುವುದು– ಈ ತೆರನಾದ ವಿಮರ್ಶೆ ಮೊದಲಿನಿಂದ ಡಿವಿಜಿಯವರ ದಾರಿ. ಅದು ತಮ್ಮ ಗುರು ಗೋಖಲೆ, ಶ್ರೀನಿವಾಸ ಶಾಸ್ತ್ರಿಗಳಿಂದ ಕಲಿತದ್ದು. ಇಂಗ್ಲೆಂಡಿನ ಮಿತವಾದಿ ಚಿಂತಕರು ಮಿಲ್, ಮಾರ್ಲೆ ಮುಂತಾದವರಿಂದ ಕಲಿತದ್ದು. ಅಂಥ ಸಮಚಿತ್ತದ ಅನುದ್ವೇಗಕರ ವಿಮರ್ಶೆಯೆ ಪಬ್ಲಿಕ್ ಅಫೇರ್ಸ್ ಪತ್ರಿಕೆಯ ದಾರಿ. "Public Life must be spiritualized"

ಎಂಬ ಗೋಖಲೆಯುವರ ಮಹಾವಾಕ್ಯವೇ ಇದರ ಉದ್ದೇಶಮಂತ್ರ. "ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ" (ರಾಜ್ಯದ ಸಮಸ್ತ ಲೌಕಿಕ ಹಿತಸಾಧನೆಗೂ ಜ್ಞಾನಿಗಳ ಕಾರ್ಯವೇ ಕಾರಣ) ಎನ್ನುವ ಶ್ರೀ ವಿದ್ಯಾರಣ್ಯರ ಮಾತು ಪತ್ರಿಕೆಯ ತಲೆಬರೆಹ.

ಅಕ್ಟೋಬರ್ 1975ರಲ್ಲಿ ಅವರ ನಿಧನದವರೆಗೂ ಡಿವಿಜಿ ಪತ್ರಿಕೆಗೆ ಬರೆದರು. ಬಹುಪಾಲು ಟಿಪ್ಪಣಿಗಳು. ಅವು ಅವರ ವಿಷಯ ಪರಾಮರ್ಶೆಯ ಸಾರಸರ್ವಸ್ವಗಳು. ಪತ್ರಿಕೆಯ ಅಕ್ಟೋಬರ್–ನವೆಂಬರ್ ತಿಂಗಳ ಸಂಯುಕ್ತ ಸಂಚಿಕೆ ಡಿವಿಜಿಯವರ ಸಂಸ್ಮರಣೆಯ ವಿಶೇಷಾಂಕವಾಗಿ ಹೊರ ಬಂದಿತು. ಶ್ರೀ ವಿ.ಎಸ್. ನಟರಾಜನ್ ತಮ್ಮ ಶ್ರದ್ಧಾಂಜಲಿಯಲ್ಲಿ ಡಿವಿಜಿಯವರ ಪತ್ರಿಕಾ ವ್ಯವಸಾಯವನ್ನು ಹೀಗೆ ಬಣ್ಣಿಸಿದ್ದಾರೆ–"ಡಾ।। ಗುಂಡಪ್ಪನವರು ಮಹಾ ಪತ್ರಕರ್ತರು. ಅವರ ಬರೆಹದ ಶೈಲಿ ಗ್ಲಾಡ್‌ಸ್ಟನ್ ಶೈಲಿಯ ಹಾಗೆ, ಸ್ಪಷ್ಟ ಸಂಕ್ಷೇಪ ಹಾಗೂ ಹರಿತ. ಗೋಖಲೆ ಸಂಸ್ಥೆಯ ಪತ್ರಿಕೆಯ 'ಡಿವಿಜಿ' ಎಂಬ ಅಂಕಿತದಲ್ಲಿ ಅವರು ಬರೆಯುತ್ತಿದ್ದ ಟಿಪ್ಪಣಿಗಳು ಪ್ರಚಲಿತ ಘಟನೆಗಳನ್ನು ಯಥಾವತ್ತಾಗಿ ನಿಚ್ಚಳವಾಗಿ ಚಿತ್ರಿಸುತ್ತಿದ್ದವು. ಮಾತ್ರವಲ್ಲ ಅವು ಗಂಭೀರ ಸಾಹಿತ್ಯಕ್ಕೆ ಉದಾಹರಣೆ ಕೂಡ. ಅವರ ಟೀಕೆ ಯಾವಾಗಲೂ ಸೌಜನ್ಯಯುತ. ಅವರ ಟಿಪ್ಪಣಿಗಳನ್ನೆಲ್ಲ ಕೂಡಿಸಿ ಪುಸ್ತಕವಾಗಿ ಪ್ರಕಟಿಸಬೇಕು. ಅದರಿಂದ ಮುಂದಿನ ಪೀಳಿಗೆಗೆ ಲಾಭ !"

ಮುಕ್ತ ಬರೆಹಗಾರರಾಗಿ (Free-lance writer) ಡಿವಿಜಿ ಅನೇಕ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದರು. ಅರ್ಥವಿಷಯ, ರಾಜಕಾರಣ, ಧರ್ಮ, ಸಾಹಿತ್ಯ ಚಿಂತನೆ ಇತ್ಯಾದಿ ವಿಷಯಗಳು. ಮದರಾಸಿನ 'ಹಿಂದೂ', 'ಸ್ವರಾಜ್ಯ', ಮಚಲೀಪಟ್ಟಣದ 'ತ್ರಿವೇಣಿ' ಮೊದಲಾದ ಪತ್ರಿಕೆಗಳಲ್ಲಿ ಬರೆದರು. ಕನ್ನಡದಲ್ಲಂತೂ ಹೇರಳವಾಗಿ ಬರೆದರು. ಕನ್ನಡದಷ್ಟೇ ಇಂಗ್ಲಿಷಿನಲ್ಲೂ ಪ್ರಭಾವಯುತವಾಗಿ, ಆಕರ್ಷಕವಾಗಿ ಬರೆಯಬಲ್ಲವರಾಗಿದ್ದರು. ಮದರಾಸಿನ 'ಹಿಂದೂ' ಪತ್ರಿಕೆಗೆ ಸಂಪಾದಕರಾಗಲು ಆಹ್ವಾನವೂ ಬಂದದ್ದುಂಟು. ಡಿವಿಜಿ ಒಪ್ಪಿಕೊಳ್ಳಲಿಲ್ಲ.

ಡಿವಿಜಿ ಪತ್ರಿಕೆಗಳಿಗೆ ಬರೆದದ್ದು, ಪತ್ರಿಕೆಗಳನ್ನು ನಡೆಸಿದ್ದು ಅವರ ಪತ್ರಿಕಾ ವ್ಯವಸಾಯದ ಒಂದು ಮುಖ. ಪತ್ರಿಕಾ ವ್ಯವಸಾಯದ ಬಗ್ಗೆ ಆಳವಾದ ಚಿಂತನೆ, ಮಾರ್ಗದರ್ಶಕ ಸೂತ್ರಗಳ ರಚನೆ ಇನ್ನೊಂದು ಮುಖ. ಮೂರನೆಯ ಮುಖವೂ ಉಂಟು. ಅದೆಂದರೆ ಪತ್ರಕರ್ತರ ಸಂಘಟನೆ.

ಪತ್ರಿಕೆಯ ಕೆಲಸಕ್ಕೆ ಡಿವಿಜಿ ಕೈಹಾಕಿದ್ದು ಆಕಸ್ಮಿಕ, ಹೊಟ್ಟೆಪಾಡಿಗಾಗಿ ಎಂದು ನೋಡಿದ್ದೇವೆ. ಆದರೆ ಕ್ಷಿಪ್ರದಲ್ಲೇ ಅವರು ನೀರಿಗೆ ಇಳಿದ ಮೀನು ಆದರು. ಪತ್ರಿಕಾವೃತ್ತಿಯ ಆಳ–ಅಗಲ–ಎತ್ತರ ಎಲ್ಲವನ್ನೂ ಅಳತೆ ಮಾಡಿದರು. ಅದರ ನಾನಾ ವ್ಯಾಪಾರಗಳು; ಕುಂದು–ಕೊರತೆಗಳು, ಇಷ್ಟ–ಅನಿಷ್ಟಗಳು, ಅಗತ್ಯಗಳು, ಅರ್ಹತೆಗಳು, ಶೈಲಿ ಧಾಟಿ ಭಾಷೆಗಳು, ಕಾನೂನು ನಿಯಮಗಳು, ಎಲ್ಲವನ್ನೂ ಅನುಭವದಿಂದ, ಅಧ್ಯಯನದಿಂದ ಅರಿತುಕೊಂಡರು. ಇವೆಲ್ಲದರ ಬಗ್ಗೆ ಆಳವಾಗಿ ಯೋಚನೆ ಮಾಡಿದರು, ಬರೆದರು. ಅಷ್ಟು ಹಿಂದೆಯೆ ಈ ಒಂದು ವೃತ್ತಿಯ ಆದ್ಯಂತವನ್ನೆಲ್ಲ ಒಳಹೊರಗನ್ನೆಲ್ಲ ಕುರಿತು ಚಿಂತಿಸಿ ತಿಳಿಸಿದವರು ಪ್ರಾಯಶಃ ಡಿವಿಜಿ ಒಬ್ಬರೇ.

ಈ ಚಿಂತನಕ್ಕೆ ಸಾಕ್ಷಿ ಅವರ ವೃತ್ತಪತ್ರಿಕೆ ಎಂಬ ಕೈಹೊತ್ತಿಗೆ. 1928ರಲ್ಲಿ ಮೊದಲು ಪ್ರಕಟವಾಯಿತು. ಬಾಗಲಕೋಟೆಯ ಪತ್ರಕರ್ತರ ಸಮ್ಮೇಳನದ ಅಧ್ಯಕ್ಷ ಭಾಷಣದ ವಿಸ್ತೃತರೂಪ. 1966–67 ಡಿವಿಜಿ ಅವರ ಪತ್ರಿಕಾವೃತ್ತಿಯ 60ನೆಯ ವರ್ಷ. ಅದರ ನೆನಪಿಗೆ ಎಂದು ಈ ಪುಸ್ತಕ ಪರಿಷ್ಕೃತಗೊಂಡು, ಹಿಗ್ಗಿ ಎರಡನೆಯ ಮುದ್ರಣ ಕಂಡಿತು. ಇದು ಪತ್ರಿಕಾ ವೃತ್ತಿಯ ಒಂದು ಕೈಪಿಡಿ, ಮಾರ್ಗದರ್ಶಕ ಕೃತಿ.

ವೃತ್ತಪತ್ರಿಕೆಯ ಸ್ವರೂಪ, ಕರ್ತವ್ಯ, ಅದರ ಸಹಾಯ, ಪತ್ರಿಕಾ ಸ್ವಾತಂತ್ರ್ಯ, ಪತ್ರಿಕೆ ಮತ್ತು ಶಾಸನ ಸಂಸ್ಥೆ, ಪತ್ರಿಕಾ ಸ್ವಾತಂತ್ರ್ಯದಲ್ಲಿ ಸ್ಥಾನ ಗೌರವ, ಪತ್ರಿಕೋದ್ಯೋಗಿಯ ಪ್ರತಿಜ್ಞೆ, ಮೈಸೂರಿನಲ್ಲಿ ಪತ್ರಿಕಾವೃತ್ತಿ ಹುಟ್ಟಿ ಬೆಳೆದ ಬಗೆ, ಅದರ ಇತಿಹಾಸ, ಆದ್ಯ ಪತ್ರಕರ್ತರು, ಮುದ್ರಣ ಯಂತ್ರ ಸೌಕರ್ಯಗಳ ವಿಚಾರ, ಪತ್ರಿಕಾ ಲೇಖನದ ಶೀಲ ಸ್ವಭಾವಗಳು, ವರದಿ, ಟೀಕೆಗಳು, ಶೈಲಿ, ಜ್ಞಾನಪ್ರಸಾರ, ಪದಗಳ ಬಳಕೆ, ಕನ್ನಡ ಭಾಷಾ ಜ್ಞಾನ, ಇತರ ಭಾಷೆಗಳ ಪದಗಳ ನೆರವು ಟೀಕೆಯಲ್ಲಿನ ಹಿಡಿತ, ವಿವರಣೆಯಲ್ಲಿನ ಹಾಳತ, ವಿಮರ್ಶೆಯಲ್ಲಿ ಸಮತೂಕ, ಉದ್ವೇಗರಾಹಿತ್ಯ, ಮೇಲಾಗಿ ಲೋಕಹಿತ ಚಿಂತನೆ, ಪತ್ರಕರ್ತ ತಿಳಿದಿರಬೇಕಾದ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ನ್ಯಾಯ ತತ್ವಶಾಸ್ತ್ರ, ತರ್ಕ ವಿಮರ್ಶೆಗಳ ಪರಿಚಯ, ಜವಾಬ್ದಾರಿಯ ಬರವಣಿಗೆ, ಪತ್ರಿಕಾ ಶಾಸನ, ಪತ್ರಕರ್ತರ ಸಂಘಟನೆ, ಎಲ್ಲವನ್ನೂ ಡಿವಿಜಿ ವಿವರಿಸಿದ್ದಾರೆ. ಒಂದು ದೊಡ್ಡ ವಿಷಯ-ಇವತ್ತು ನಾಲ್ಕನೆಯ ಆಯಾಮ (Fourth estate) ಎನ್ನಿಸಿ ಕೊಂಡಿರುವ ಈ ವಿಸ್ತಾರವಾದ ಪ್ರಮುಖವಾದ–ಕ್ಷೇತ್ರದ ಬಗ್ಗೆ ಇಷ್ಟು ಅಡಕವಾಗಿ, ಸಮಗ್ರವಾಗಿ, ಸ್ಪಷ್ಟವಾಗಿ ತಿಳಿಸುವ ಕೃತಿ ಇದೊಂದೇ. ಡಿವಿಜಿ

ಅವರ ಅನುಭವಕ್ಕೆ, ಅಧ್ಯಯನಕ್ಕೆ, ಅಭಿವ್ಯಕ್ತಿಯ ಸಾಮರ್ಥ್ಯಕ್ಕೆ ಇದು ಸಾಕ್ಷಿ.

ಇವೊತ್ತು ಪತ್ರಿಕೆಗಳಲ್ಲಿ ನಾನಾ ಬಗೆಯ ಲೇಖನ ಬರುತ್ತವೆ. ಮನಸ್ಸನ್ನು ಅರಳಿಸುವುದಕ್ಕಿಂತ ಕೆರಳಿಸುವಂಥವೇ ಜಾಸ್ತಿ. ಉದ್ರೇಕ, ಉದ್ವೇಗಗಳ ವಿಜೃಂಭಣೆ, ದೂಷಣೆಗಳು, ವೈಯಕ್ತಿಕ ನಿಂದೆಗಳು, ಗುಲ್ಲು ಎಬ್ಬಿಸುವಂಥದು, ಇವೇ ಹೆಚ್ಚು. ಅಲ್ಲದೆ ಪತ್ರಿಕಾ ವೃತ್ತಿ ಈಗ ದೊಡ್ಡ ವ್ಯಾಪಾರ. ಭಾರಿ ಹಣಕಾಸಿನ ವ್ಯವಹಾರ. ಮೊದಲಿನಂತೆ ತಪಸ್ಸು ಆಗಿಲ್ಲ. ಕರ್ತವ್ಯ ದೃಷ್ಟಿ ಇಲ್ಲ. ಧರ್ಮದೃಷ್ಟಿ ಕಡಿಮೆ. ಹೇಗಾದರೂ ಮಾಡಿ ಪತ್ರಿಕೆಯ ಪ್ರಸಾರ ಹೆಚ್ಚಿಸುವುದು, ಲಾಭ ಹೆಚ್ಚಿಸುವುದು ಇದೇ ಗುರಿ. ರಾಜಕೀಯ–ಸ್ಥಿತಿಗತಿಗಳ ದುರ್ಲಾಭ ಪಡೆಯುವುದು, ವ್ಯಕ್ತಿಗತ ವಿಷಯಗಳ ಗುಲ್ಲು ಎಬ್ಬಿಸಿ ಚಾರಿತ್ರ್ಯ ಭಂಜನೆ ಮಾಡಿ, ಲಾಭ ಗಳಿಸುವುದು, ಇತ್ಯಾದಿ ಪ್ರವೃತ್ತಿ ಹೆಚ್ಚಿದೆ. ಇದಕ್ಕೆ ಹೋಲಿಸಿದರೆ, ಡಿವಿಜಿ ಅವರ ಪತ್ರಿಕಾ ಕೆಲಸದ ರೀತಿ, ಅವರ ಚಿಂತನೆ ಇವುಗಳ ಮಹತ್ವ ಅರಿವಾಗುತ್ತದೆ.

ಪತ್ರಿಕೆಗಳಲ್ಲಿ ವಿಚಾರ ಸ್ವಾತಂತ್ರ್ಯ ಎಷ್ಟುಮಟ್ಟಿಗೆ ಇರಬೇಕು ಎನ್ನುವುದರಲ್ಲೂ ಡಿವಿಜಿಯವರದು ಖಚಿತವಾದ ಅಭಿಪ್ರಾಯ. ಪತ್ರಕರ್ತ ಯಾವ ಬಾಹ್ಯ ನಿರ್ಬಂಧಕ್ಕೂ ಒಳಗಾಗುವಂತಾಗಬಾರದು. ಆದರೆ ತಾನೇ ಹಾಕಿಕೊಂಡ ಶಿಸ್ತು ಸಂಯಮಗಳನ್ನು ಪಾಲಿಸಬೇಕು. ಈ ಆತ್ಮಾನುಶಾಸನ ಅತ್ಯಗತ್ಯ. ಇದು ಡಿವಿಜಿ ಅವರ ಖಚಿತ ಅಭಿಪ್ರಾಯ. ಅವರು ಪತ್ರಿಕಾ ಕೆಲಸ ಮಾಡಿದ್ದೂ ಈ ರೀತಿಯಲ್ಲೇ.

ತಮ್ಮ ಆದರ್ಶಪ್ರಾಯವಾದ ಪತ್ರಿಕೆಯ ಸ್ವರೂಪವನ್ನೂ ಕಲ್ಪಿಸಿಕೊಂಡಿದ್ದರು. ಆ ಸ್ವರೂಪ ಹೀಗೆ—

"ನಾನು ಆಗಾಗ ಮನಸ್ಸಿನಲ್ಲಿ ಆದರ್ಶಪ್ರಾಯವಾಗಿ ಕಲ್ಪಿಸಿಕೊಳ್ಳುವ ದಿನ ಪತ್ರಿಕೆ ನಾಲ್ಕು ದೊಡ್ಡ ಪುಟಗಳಿಗಿಂತ ಹೆಚ್ಚು ಇರತಕ್ಕದ್ದಲ್ಲ–ಈಗಿನ ಹಿಂದೂ, ಡೆಕನ್ ಹೆರಾಲ್ಡ್ ಮೊದಲಾದ ದಿನಪತ್ರಿಕೆಗಳ ಆಕಾರ. ಒಂದನೆಯ ಪುಟ ಮುಖ್ಯ ಮುಖ್ಯ ವಾರ್ತೆಗಳಿಗಾಗಿ. ಎರಡನೆಯ ಪುಟ : (1) ಸಂಪಾದಕೀಯ ಲೇಖನಕ್ಕಾಗಿ : ಸಂಪಾದಕೀಯ ಲೇಖನ ಪ್ರತಿದಿನವೂ ನಿರ್ಬಂಧವಲ್ಲ; ದೊಡ್ಡ ವಿಷಯವಿದ್ದಾಗ ಮಾತ್ರ ಇರಬಹುದು. (2) ಮುಖ್ಯ ಮುಖ್ಯವಾದ ಭಾಷಣಗಳ ಸಾರಾಂಶ; ಒಂದು ಭಾಷಣದ ಸಾರಾಂಶ 20–25 ಪಂಕ್ತಿಗಳಿಗಿಂತ ಹೆಚ್ಚಾಗಿ ಇರತಕ್ಕದ್ದಲ್ಲ. ಮೂರನೆಯ ಪುಟದ ಮೇಲರ್ಧ ಮಹಾಜನರ ಪತ್ರಗಳಿಗಾಗಿ.

ಉಳಿದರ್ಧ ಯಾವುದಾದರೂ ಒಂದು ವಿಶೇಷ ವಿಷಯಕ್ಕೆ ಮೀಸಲಾದ ಲೇಖನಕ್ಕಾಗಿ. ನಾಲ್ಕನೆಯ ಪುಟ ಜಾಹೀರಾತುಗಳಿಗಾಗಿ.

"ಒಟ್ಟು ಪತ್ರಿಕೆ 10–15 ನಿಮಿಷಗಳಲ್ಲಿ ಓದಿ ಮುಗಿಸುವಷ್ಟಾಗಿರಬೇಕು. ಭಾಷೆಯೂ ಶೈಲಿಯೂ ಸುಲಭವಾಗಿದ್ದು ಮಿತವಾದ ಪದಗಳಲ್ಲಿ ಅಡಕವಾಗಿರಬೇಕು.

"ಬಹು ಮುಖ್ಯವಾದ ಅಥವಾ ವಿಶೇಷ ಮಹತ್ತ್ವದ ಸಂದರ್ಭಗಳಲ್ಲಿ ಭಾಷಣಗಳನ್ನೂ ಲೇಖನಗಳನ್ನೂ ಪರಿಶಿಷ್ಟ ಸಂಚಿಕೆಯಾಗಿ ಕೊಡಬಹುದು. ಈ ಪರಿಶಿಷ್ಟಗಳನ್ನೂ ಮೊದಲ ಪುಟದ ಸುದ್ದಿಗಳನ್ನೂ ಎರಡನೆಯ ಪುಟದ ಸಂಪಾದಕೀಯ ಟಿಪ್ಪಣಿಗಳನ್ನೂ ಓದಿದವರು ಹೆಚ್ಚು ವಿವರಣೆ ಬೇಕೆಂದರೆ ಓದಿಕೊಳ್ಳ ಬಹುದು.''

ಡಿವಿಜಿ ದಿನಪತ್ರಿಕೆಯನ್ನು ನಡೆಸಿದ್ದರೆ ಈಗ ನಡೆಸುತ್ತಿದ್ದರೇನೊ!

ಪತ್ರಕರ್ತರಿಗೆ ಇರಬೇಕಾದ ದೃಷ್ಟಿ, ಸಿದ್ಧತೆ ಅರ್ಹತೆಗಳನ್ನೂ ಡಿವಿಜಿ ಸ್ಪಷ್ಟವಾಗಿ ಹೇಳಿದ್ದಾರೆ. ಅಮೆರಿಕಾದ ಮಿಸ್ಸೌರಿ ಪಟ್ಟಣದಲ್ಲಿರುವ ಪತ್ರಿಕೋದ್ಯೋಗ ಕಲಾಶಾಲೆಯ ಸ್ಥಾಪಕನಾದ ವಾಲ್ಟರ್ ವಿಲಿಯಮ್ಸ್ ರಚಿಸಿದ ಪತ್ರಿಕೋದ್ಯೋಗಿಯ ಪ್ರತಿಜ್ಞೆಯನ್ನು ಅಲ್ಲಿನ ವಿಶ್ವವಿದ್ಯಾನಿಲಯದ ಸಭಾಮಂದಿರದಲ್ಲಿ ಕಂಚಿನ ಹಲಗೆಯ ಮೇಲೆ ಕೆತ್ತಿದೆಯಂತೆ. ಅದನ್ನು ಡಿವಿಜಿ ಉದ್ಧರಿಸಿದ್ದಾರೆ. ಮಾನವ ಹಿತ, ಲೋಕ ಹಿತ, ವ್ಯಕ್ತಿ ಸ್ವಾತಂತ್ರ್ಯ, ಜೊತೆಗೇ ಸಮಾಜದ ಹಿತ ಇವೆಲ್ಲವೂ ಪತ್ರಕರ್ತನ ದಾರಿದೀಪ ಆಗಬೇಕು ಎನ್ನುವುದು ಡಿವಿಜಿ ಅವರ ಮತ ಮತ್ತು ಮಾರ್ಗ.

"ನಮ್ಮ ಪತ್ರಿಕೋದ್ಯಮಿಗಳಲ್ಲಿ ನನ್ನದು ಎರಡೇ ವಿಜ್ಞಾಪನೆ. ಮೊದಲನೆಯದು : ಪ್ರತಿಯೊಬ್ಬ ಪತ್ರಕರ್ತನೂ ಯತ್ಕಿಂಚಿತ್ತಾದರೂ ಸಾಹಿತ್ಯ ವ್ಯಾಸಂಗ ಮಾಡಬೇಕು. ಯಾವುದಾದರೂ ಒಂದು ಕಾವ್ಯವನ್ನು ಬಲವಾಗಿ ಹಿಡಿಯಬೇಕು. ಶ್ರೀಮದ್ರಾಮಾಯಣವನ್ನು ಓದಬೇಕು ಎನ್ನುತ್ತೇನೆ ನಾನು. ಅದಿಲ್ಲ ಗದುಗಿನ ಭಾರತ ಓದಬೇಕು. ಆಮೂಲಾಗ್ರವಾಗಿ ಚೆನ್ನಾಗಿ ಓದಬೇಕು.

"ಇದರ ಜೊತೆಗೆ ಷೇಕ್ಸ್‌ಪಿಯರ್, ಡಿಕೆನ್ಸ್ ಇವರ ಕೃತಿಗಳನ್ನು ಸ್ವಲ್ಪಸ್ವಲ್ಪವಾದರೂ ಓದಿದ್ದರೆ ಪ್ರಪಂಚವೀಕ್ಷೆ ವಿಸ್ತಾರವಾಗುತ್ತದೆ. ಮುಖ್ಯವಾಗಿರಬೇಕಾದ್ದು ವಿಸ್ತಾರವಾದ ಸಮೀಕ್ಷೆ..... ವಿಸ್ತಾರವಾದ ನೋಟವಾಗಬೇಕು. ಅದಾಗಬೇಕಾದರೆ ಯಾವುದಾದರೂ ಒಂದೆರಡು ಮಹಾಕಾವ್ಯಗಳನ್ನು ವ್ಯಾಸಂಗ ಮಾಡಲೇಬೇಕು. ಅದರ ಜೊತೆಗೆ ಯಾವುದಾದರೂ ಶಾಸ್ತ್ರ ಅಧ್ಯಯನ ಮಾಡಬೇಕು. ರಾಜ್ಯಶಾಸ್ತ್ರ ಓದಲಿ, ಅರ್ಥಶಾಸ್ತ್ರ ಓದಲಿ, ವ್ಯವಹಾರ ನ್ಯಾಯಶಾಸ್ತ್ರ ಓದಲಿ.

ಯಾವುದಾದರೊಂದು ಶಾಸ್ತ್ರ ಒಂದು ಕಾವ್ಯ ಅಭ್ಯಾಸ ಮಾಡಿದರೆ ಅವರ ಬರವಣಿಗೆ ಸ್ವಾರಸ್ಯವುಳ್ಳದ್ದಾಗುತ್ತದೆ.'' ಎಂದಿದ್ದಾರೆ.

ಪತ್ರಿಕೆಯ ಭಾಷೆ, ಶೈಲಿ ಬಗ್ಗೆ ಸಹ ಡಿವಿಜಿ ಅವರದು ತೆರೆದ ಮನಸ್ಸು. ಮಡಿವಂತಿಕೆಯಲ್ಲ, ಮುಟ್ಟಿದರೆ ಮುನಿಯುತನ ಅಲ್ಲ. ಹಾಗೆಂದು ಶುದ್ಧತೆ, ಶಿಸ್ತು, ಸಂಯಮಗಳನ್ನು ಬಿಡುವುದೂ ಅಲ್ಲ. ವಿಷಯ ಜನರಿಗೆ ನೇರವಾಗಿ ತಲುಪು ವುದಕ್ಕೆ ಹೇಗಿರಬೇಕೊ ಅಂಥ ಭಾಷೆ, ಶೈಲಿಗಳನ್ನು ಪ್ರತಿಪಾದಿಸಿದ್ದಾರೆ. ಡಿವಿಜಿ ಅವರ ಪತ್ರಿಕಾಲೇಖನಗಳೇ ಇದಕ್ಕೆ ಮಾದರಿ.

ಪತ್ರಕರ್ತರ ಸಂಘಟನೆ, ಅವರ ಯೋಗಕ್ಷೇಮದ ಹಿತಚಿಂತನೆ ಡಿವಿಜಿ ಅವರ ಇನ್ನೊಂದು ಸಾಧನೆ. 1908ರಲ್ಲಿ ವಿ.ಪಿ. ಮಾಧವರಾಯರು ಜಾರಿಗೆ ತಂದ ಪತ್ರಿಕಾ ನಿರ್ಬಂಧ ಕಾನೂನನ್ನು ವಿರೋಧಿಸಿದ್ದನ್ನು ಆಗಲೇ ನೋಡಿದ್ದೇವೆ. ಆ ಕಾನೂನನ್ನು ತೆರವು ಮಾಡಿಸಲು ಡಿವಿಜಿ ಬೇಕಾದಷ್ಟು ಓಡಾಡಿದರು. ಆಗ ಚಳುವಳಿಯ ಬಿರುಸು ಇರಲಿಲ್ಲ. ಮೇಲಾಗಿ ಡಿವಿಜಿಗೆ ಚಳುವಳಿಗಿಂತ ಮನವೊಲಿಸುವ ಸಾಧುಮಾರ್ಗವೇ ಪ್ರಿಯ.

ಮಾಧವರಾಯರ ನಂತರ ಬಂದ ದಿವಾನರುಗಳ ಕಾಲದಲ್ಲಿ ಆ ಕಾನೂನಿನ ಒತ್ತಡ ಅಷ್ಟೇನೂ ಬಿರುಸಾಗಲಿಲ್ಲವಾದ್ದರಿಂದ ಡಿವಿಜಿ ಚಳುವಳಿಗೆ ಇಳಿಯ ಬೇಕಾಗಲೂ ಇಲ್ಲ.

ಪತ್ರಕರ್ತರ ಸಂಘಟನೆಗಾಗಿ ಡಿವಿಜಿ ಮಾಡಿದ್ದು ಆದ್ಯ ಕಾರ್ಯ. 1932ರಲ್ಲಿ ಮೈಸೂರು ಪತ್ರಕರ್ತರ ಸಂಘವನ್ನು ಆರಂಭಿಸಿದರು. ಮಹಾರಾಜರೇ ಪೋಷಕರು. ಪ್ರಾರಂಭದ ಸಭೆಗೆ ಅಂದಿನ ಯುವರಾಜರೇ ಅಧ್ಯಕ್ಷರು. 'ಹಿಂದೂ' ಪತ್ರಿಕೆಯ ಸಂಪಾದಕ ಎಂ. ರಂಗಸ್ವಾಮಿ ಅಯ್ಯಂಗಾರ್ ಅವರು ಆರಂಭ ಭಾಷಣ ಮಾಡಿದರು. ದಿವಾನ್ ಮಿರ್ಜಾ ಆದಿಯಾಗಿ ಅನೇಕ ಗಣ್ಯರ ಸಭೆ. ಅಂದು ಡಿವಿಜಿ ಮಾಡಿದ ಸ್ವಾಗತ ಭಾಷಣದಲ್ಲಿ ಅವರ ಪತ್ರಿಕಾವೃತ್ತಿಯ ಅನುಭವ, ಕಳಕಳಿ, ದೂರದೃಷ್ಟಿಗಳು ಕೆನೆಗಟ್ಟಿದ್ದವು. ಅಧಿಕಾರಿಗಳಿಗ ಹಾಗೂ ಜನತೆಗೆ ಪತ್ರಿಕೆಯ ಉಪಯುಕ್ತತೆ ಹಾಗೂ ಸ್ವಾತಂತ್ರ್ಯದ ಬಗ್ಗೆ ಮನವರಿಕೆ, ಪತ್ರಕರ್ತರ ಮನ ರಂಜನೆಗೆ ವಿಚಾರ ವಿನಿಮಯ ಸಂಪರ್ಕಗಳಿಗೆ ಅವಕಾಶ, ಆಧಾರ ಗ್ರಂಥಗಳ ಭಂಡಾರ, ಪತ್ರಕರ್ತರಿಗೆ ಪ್ರಕಾಶಕರಿಗೆ ಅಗತ್ಯವಾದ ಆಸಕ್ತಿಯುತವಾದ ಉಪನ್ಯಾಸ ಚರ್ಚೆಗಳು, ವೃದ್ಧಾಪ್ಯ ಕಾಯಿಲೆಗಳ ತೊಂದರೆಗೆ ಒಳಗಾದ ಪತ್ರಕರ್ತರಿಗೆ ನೆರವು, ಪತ್ರಕರ್ತರ ಅನಾಥ ಅವಲಂಬಿತರಿಗೆ ನೆರವು–ಮುಂತಾದ ಯೋಜನೆಗಳನ್ನು ಕಲ್ಪಿಸಿದ್ದರು, ಡಿವಿಜಿ. ಬ್ರಿಟನ್ನಿನಲ್ಲಿ ಪತ್ರಕರ್ತರಿಗೆ ಅನೇಕ ರಕ್ಷಣೆ ಸೌಲಭ್ಯ ಇವೆ.

ಇನ್‌ಸ್ಟಿಟ್ಯೂಟ್ ಆಫ್ ಜರ್ನಲಿಸ್ಟ್ಸ್‌ನಲ್ಲಿ ತರಬೇತಿಗೆ ಅವಕಾಶವಿದೆ. ಆಪದ್ಧನ ಸೌಲಭ್ಯ, ವಿಶ್ರಾಂತಿ ಗೃಹ, ಬ್ರಿಟಿಷ್ ನ್ಯೂಸ್ ಪೇಪರ್ ಫಂಡ್ ಎಂಬ ಸಹಾಯನಿಧಿ ವ್ಯವಸ್ಥೆ ಇತ್ಯಾದಿ. ಇಂಥ ವ್ಯವಸ್ಥೆ ನಮ್ಮಲ್ಲಿ ಆಗಬೇಕು ಎಂದು ಪ್ರತಿಪಾದಿಸಿದರು.

ಪತ್ರಕರ್ತರ ಸಂಘದ ಜೀವನಾಡಿಯೆ ಡಿವಿಜಿ ಎನ್ನಬಹುದು. ಇಂದು ದೊಡ್ಡದಾಗಿ ಬೆಳೆದಿದೆ ಆ ಸಂಘ. ಅದನ್ನು ಹುಟ್ಟುಹಾಕಿ ಭದ್ರ ಬುನಾದಿ ಹಾಕಿದವರಲ್ಲಿ ಡಿವಿಜಿ ಪ್ರಮುಖರು.

1928ರಲ್ಲಿ ಬಾಗಲಕೋಟೆಯಲ್ಲಿ ನಡೆದ ವೃತ್ತಪತ್ರಿಕಾಕರ್ತರ ಪರಿಷತ್ತಿಗೆ ಡಿವಿಜಿ ಅಧ್ಯಕ್ಷರು. ಕರ್ನಾಟಕ ಆಗದಿದ್ದ ಕಾಲ. ಹಳೆಯ ಮೈಸೂರು ಪ್ರದೇಶದ ಒಬ್ಬರನ್ನು ಉತ್ತರ ಕರ್ನಾಟಕದ ತುದಿಯ ಒಂದು ಊರಿನಲ್ಲಿ ಹೀಗೆ ಗೌರವಿಸಿದ್ದು ವಿಶೇಷ. ಡಿವಿಜಿ ಅವರ ಮಹತ್ಸೇವೆಗೆ ಸಂದ ಮರ್ಯಾದೆ.

1940ರಲ್ಲಿ ನಡೆದ ಮೈಸೂರು ರಾಜ್ಯ ಪತ್ರಕರ್ತರ ಪ್ರಥಮ ಸಮ್ಮೇಳನದ ಅಧ್ಯಕ್ಷರೂ ಡಿವಿಜಿ ಅವರೇ ಆದುದು ತೀರ ಸಹಜವೇ. ಅವರ ಅಂದಿನ ಭಾಷಣ ಇಡೀ ಪತ್ರಿಕಾಲೋಕದ ಸಮಗ್ರ ಅವಲೋಕನ.

1949ರಲ್ಲಿ ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಳನ ಬೆಂಗಳೂರಿನಲ್ಲಿ ನಡೆಯಿತು. ಅಂದಿನ ಗವರ್ನರ್ ಜನರಲ್ ರಾಜಾಜಿಯವರು ಅದನ್ನು ಉದ್ಘಾಟಿಸಿದರು. ಆ ಸಮ್ಮೇಳನದ ಸ್ವಾಗತ ಸಮಿತಿಗೆ ಡಿವಿಜಿ ಅವರೇ ಅಧ್ಯಕ್ಷರಾಗಿದ್ದರು.

ಡಿವಿಜಿ ಹಲವು ಪತ್ರಿಕೆಗಳನ್ನು ನಡೆಸಿ ಕೈ ಸುಟ್ಟುಕೊಂಡರು. ಆದರೂ ಚಪಲ ಬಿಟ್ಟಿರಲಿಲ್ಲ. ಎರಡನೆಯ ವಿಶ್ವಯುದ್ಧ ಮುಗಿದ ಮೇಲೆ ಅಟ್ಲಾಂಟಿಕ್ ಚಾರ್ಟರ್ ಘೋಷಣೆ, ವಿಶ್ವಸಂಸ್ಥೆ ಸ್ಥಾಪನೆ ಆಯಿತು. ಆಗ ಡಿವಿಜಿಯ ಉತ್ಸಾಹ ಮತ್ತೆ ಮಿನುಗಿತು. ವಿಶ್ವಶಾಂತಿಯ ಪ್ರತಿಪಾದನೆಗೆ, ನವ ವಿಶ್ವ ನಿರ್ಮಾಣಕ್ಕೆ ನಮ್ಮ ಕಾಣಿಕೆ ಸಲ್ಲಿಸಬೇಕು, ಅದಕ್ಕೆ ಒಂದು ಪತ್ರಿಕೆ ಇರಬೇಕು ಎನಿಸಿತು. ಆ ಬಗ್ಗೆ ಸಲಹೆ ಕೋರಿ ರಾಜಾಜಿ ಅವರಿಗೆ ಬರೆದರು. ರಾಜಾಜಿ ಬರೆದ ಉತ್ತರ ಎರಡೇ ಮಾತಿನದು– "ಈಗಲೇ ಸಾಕಷ್ಟು ಕೈ ಸುಟ್ಟುಕೊಂಡಿಲ್ಲವೇ?" ಚಪಲ ಮುರುಟಿಕೊಂಡಿತು.

ಡಿವಿಜಿ ಕೇವಲ ಹೊಟ್ಟೆಪಾಡಿಗೆ ಎಂದು ಪತ್ರಿಕೆಗೆ ಬಂದರು. ಅವರು ಪಡೆದುಕೊಂಡ ಲಾಭ ಅತ್ಯಲ್ಪ. ಅವರು ಆ ವೃತ್ತಿಗೆ ನೀಡಿದ ಕೊಡುಗೆ ಅತ್ಯಮೂಲ್ಯ.

# 7. ರಾಜಕಾರಣದಲ್ಲಿ

ಜ್ಞಾನಿನಾ ಚರಿತುಂ ಶಕ್ಯಂ
ಸಮ್ಯಗ್ರಾಜ್ಯಾದಿ ಲೌಕಿಕಂ ।

ಶ್ರೀ ವಿದ್ಯಾರಣ್ಯರ ಈ ಮಾತನ್ನು ಡಿವಿಜಿ ಪದೇ ಪದೇ ಹೇಳುತ್ತಿದ್ದರು. ಗೋಖಲೆ ಸಂಸ್ಥೆಯ ಪತ್ರಿಕೆಯ ಧ್ಯೇಯವಾಕ್ಯವಾಗಿ ಇಟ್ಟುಕೊಂಡಿದ್ದರು. ಮಾತ್ರವಲ್ಲ. ಇದು ಡಿವಿಜಿ ಅವರ ರಾಜಕಾರಣ ಕಾರ್ಯಕ್ಕೂ ಸೂಕ್ತ ವಾಕ್ಯ!

ಪತ್ರಿಕಾವೃತ್ತಿಗೆ ಹೋದಂತೆ ಡಿವಿಜಿ ರಾಜಕಾರಣಕ್ಕೆ ಪ್ರವೇಶ ಮಾಡಿದ್ದು ಹೊಟ್ಟೆಯ ಪಾಡಿಗಾಗಿ ಅಲ್ಲ. ವಾಸ್ತವವಾಗಿ ಅಂದು ಈ ಶತಮಾನದ ಆದಿಭಾಗದ ರಾಜಕಾರಣ–ರಾಜಕೀಯ ಇರಲಿಲ್ಲ. ಆಗ ರಾಜಕೀಯ ಲಾಭದಾಯಕ ಉದ್ಯಮವಾಗಿರಲಿಲ್ಲ. ಕೇವಲ ಸೇವೆಯ ಕ್ಷೇತ್ರ ಆಗಿತ್ತು. ದೇಶದ ಆಗುಹೋಗುಗಳ ಬಗೆಗೆ ಮನತೆರೆದ ಯಾವುದೇ ವ್ಯಕ್ತಿಯೂ ಅಂದಿನ ರಾಜಕಾರಣದಿಂದ ದೂರ ಇರಲು ಸಾಧ್ಯವಾಗುತ್ತಿರಲಿಲ್ಲ. ನಾಡಿನ ಹೀನ ದೀನ ಸ್ಥಿತಿ, ಪಾರತಂತ್ರ್ಯ ಕಣ್ಣು ಕುಕ್ಕುವಷ್ಟು ಇತ್ತು. ಅದರ ನಿವಾರಣೆಗಾಗಿ, ಸ್ವಾತಂತ್ರ್ಯದ ಹಂಬಲ ರೂಪು ಗೊಳ್ಳುತ್ತಿತ್ತು. ಇದಕ್ಕಾಗಿ ಕೆಲವು ಕಡೆ ಹಿಂಸಾತ್ಮಕ ಕ್ರಾಂತಿಯ ಪ್ರಯತ್ನಗಳು. ಇನ್ನೊಂದು ಕಡೆ ಜನಜಾಗೃತಿಯ ಕೆಲಸ. ಸಂಧಾನದ ಕೆಲಸ, ಬಿನ್ನಹಗಳ ಕೆಲಸ. ಈ ಎರಡನೆಯದೇ ಪ್ರಧಾನವಾಗಿದ್ದ ಕಾಲ. ಕಾಂಗ್ರೆಸ್ ಸಂಸ್ಥೆ ಇಂಥ ಸೌಮ್ಯ ಮಾರ್ಗದಲ್ಲೇ ನಡೆದಿತ್ತು. ದಾದಾಭಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ ಮೊದಲಾದ ಮಹಾನುಭಾವರು ಈ ಪಂಥದ ಮುಂದಾಳುಗಳು. ಬಾಲಗಂಗಾಧರ ತಿಲಕರಂಥ ಉಗ್ರಪಂಥೀಯರೂ ಪ್ರಭಾವಶಾಲಿಗಳಾಗಿದ್ದರೂ, ಬಹುಪಾಲು ಇದ್ದುದು ಸೌಮ್ಯ ಪಂಥೀಯ ಮನೋಭಾವವೇ. ಗಾಂಧೀಜಿ ಸಹ ಮೊದಲು ಈ ಪಂಥದವರೇ ಆಗಿದ್ದರು. ಜಲಿಯನ್ ವಾಲಾಬಾಗಿನ ದುರಂತ ಈ ಮನೋ ಭೂಮಿಕೆಯನ್ನು ಬದಲು ಮಾಡಿತು. ಅವರಂಥ ಸೌಮ್ಯವಾದಿಗಳೂ ಕ್ರಾಂತಿಯ ಪಥ ಹಿಡಿದರು. ಆದರೆ ಆ ಕ್ರಾಂತಿ ಶಾಂತಿ–ಅಹಿಂಸೆಯ ಕ್ರಾಂತಿ.

ಈ ವಾತಾವರಣ ತರುಣ ಡಿವಿಜಿಯವರ ಮೇಲೆ ಪ್ರಭಾವ ಬೀರಿದ್ದು ಸಹಜವೇ. ಸ್ವಭಾವತಃ ಅವರು ಸಾಧು ಹಾಗೂ ಸಂಪ್ರದಾಯಪ್ರಿಯರು. ಬದಲಾವಣೆ ಸಹಜವಾಗಿ ಆಗಬೇಕು, ಒತ್ತಾಯದಿಂದ ಅಲ್ಲ ಎಂಬ ಮನೋ ಭೂಮಿಕೆಯವರು. ಕ್ರಾಂತಿ ಅವರಿಗೆ ದೂರ. ಅಂತೆಯೆ ನವರೋಜಿ, ಗೋಖಲೆ ಅವರ ಸೌಮ್ಯವಾದ, ಮಿತವಾದ ಅವರಿಗೆ ಹಿಡಿಸಿದ್ದು ಆಶ್ಚರ್ಯವಲ್ಲ. ಡಿವಿಜಿ ಅವರಿಗೆ ಇದೇ ರಾಜಕಾರಣದ ವಿಧಾನವಾಯಿತು.

ಬೆಂಗಳೂರಿಗೆ ಅವರು ಬಂದ ಸ್ವಲ್ಪ ದಿನದಲ್ಲೆ ಸಾರ್ವಜನಿಕ ಕಾರ್ಯಗಳ ಆಸಕ್ತಿ ಒಡಗೊಂಡು ಬಂದಿತು. ಹಲವಾರು ಸಭೆ–ಸಮಿತಿಗಳಲ್ಲಿ ಓಡಿಯಾಡುತ್ತ ಇದ್ದರು. ಅಂದಿನ ಕಾಂಗ್ರೆಸ್ ಮಹಾಸಭೆಗಳ ಕಲಾಪಗಳು, ಭಾಷಣಗಳು ತರುಣರ ಮನಸೆಳೆಯುತ್ತಿದ್ದವು. ಸ್ವಾತಂತ್ರ್ಯದ ಹಂಬಲವನ್ನು ರಾಷ್ಟ್ರಪ್ರೇಮವನ್ನು ಉಕ್ಕಿಸುತ್ತಿದ್ದವು. ಮೈಸೂರು ಆಗ ಮಹಾರಾಜರ ಸಂಸ್ಥಾನ. ಇಲ್ಲಿ ವಿವೇಕಶಾಲಿ ದೊರೆ. ದಕ್ಷರೂ, ಜಾಣರೂ ಆದ ಆಡಳಿತಗಾರರು, ದಿವಾನರು ಇದ್ದುದರಿಂದ ಜನರಲ್ಲಿ ವಿರೋಧದ ಭಾವನೆ ಹೆಚ್ಚು ಇರಲಿಲ್ಲ. ರಾಜಭಕ್ತಿ ಮುಖ್ಯ ಅಂಶ. ಡಿವಿಜಿಗೆ ಸಹ ಇಂಥದೇ ರಾಜಭಕ್ತಿ. ಮಾತ್ರವಲ್ಲ ಬ್ರಿಟಿಷ್ ಚಕ್ರವರ್ತಿಗಳಲ್ಲೂ ಅನನ್ಯ ಭಕ್ತಿ.

1911ರಲ್ಲಿ ಐದನೆಯ ಜಾರ್ಜ್ ಚಕ್ರವರ್ತಿಯ ಕಿರೀಟಧಾರಣೋತ್ಸವ ಭಾರತದಲ್ಲಿ ನಡೆಯಿತು. ಡಿವಿಜಿಗೆ ಬಲು ಸಂಭ್ರಮ. ಅದಕ್ಕಾಗಿಯೆ ಅವರು ತಮ್ಮ ಸುಮತಿ ಗ್ರಂಥಮಾಲೆಯಲ್ಲಿ ಒಂದು ನೆನಪಿನ ಪುಸ್ತಿಕೆಯನ್ನೇ ಪ್ರಕಟಿಸಿದರು. ಬ್ರಿಟಿಷರು ಭಾರತಕ್ಕೆ ಬಂದದ್ದೇ ಒಂದು ದೊಡ್ಡ ಯೋಗಾಯೋಗ, ಭಾರತದ ಅದೃಷ್ಟ, ಇಲ್ಲಿನ ಜಾತಿಭೇದಗಳನ್ನು, ಒಡಕು ಬಿರುಕುಗಳನ್ನು ದೂರ ಮಾಡಿ ಒಂದು ರಾಷ್ಟ್ರದ ಕಲ್ಪನೆಯನ್ನು ಮೂಡಿಸಿದರು. ರೈಲು, ಅಂಚೆ, ಶಾಲೆ, ಆಸ್ಪತ್ರೆ, ಕೋರ್ಟು ಕಾನೂನು ಕಟ್ಟಳೆ ಏರ್ಪಡಿಸಿದರು, ಪುಂಡರನ್ನು ಅಡಗಿಸಿದರು. ಬ್ರಿಟಿಷ್ ಪ್ರಭುತ್ವ ಭಾರತಕ್ಕೆ ದೇವರು ದಯಪಾಲಿಸಿದ ವರ – ಈ ಭಾವನೆಯನ್ನೇ ಆ ಪುಸ್ತಿಕೆ ಸೂಸುತ್ತದೆ. ಜಾರ್ಜ್ ದೊರೆಗಳಿಗೆ ಒಂದು ಮಂಗಳಾಶಾಸನ ಪದ್ಯಮಾಲಿಕೆಯನ್ನೇ ಡಿವಿಜಿ ರಚಿಸಿದ್ದರು. ಅಖಿಲ ಭಾರತದ ಮಟ್ಟದಲ್ಲೂ ಹೀಗೆಯೆ ಭಾವಿಸಿದ್ದವರು ಅನೇಕರು ಇದ್ದರು. ಆದರೆ ಕ್ರಮೇಣ ಈ ಭಾವನೆ ಹಿಂದಾಗಿ ರಾಷ್ಟ್ರೀಯತೆ ಪ್ರಜ್ವಲಿಸಿದುದು ಈ ಶತಮಾನದ ಮೊದಲಿನ ಇತಿಹಾಸ.

ಆಗ ನೇರವಾಗಿ ಬ್ರಿಟಿಷ್ ಪ್ರಭುತ್ವಕ್ಕೆ ಒಳಗಾಗಿದ್ದ ಪ್ರಾಂತ್ಯಗಳಲ್ಲಿ ಅಷ್ಟಿಷ್ಟು ಜನಜಾಗೃತಿ, ರಾಜಕೀಯ ಕಾರ್ಯ ಚಟುವಟಿಕೆ ಮೊದಲಾಗಿತ್ತು. ಆದರೆ ದೇಶೀಯ ಸಂಸ್ಥಾನಗಳಲ್ಲಿ ಬಹುಮಟ್ಟಿಗೆ ಏನೂ ಇರಲಿಲ್ಲ. ಮೈಸೂರಿನಲ್ಲಿ ದೈವವಶಾತ್

ದಿವಾನ್ ರಂಗಾಚಾರ್ಲು ಶೇಷಾದ್ರಿ ಅಯ್ಯರ್ ಮುಂತಾದ ಪ್ರಬುದ್ಧ ಆಡಳಿತಗಾರರಿಂದಾಗಿ ಜನತೆಯಲ್ಲಿ ಶಿಕ್ಷಣ, ಜಾಗೃತಿ ಸ್ವಲ್ಪ ಉಂಟಾಗಿದ್ದವು. ಮೈಸೂರಿನ ತಾತಯ್ಯನವರಂಥ ಸಾರ್ವಜನಿಕ ಹಿತಾಸಕ್ತರಾದ ಜನನಾಯಕರು ಮಾಡಿದ ಕೆಲಸ ಅಮೂಲ್ಯವಾದುದು. ಆದರೂ ಬಹುಕಾಲ ದೇಶೀಯ ಸಂಸ್ಥಾನಗಳು ರಾಷ್ಟ್ರೀಯ ಚಳುವಳಿಯಲ್ಲಿ ಸೇರಿಕೊಳ್ಳಲೇ ಇಲ್ಲ. ಜನರಲ್ಲೂ ಆಲಸ್ಯ, ಅಜ್ಞಾನ. ಅಲ್ಲದೆ ರಾಜಭಕ್ತಿಯ ಮಬ್ಬು. ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲೂ ಈ ದೇಶೀಯ ಸಂಸ್ಥಾನದ ಕಡೆಗೆ ಗಮನ ಇರಲಿಲ್ಲ. ಮೊದಲು ಬ್ರಿಟಿಷರೊಂದಿಗೆ ವ್ಯವಹಾರ ಸರಿಹೋಗಲಿ, ಆಮೇಲೆ ನಮ್ಮವರೇ ಆದ ರಾಜರೊಂದಿಗೆ ವ್ಯವಹರಿಸೋಣ ಎನ್ನುವ ಭಾವನೆ. ಇದು ಗಾಂಧೀಯುಗದಲ್ಲೂ ಮುಂದುವರಿಯಿತು. ಸುಮಾರು 1935–36ರವರೆಗೆ ಹೀಗೇ ಇತ್ತು. ಆಮೇಲೆ ಹೈದರಾಬಾದು, ಜುನಾಗಢ, ಧೆಂಕನಾಳ (ಒರಿಸ್ಸಾ), ಮೈಸೂರು ಮುಂತಾದ ರಾಜ್ಯಗಳಲ್ಲಿ ಪ್ರಜಾಚಳುವಳಿ ಬಲಗೊಂಡಿತು. ಕಾಂಗ್ರೆಸ್ಸೂ ಇತ್ತ ಗಮನ ಕೊಡಬೇಕಾಯಿತು. ಸಂಸ್ಥಾನಗಳ ಜನವೂ ರಾಷ್ಟ್ರೀಯ ಚಳುವಳಿಗೆ ಸೇರಿಕೊಳ್ಳುವಂತಾಯಿತು.

ಸಂಸ್ಥಾನಗಳ ಜನತೆ ಸಹ ರಾಷ್ಟ್ರೀಯ ಭಾವನೆಗಳಿಗೆ ಸ್ಪಂದಿಸಬೇಕು, ಭಾರತದ ರಾಷ್ಟ್ರೀಯ ಸಮಸ್ಯೆಯ ಜೊತೆಗೆ ಇಲ್ಲಿನ ಸಮಸ್ಯೆಗಳನ್ನೂ ಪರಿಗಣಿಸಬೇಕು, ಇಲ್ಲೂ ಜನಜಾಗೃತಿ ಅವಶ್ಯ ಎಂಬುದರ ಬಗ್ಗೆ ಡಿವಿಜಿ ತುಂಬ ಕೆಲಸ ಮಾಡಿದರು. ಅನೇಕ ಲೇಖನಗಳನ್ನು ಬರೆದರು, ಪತ್ರಿಕೆಗಳಲ್ಲಿ ಪ್ರತಿಪಾದಿಸಿದರು. ಬಿಕಾನೇರಿನ ಮಹಾರಾಜರಿಗೆ ಹಲವಾರು ಪತ್ರಗಳನ್ನು ಕಳಿಸಿದರು. ಈ ಪತ್ರ ಲೇಖನಗಳನ್ನೇ ಒಟ್ಟಾಗಿ ಸೇರಿಸಿ *The Problems of Indian Native States* ಎಂಬ ಪುಸ್ತಕವನ್ನೇ ಹೊರಡಿಸಿದರು. ಮದರಾಸಿನ ಹೋಂ ರೂಲ್ ಲೀಗಿನ ಅಧ್ಯಕ್ಷ ಸರ್ ಪಿ.ಎಸ್. ಶಿವಸ್ವಾಮಿ ಅಯ್ಯರ್ ಅವರು ಇದಕ್ಕೆ ಮುನ್ನುಡಿ ಬರೆದಿದ್ದಾರೆ. ಹೋಂರೂಲ್ ಅಥವಾ ಸ್ವರಾಜ್ಯ ಬಂದರೆ ದೇಶೀಯ ಸಂಸ್ಥಾನಗಳ ಸ್ಥಿತಿಗತಿ ಏನು, ಸ್ಥಾನಮಾನ ಏನು, ಅವು ಮೊದಲಿನಂತೆಯೆ ಬೇರೆ ಇರಬೇಕೇ, ಅಂಗೈಯಗಲ ಇರುವ ನೂರಾರು ಸಂಸ್ಥಾನಗಳು ಹಾಗೆ ಬೇರೆ ಇರಲು ಸಾಧ್ಯವೇ? ಹಾಗೆಂದು ಎಲ್ಲ ರಾಜ್ಯಗಳನ್ನೂ, ದೊಡ್ಡವು ಚಿಕ್ಕವು, ಪ್ರಗತಿಪರ ಆದವು, ಹಿಂದುಳಿದವು ಎಲ್ಲವನ್ನೂ ವಜಾ ಮಾಡಿ, ರಾಷ್ಟ್ರ ಭಾರತದಲ್ಲಿ ಸೇರಿಸಿಬಿಡು ವುದೇ? ಅದರಿಂದ ಹಲವಾರು ಮುಂದುವರಿದ ದೊಡ್ಡ ರಾಜ್ಯಗಳಿಗೆ ಅನ್ಯಾಯ ಆಗದೇ?— ಇತ್ಯಾದಿ ಪ್ರಶ್ನೆಗಳನ್ನು ಡಿವಿಜಿ ವಿಮರ್ಶಿಸಿದರು. 560ಕ್ಕೂ ಮಿಗಿ ಲಾಗಿದ್ದ ಸಂಸ್ಥಾನಗಳೆಲ್ಲವೂ ಭಾರತ ಒಕ್ಕೂಟದಿಂದ ಬೇರೆಯಾಗಿ ನಿಲ್ಲತಕ್ಕದ್ದಲ್ಲ. ಹೈದರಾಬಾದು, ಮೈಸೂರು,

ಬರೋಡಾ, ಕಾಶ್ಮೀರ, ತಿರುವಾಂಕೂರು ಮುಂತಾದ ಸ್ವಸಾಮರ್ಥ್ಯವುಳ್ಳ ದೊಡ್ಡ ಸಂಸ್ಥಾನಗಳನ್ನು ಹಾಗೆಯೆ ಉಳಿಸಿಕೊಳ್ಳಬೇಕು, ಉಳಿದವನ್ನು ಭಾರತ ಒಕ್ಕೂಟದಲ್ಲಿ ಸೇರಿಸಬೇಕು. ಹೀಗೆ ಮಾಡುವಾಗ ಅಲ್ಲಲ್ಲಿನ ಜನತೆಯ ಭಾವನೆಗಳಿಗೆ ಮುಳಿವು ಆಗದಂತೆ ಮನವೊಲಿಸಿ ನಡೆಸಬೇಕು, ಹಾಗೆಯೆ ಉಳಿಯುವ ಸಂಸ್ಥಾನಗಳಲ್ಲಿ ನಿರಂಕುಶ ಆಡಳಿತ ಹೋಗಿ, ಪ್ರಜಾಹಿತ ಪರವಾದ, ಪ್ರಾತಿನಿಧಿಕ ಸ್ವರೂಪದ ಆಡಳಿತ ಬರಬೇಕು – ಎನ್ನುವುದು ಡಿವಿಜಿ ಅವರ ವಾದ. ಮೈಸೂರಿನಲ್ಲಿ ದಿವಾನ್ ರಂಗಾಚಾರ್ಲು ಅವರು ಆಗಲೇ ಪ್ರಜಾಪ್ರತಿನಿಧಿ ಸಭೆ ಆರಂಭಿಸಿದ್ದುದು ಡಿವಿಜಿ ಅವರಿಗೆ ಸ್ಫೂರ್ತಿ ಕೊಟ್ಟಿತ್ತು. ದೊರೆಯ ಅಧೀನದಲ್ಲೂ ಪ್ರಜಾಪ್ರಭುತ್ವ ವ್ಯವಸ್ಥೆ ಎಷ್ಟೋ ಮಟ್ಟಿಗೆ ಸಾಧ್ಯ ಎನ್ನುವುದು ಸ್ಪಷ್ಟವಾಗಿತ್ತು. ಬ್ರಿಟನ್ನಿನಲ್ಲಿ ಇಂದಿಗೂ ಹಾಗೆಯೆ ತಾನೇ ಇರುವುದು. ಸಾಂಕುಶ ರಾಜಪ್ರಭುತ್ವ. ಈ ನಿಲುವಿಗೆ ಡಿವಿಜಿ ಒಲಿದಿದ್ದರು.

ದಿವಾನ್ ಮಾಧವರಾಯರ ಪತ್ರಿಕಾ ನಿರ್ಬಂಧ ಕ್ರಮ ಡಿವಿಜಿಯವರನ್ನು ಕೆರಳಿಸಿತ್ತು. ಆಗ ಅವರು ಅದನ್ನು ವಿರೋಧಿಸಿದರು. ಅವರ ಮೊದಲಿನ ರಾಜಭಕ್ತಿ ಕುಂದಲಾರಂಭಿಸಿತು. ಪ್ರಜಾಪರವಾದ ಜಾಗೃತಿಯ ಅವಶ್ಯಕತೆ ನಿಚ್ಚಳವಾಗಿ ತೋರಿಬಂತು. ಅದನ್ನೆ ಡಿವಿಜಿ ಸುಮಾರು 50 ವರ್ಷ ಮಾಡಿದರು. ಸ್ವರಾಜ್ಯ ಬೇಡ ಎಂದಲ್ಲ. ಅದಕ್ಕೆ ನಾವು ಅರ್ಹರಾಗಬೇಕು, ಸ್ವತಂತ್ರರಾಗಿ ಆಲೋಚಿಸಲು, ನಡೆದುಕೊಳ್ಳಲು, ರಾಷ್ಟ್ರರಥವನ್ನು ನಡೆಸಲು ಬೇಕಾದ ಸಾಮರ್ಥ್ಯಗಳನ್ನು ಗುಣಗಳನ್ನು ನಾವು ಸಂಪಾದಿಸಿಕೊಳ್ಳಬೇಕು. ಜನರನ್ನು ಒಂದುಗೂಡಿಸುವ ಕೆಲಸ ಮುಖ್ಯ. ಇದು ಸಾಧ್ಯವಾದರೆ ಸ್ವರಾಜ್ಯ ತಾನೇ ಬರುತ್ತದೆ. ಬ್ರಿಟಿಷರು ನಾಗರಿಕ ಜನ, ಸ್ವತಃ ಪ್ರಜಾತಂತ್ರ ಪ್ರಿಯರು, ಸಜ್ಜನರು. ಅಂಥವರು ಜಾಗೃತರಾದ ಭಾರತ ಮಹಾಜನ ಸಮುದಾಯದ ಆಶೋತ್ತರಗಳನ್ನು ಅರ್ಥಮಾಡಿಕೊಳ್ಳುತ್ತಾರೆ, ದೂರೀಕರಿಸುವುದಿಲ್ಲ. ಅವರು ತಾವೇ ಸ್ವಾತಂತ್ರ್ಯ ನೀಡುತ್ತಾರೆ ಎನ್ನುವ ನಿಲುವು ಅವರದು. ನವರೋಜಿ, ಗೋಖಲೆ ಅವರ ವಿಚಾರ ಇದೇ ತಾನೇ!

ಹಲವು ಕಾಂಗ್ರೆಸ್ ಅಧಿವೇಶನಗಳಿಗೂ ಹೋಗಿ ಬಂದರು. ಅಲ್ಲಿ ದೇಶೀಯ ಸಂಸ್ಥಾನಗಳ ಮಾತೇ ಇಲ್ಲದುದು ಅವರಿಗೆ ಬೇಸರ ಉಂಟುಮಾಡಿತು. 1918ರ ಮುಂಬೈ ಕಾಂಗ್ರೆಸ್‌ಗೆ ಡಿವಿಜಿ ಹೋಗಿ ದೇಶೀಯ ಸಂಸ್ಥಾನಗಳ ಸಮಸ್ಯೆ ಬಗ್ಗೆ ಸೂಚನೆಯನ್ನು ಕಳಿಸಿದರು. ಅನೇಕ ನಾಯಕರನ್ನು ಕಂಡರು. ವಿ.ಎಸ್. ಶ್ರೀನಿವಾಸ ಶಾಸ್ತ್ರಿಗಳ ಪರಿಚಯ ಮೊದಲೇ ಆಗಿತ್ತು. ಅವರು ಈ ಸಮಸ್ಯೆಯ ಬಗ್ಗೆ ಗಮನ ಹರಿಸಿದರು. ಡಿವಿಜಿಗೆ ಸಂತೋಷವಾಯಿತು. ಶಾಸ್ತ್ರಿಗಳ ಸೂಚನೆ ಮೇರೆಗೆ ಡಿವಿಜಿ

ದೇಶೀಯ ಸಂಸ್ಥಾನಗಳನ್ನು ಕುರಿತು ಹೆಚ್ಚಿನ ಮಾಹಿತಿ ಸಂಗ್ರಹಿಸಲು 1925ರಲ್ಲಿ ದೆಹಲಿಗೆ ಹೋದರು. ಒಂದೆರಡು ತಿಂಗಳು ಅಲ್ಲಿದ್ದು ವಿಷಯ ಸಂಗ್ರಹಿಸಿದರು. ಆಗಲೇ "Karnataka and Indian Native States" ಎಂಬ ಪತ್ರಿಕೆಯನ್ನೆ ಆರಂಭಿಸಿದರು. ಸಮಸ್ಯೆಯ ಬಗ್ಗೆ ಲೇಖನಗಳನ್ನು ಬರೆದರು. ಪತ್ರಿಕೆ ಬಹುಕಾಲ ನಡೆಯಲಿಲ್ಲ.

ಈ ವಿಷಯದ ಬಗ್ಗೆ 1940ರಲ್ಲಿ ಮದರಾಸಿನ ಲಿಬರಲ್ ಪಾರ್ಟಿ ಸಮ್ಮೇಳನದಲ್ಲಿ ಡಿವಿಜಿ ಒಂದು ನಿರ್ಣಯ ಸೂಚಿಸಿದರು. ಸರ್ ಶಿವಸ್ವಾಮಿ ಅಯ್ಯರ್ ಒಪ್ಪಲಿಲ್ಲ. ಆಮೇಲೆ ಡಿವಿಜಿ ಪುಣೆಗೆ ಹೋಗಿ ತೇಜ ಬಹದ್ದೂರ್ ಸಪ್ರು ಅವರೊಂದಿಗೂ ವಾಗ್ವಾದ ಮಾಡಿದರು. 1929ರಲ್ಲಿ ತಿರುವನಂತಪುರದಲ್ಲಿ ದಕ್ಷಿಣ ಭಾರತ ದೇಶೀಯ ಸಂಸ್ಥಾನ ಪ್ರಜೆಗಳ ಸಮ್ಮೇಳನ ನಡೆಯಿತು. ಸರ್ ಎಂ. ವಿಶ್ವೇಶ್ವರಯ್ಯನವರೇ ಅಧ್ಯಕ್ಷರು. ಅವರಿಗೆ ಸಹಾಯಕರಾಗಿ ಡಿವಿಜಿ ಹೋದರು ಮತ್ತು ಅವರ ಅಧ್ಯಕ್ಷ ಭಾಷಣದ ಸಿದ್ಧತೆಯಲ್ಲಿ ನೆರವಾದರು. ಹಾಗೂ "Trivandram Memorandum" ಎಂದೇ ಪ್ರಸಿದ್ಧವಾದ ಆ ಸಮ್ಮೇಳನದ ಸೂಚನಾ ಪತ್ರದ ರಚನೆಯಲ್ಲೂ ಪಾತ್ರವಹಿಸಿದರು.

ದೇಶೀಯ ಸಂಸ್ಥಾನಗಳ ಸಮಸ್ಯೆಯ ಬಗ್ಗೆ ಅವರು ಇನ್ನೂ ಹಲವು ಲೇಖನ–ಪುಸ್ತಕಗಳನ್ನು ಬರೆದರು. 1918ರಲ್ಲಿ ಲಾರ್ಡ್ ಮಾಂಟೆಗೊ ಅವರಿಗೆ Native States in the Empire ಎಂಬ ಮನವಿಪತ್ರವನ್ನು ಒಪ್ಪಿಸಿದರು. ಅದೇ ವರ್ಷ ಮಾಂಟೆಗೊ ಚೆಲ್ಮ್ಸ್‌ಫರ್ಡ್ ಸುಧಾರಣೆ ಬಂದಾಗ, Indian Native States and M-C Report ಎಂದು ಅದರ ವಿಮರ್ಶೆಯನ್ನು ಪ್ರಕಟಿಸಿದರು. 1926ರಲ್ಲಿ ಬಟ್ಲರ್ ಸಮಿತಿಗೆ ಒಂದು ಟಿಪ್ಪಣಿಯನ್ನು ರಚಿಸಿ ಸಲ್ಲಿಸಿದರು. 1931ರಲ್ಲಿ *The States and their people in the Indian Constitution* ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಅದು ದುಂಡು ಮೇಜಿನ ಪರಿಷತ್ತಿನ ಕಾಲ. ಭಾರತದ ಭವಿಷ್ಯದ ಬಗ್ಗೆ ಲಂಡನ್‌ನಲ್ಲಿ ಚರ್ಚೆ ನಡೆಯುತ್ತಿತ್ತು. ಆ ಪುಸ್ತಕ ಸಮಸ್ಯೆಯ ಆದ್ಯಂತವನ್ನೆಲ್ಲ ವಿಮರ್ಶಿಸಿತ್ತು. ವಿಷಯ ವ್ಯಾಪ್ತಿ, ವಿಮರ್ಶೆಯ ಸಮತೂಕ, ಪ್ರತಿಪಾದನ ಶೈಲಿ ಎಲ್ಲವೂ ಬಲ್ಲವರ ಮನ ಸೆಳೆದವು. ಭಾರತ ದಲ್ಲಿ ಮಾತ್ರವಲ್ಲ ದೇಶ–ವಿದೇಶಗಳಲ್ಲಿಯೂ ಪ್ರಶಂಸೆಗೆ ಪಾತ್ರವಾಯಿತು. ದೀನಬಂಧು ಆಂಡ್ರೂಸ್ ಈ ಪುಸ್ತಕವನ್ನು ಬಹುವಾಗಿ ಮೆಚ್ಚಿಕೊಂಡರು. "Mr. Gundappa's pamphlet deserves the highest praise. It is a well arranged and documented review of one of the most difficult

subjects" ಎಂದರು. (ಶ್ರೀ ಗುಂಡಪ್ಪನವರ ಪುಸ್ತಿಕೆ ಅತ್ಯುನ್ನತ ಪ್ರಶಂಸೆಗೆ ಅರ್ಹವಾಗಿದೆ. ಅತ್ಯಂತ ಕ್ಲಿಷ್ಟವಾದ ಒಂದು ವಿಷಯದ ಬಗ್ಗೆ ಇದೊಂದು ಸುವ್ಯವಸ್ಥೆಯ ಆಗೂ ಸಾಕ್ಷ್ಯಾಧಾರ ಪೂರಿತವಾದ ವಿಮರ್ಶೆ.)

1942ರಲ್ಲಿ ಕ್ರಿಪ್ಸ್ ಆಯೋಗ ಬಂದಿದ್ದಾಗ, ಅವರಿಗೆ ಡಿವಿಜಿ ಇದೇ ವಿಷಯದ ಬಗ್ಗೆ The Case of the People of the Indian States ಎಂಬ ಮನವಿಪತ್ರ ಸಲ್ಲಿಸಿದರು.

ಸ್ವಾತಂತ್ರ್ಯ ಹೋರಾಟ ಬಿರುಸಾಗುತ್ತ ಬಂತು. ಸ್ವಾತಂತ್ರ್ಯ ಬಂತು. ಸಂಸ್ಥಾನಗಳ ಸಮಸ್ಯೆ ಭುಗಿಲೆದ್ದಿತು. ಸರದಾರ ಪಟೇಲರ ಬ್ರಹ್ಮದಂಡ ನೂರಾರು ಚಿಲ್ಲರೆಪಲ್ಲರೆ ರಾಜ ಮಹಾರಾಜ ನವಾಬರನ್ನೆಲ್ಲ ನುಂಗಿಹಾಕಿತು. ಭಾರತ ಒಕ್ಕೂಟ ರೂಪುಗೊಂಡಿತು. ಕೆಲವು ಕಾಲ ಪ್ರತ್ಯೇಕವಾಗಿ ಇದ್ದ ಮೈಸೂರು, ಹೈದರಾಬಾದು, ಬರೋಡ, ತಿರುವಾಂಕೂರು ಮೊದಲಾದ ದೊಡ್ಡ ಹಾಗೂ ಮುಂದುವರಿದ ಸಂಸ್ಥಾನಗಳು, ನಾನಾ ಕಾರಣಗಳಿಂದಾಗಿ ಮುಖ್ಯವಾಗಿ ಭಾಷಾವಾರು ಪ್ರಾಂತ್ಯ ರಚನೆಯಿಂದಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ರಾಜರೆಲ್ಲ ಮಾಜಿಗಳಾದರು. ಅವರಿಗೆ ಸಲ್ಲುತ್ತಿದ್ದ ರಾಜಧನವೂ ರದ್ದಾದುದು ಈಚಿನ ಇತಿಹಾಸ. ಈ ಕ್ರಮ ಡಿವಿಜಿಗೆ ಹಿಡಿಸಲಿಲ್ಲ. ಭಾರತದ ರಾಜ್ಯವ್ಯವಸ್ಥೆ ಅನೇಕ ಉತ್ತಮ ರಾಜವಂಶಗಳನ್ನೆಲ್ಲ ನುಂಗಿಬಿಟ್ಟಿತು ಎಂದು ಮರುಗಿದರು. ಯಾವುದು ಸರಿ, ಯಾವುದು ತಪ್ಪು ಎಂಬ ನಿರ್ಣಯ ಇತಿಹಾಸಕ್ಕೆ ಬಿಟ್ಟದ್ದು. ಆದರೆ ಡಿವಿಜಿ ತಮ್ಮ ಸ್ವತಂತ್ರ ಅಭಿಪ್ರಾಯವನ್ನು ನಿರ್ಭಯವಾಗಿ ಸಾರಿ ಹೇಳಿದರು.

ಚಳುವಳಿಯಲ್ಲಿ ಡಿವಿಜಿ ತೊಡಗಲಿಲ್ಲ, ದಿಟ. ಆದರೆ ಅವರು ಜನಜಾಗೃತಿ ಉಂಟುಮಾಡುವುದರಲ್ಲಿ ಮುಖ್ಯ ಪಾತ್ರ ವಹಿಸಿದರು. ತಮ್ಮ ಪತ್ರಿಕೆಗಳ ಮೂಲಕ, ಚರ್ಚೆ, ಮಾತು ಭಾಷಣಗಳ ಮೂಲಕ, ಭಾರತದ ರಾಷ್ಟ್ರೀಯತೆಯ ಬಗ್ಗೆ ಜನತೆಯ ಮನೋಭೂಮಿಕೆಯನ್ನು ರೂಪಿಸಲು ಯತ್ನಿಸಿದರು. 1915ರಲ್ಲಿ ಗಾಂಧೀಜಿ ಮದರಾಸಿಗೆ ಬಂದಿದ್ದರು. ಆಗಿನ್ನೂ ಅವರು ದಕ್ಷಿಣ ಆಫ್ರಿಕದಲ್ಲಿದ್ದರು. ಅವರ ಅಲ್ಲಿನ ಕೆಲಸ ಭಾರತದ ಗಮನ ಸೆಳೆದಿತ್ತು. ಅವರನ್ನು ಬೆಂಗಳೂರಿಗೂ ಕರೆತರಲು ಇಲ್ಲಿನ ಉತ್ಸಾಹಿಗಳು ಹವಣಿಸಿದರು. ಆ ಪೈಕಿ ಡಿವಿಜಿ ಸಹ ಒಬ್ಬರು. ಗಾಂಧೀಜಿ ಬಂದರು. ಆಗ ಅವರು ಅನಾವರಣ ಮಾಡಿದ ಗೋಖಲೆ ಅವರ ಭಾವಚಿತ್ರ ಇಂದಿಗೂ ಗೋಖಲೆ ವಿಚಾರ ಸಂಸ್ಥೆಯನ್ನು ಬೆಳಗುತ್ತಿದೆ.

ಸಾಧು ಸ್ವಭಾವದ ಡಿವಿಜಿ ಸಹ ಕೆರಳಿದ್ದುಂಟು. ವಿ.ಪಿ. ಮಾಧವರಾಯರ ದಿವಾನಗಿರಿಯಲ್ಲಿ ಅವರ ಪ್ರಜಾವಿರೋಧಿ ಕ್ರಮಗಳಿಂದ ಕೋಪಗೊಂಡರು

ಡಿವಿ.ಜಿ. 1909ರ ಸುಮಾರು. 'ಹೊಸೂರು ಮರಿ' ಎಂಬ ಬೇನಾಮಿ ಹೆಸರಿನಲ್ಲಿ ಒಂದು 'ಬಹಿರಂಗ ಪತ್ರ' ಪ್ರಕಟವಾಯಿತು. ಇನ್ನೊಂದು 'ಪಿಶಾಚರೋದನ' ಎಂಬ ಕನ್ನಡ ಸಣ್ಣ ಕತೆ. ಎರಡರ ವಿಷಯವೂ ದೊಡ್ಡದೇನಲ್ಲ. ವಿಡಂಬನೆಯ ಸ್ವರೂಪದ್ದು. ಮದರಾಸಿನ ಕಾಂಗ್ರೆಸ್ ಅಧಿವೇಶನ ಆಗ. ಅಲ್ಲಿ ಮದರಾಸಿನ 'ಯುನೈಟೆಡ್ ಇಂಡಿಯಾ ಅಂಡ್ ಇಂಡಿಯನ್ ಸ್ಟೇಟ್ಸ್' ಎಂಬ ಇಂಗ್ಲಿಷ್ ವಾರಪತ್ರಿಕೆ ಈ ಲೇಖನಗಳನ್ನು ಮುದ್ರಿಸಿ ಹತ್ತು ಸಾವಿರ ಪ್ರತಿಗಳನ್ನು ಹಂಚಿತು. ಆ ಸಂದರ್ಭದಲ್ಲಿ 'ಮೈಸೂರು ಸ್ಟ್ಯಾಂಡರ್ಡ್' ಪತ್ರಿಕೆಯ ಸಂಪಾದಕ ಎಂ. ಶ್ರೀನಿವಾಸಯ್ಯಂಗಾರ್ಯರ ಅಣ್ಣ ಎಂ. ಗೋಪಾಲ ಅಯ್ಯಂಗಾರ್ಯರು–ಅವರೂ ಒಳ್ಳೆ ಪತ್ರಕರ್ತರು–ಡಿವಿಜಿಯವರನ್ನು ಕರೆದು ಚೆನ್ನಾಗಿ ಛೀಮಾರಿ ಹಾಕಿದರು; ಕ್ಷುದ್ರ ವಿಷಯ ಬರೆದಿದ್ದಕ್ಕೆ, ಮೇಲಾಗಿ ಹೆಸರು ಹಾಕದೆ ಬರೆದಿದ್ದಕ್ಕೆ. ಇದು ಡಿವಿಜಿಯರ ಮೇಲೆ ಪರಿಣಾಮ ಬೀರಿತು. ಬೇನಾಮಿ ಬರವಣಿಗೆ ಮಾಡುವುದಿಲ್ಲ, ಕ್ಷುದ್ರ ವಿಷಯಕ್ಕೆ ಕೈಹಾಕುವುದಿಲ್ಲ ಎಂದು ಪ್ರತಿಜ್ಞೆ ಮಾಡಿದರು. ಪ್ರತಿಜ್ಞೆ ಕೊನೆಯವರೆಗೂ ಉಳಿಯಿತು.

ಸತ್ಯಾಗ್ರಹದ ಜೊತೆಜೊತೆಗೇ ಖಾದಿಯ ಚಳುವಳಿಯೂ ಸೇರಿಕೊಂಡಿತ್ತಲ್ಲ. ಆಗೊಮ್ಮೆ ಬೆಂಗಳೂರಿನಲ್ಲಿ ಮೆರವಣಿಗೆಯೊಂದು ನಡೆಯಿತು. ನೂರಾರು ಮಂದಿ ಖಾದಿ ತೊಟ್ಟು ತಕಲಿ ಹಿಡಿದು ನೂಲುತ್ತ ರಸ್ತೆಗಳಲ್ಲಿ ನಡೆದರು. ಖಾದಿ ಪೈಜಾಮ ಅಂಗಿ ತೊಟ್ಟ ಡಿವಿಜಿ ಸಹ ತಕಲಿ ನೂಲುತ್ತ ಮೆರವಣಿಗೆಯಲ್ಲಿ ಸಾಗಿದ್ದನ್ನು ಇಂದಿಗೂ ಶ್ರೀ ವಿ.ಎಸ್. ನಾರಾಯಣರಾವ್ (ಖ್ಯಾತ ಸ್ವಾತಂತ್ರ್ಯ ಹೋರಾಟಗಾರರು, ಲೇಖಕರು) ನೆನೆಸಿಕೊಳ್ಳುತ್ತಾರೆ.

ಇದೆಲ್ಲ ಅಪರೂಪದ ಸಂಗತಿ ಅಷ್ಟೆ. ಡಿವಿಜಿ ಇಂಥ ರಸ್ತೆ ಚಳುವಳಿಗಳಿಂದ ದೂರವೇ.

ರಾಜಭಕ್ತರಾದರೂ ಡಿವಿಜಿಯ ರಾಜಕಾರಣ ಬಹುಮಟ್ಟಿಗೆ ಪ್ರಜಾರಾಜಕೀಯವೇ. ಮಹಾರಾಜರ ಆಶ್ರಯದಲ್ಲೆ ಪ್ರಜೆಗಳಿಗೆ ಉತ್ತರದಾಯಿಯಾದ ಆಡಳಿತ, ಜವಾಬ್ದಾರಿ ಸರ್ಕಾರ ಇರಬೇಕು ಎನ್ನುವುದು ಅವರ ಅಂದಿನ ವಾದ.

ಡಿವಿಜಿಯವರನ್ನು ನೇರವಾಗಿ ರಾಜಕೀಯದಲ್ಲಿ ತೊಡಗಿಸಿದವರು ವಿಶ್ವೇಶ್ವರಯ್ಯನವರೇ ಎನ್ನಬಹುದು. ಆಗಿನ ಬೆಂಗಳೂರು ನಗರಸಭೆಗೆ ಡಿವಿಜಿಯವರನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದರು. ಪತ್ರಿಕೆಗಳಲ್ಲಿ ಟೀಕೆ ಮಾಡಿದರೆ ಆಯಿತೆ, ಸಾಕ್ಷಾತ್ತಾಗಿ ದುಡಿಯಬೇಕು ಎಂದು ವಿಶ್ವೇಶ್ವರಯ್ಯನವರ ವಿಚಾರ. ಮುಂದೆ

ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾದಾಗ, ಡಿವಿಜಿಯವರನ್ನು ನ್ಯಾಯ ವಿಧಾಯಕ ಸಭೆಗೆ ಸದಸ್ಯರನ್ನಾಗಿ ನಾಮಕರಣ ಮಾಡಿದರು.

ಆಗ ನಡೆದ ಒಂದು ಘಟನೆ ಅವರ ಸ್ವತಂತ್ರ ಮನೋಭಾವನೆಗೆ ಕನ್ನಡಿ. ಸರ್ಕಾರದ ಒಂದು ಸೂಚನೆಯನ್ನು ಡಿವಿಜಿ ವಿರೋಧಿಸಿದರು. ಆಗಿನ ಮಂತ್ರಿಗಳಾಗಿದ್ದ ಶ್ರೀ ಮ್ಯಾಥನ್ ಅದಕ್ಕೆ ಆಕ್ಷೇಪಣೆ ಎತ್ತಿದರು. "ನೀವು ಸರ್ಕಾರ ನಾಮಕರಣ ಮಾಡಿದ ಸದಸ್ಯರು. ನಮ್ಮ ಪರ ಇರಬೇಕೇ ವಿನಾ, ವಿರೋಧಿಸಬಾರದು" ಎಂದರು. "ಸರ್ಕಾರ ನಾಮಕರಣ ಮಾಡಿರುವುದು ನನ್ನ ಯತ್ಕಿಂಚಿತ್ ಸೇವೆ, ಅನುಭವಗಳ ಸಲುವಾಗಿ ಮಾತ್ರ. ನಾಮಕರಣ ಮಾಡಿದ ಮಾತ್ರಕ್ಕೆ ನನ್ನ ಆತ್ಮಸಾಕ್ಷಿಯನ್ನು ಕೊಂಡುಕೊಂಡ ಹಾಗಲ್ಲ" ಎಂದು ಉತ್ತರಿಸಿದರು ಡಿವಿಜಿ. ಸರ್ಕಾರದ ಬಾಯಿ ಕಟ್ಟಿತು. ಡಿವಿಜಿ ಅವರ ಸದಸ್ಯತ್ವದ ಅವಧಿ ಮುಗಿದ ನಂತರ, ದಿವಾನ್ ಮಿರ್ಜಾ ಅವರನ್ನು ಮತ್ತೆ ನಾಮಕರಣ ಮಾಡಲು ಯೋಚಿಸಿದರು. ಆದರೆ ಡಿವಿಜಿ ಒಪ್ಪಲಿಲ್ಲ. ಹಂಗು ಬೇಡ ಎಂದರು. ಚುನಾವಣೆಗೆ ನಿಂತೇ ಗೆದ್ದು ಬಂದರು.

ದಿವಾನರ ಹಲವು ಧೋರಣೆ ಡಿವಿಜಿಗೆ ಹಿಡಿಸದು. ವಿರೋಧಿಸಿದ್ದೂ ಉಂಟು. ಆದರೂ ದಿವಾನರಿಗೆ ಡಿವಿಜಿ ಬಗ್ಗೆ ಗೌರವ, ಆದರ, ವಿಶ್ವಾಸ. ಅಂದಿನ ರಾಜಕಾರಣದ ರೀತಿಯೆ ಹಾಗೆ. ವಿಚಾರ ಭೇದ ವ್ಯಕ್ತಿಸಂಬಂಧಗಳನ್ನು ಕೆಡಿಸುತ್ತಿರಲಿಲ್ಲ. ಸರ್ ಎಂ.ವಿ. ಹಾಗೂ ಗಾಂಧೀ ಸಂಬಂಧ ಅಂಥದೇ. ಅಷ್ಟೇ ಏಕೆ, ಯಾರನ್ನು ಗಾಂಧೀಜಿ ರಾಜಕೀಯ ಗುರು ಎಂದು ಗೌರವಿಸಿದ್ದರೊ ಆ ಗೋಖಲೆಯವರಿಗೂ ಗಾಂಧೀಜಿಯವರಿಗೂ ಇದ್ದ ಅಭಿಪ್ರಾಯಭೇದ ಬೇಕಾದಷ್ಟು. ಆದರೆ ಪರಸ್ಪರ ಗೌರವ ಮಾತಿಗೆ ಮೀರಿದ್ದು. ಗೋಖಲೆಯವರ ಶಿಷ್ಯರಾದ ಶ್ರೀನಿವಾಸ ಶಾಸ್ತ್ರಿಗಳಿಗೆ ಗಾಂಧೀಮಾರ್ಗ ಚಳುವಳಿಯ ಮಾರ್ಗ ಎಂದರೆ ಆಗದು. ಬಹಿರಂಗವಾಗಿಯೆ ಟೀಕಿಸಿದ್ದುಂಟು. ಆದರೆ ಒಮ್ಮೆ ಗಾಂಧೀಜಿ ಆಮರಣಾಂತ ಉಪವಾಸ ಕೈಗೊಂಡು, ಇನ್ನೇನು ಕತೆ ಮುಗಿಯಿತೋ ಎನ್ನುವ ಕಾಲದಲ್ಲಿ, ಅವರು ನೋಡಬಯಸಿದ್ದು ಶ್ರೀನಿವಾಸ ಶಾಸ್ತ್ರಿಗಳನ್ನು ! ಇಂಥ ಹಿರಿತನವನ್ನೇ ನಾವು ಡಿವಿಜಿ ಅವರಿಗೂ ಮೈಸೂರಿನ ದಿವಾನರುಗಳಿಗೂ ಇದ್ದ ಸಂಬಂಧದಲ್ಲಿ ನಿಚ್ಚಳವಾಗಿ ಕಾಣಬಹುದು.

ಮಿರ್ಜಾ ಸಾಹೇಬರ ಕಾಲದಲ್ಲಿ ನಡೆದ ಸುಲ್ತಾನಪೇಟೆ ಗಣಪತಿ ಗಲಾಟೆ ಉಲ್ಲೇಖನೀಯ. ಘಟನೆ ನಡೆದಾಗ ಡಿವಿಜಿ ಅವರು ಪತ್ರಕರ್ತರ ಸಮ್ಮೇಳನಕ್ಕಾಗಿ ಬಾಗ[illegible]ಯಲ್ಲಿದ್ದರು. ಮಿರ್ಜಾ ಸಾಹೇಬರು ಅಲ್ಲಿಗೇ ತಂತಿ ವರ್ತಮಾನ

ಕಳಿಸಿದ್ದರು. ಡಿವಿಜಿ ವಾಪಸು ಬಂದ ಮೇಲೆ ಇಲ್ಲಿನ ವಿದ್ಯಮಾನಗಳನ್ನು ಕಂಡು ಮಿರ್ಜಾರ ಬಗ್ಗೆ ಅಸಮಾಧಾನಗೊಂಡಿದ್ದರು. ಒಂದೂವರೆ ವರ್ಷ ಭೇಟಿ ಮಾಡಲೇ ಇಲ್ಲ. ಕೊನೆಗೆ ಶ್ರೀನಿವಾಸ ಶಾಸ್ತ್ರಿಗಳ ಮಧ್ಯಸ್ಥಿಕೆಯಿಂದ ಅಸಮಾಧಾನ ಕರಗಿತು. 1928ರಲ್ಲಿ ಮಿರ್ಜಾರವರು ಏರ್ಪಡಿಸಿದ್ದ ರಾಜಕೀಯ ಸುಧಾರಣಾ ಸಮಿತಿ ಹಾಗೂ ರಾಜಕೀಯ ವ್ಯವಹಾರ ಸಮಿತಿಗಳಲ್ಲಿಯೂ ಡಿವಿಜಿಯವರನ್ನು ಸೇರಿಸಲಾಯಿತು. ಸುಧಾರಣಾ ಸಮಿತಿಯ ವರದಿಗೆ ಡಿವಿಜಿ ತಮ್ಮದೇ ಪ್ರತ್ಯೇಕ ಟಿಪ್ಪಣಿ ಬರೆದು, ''ಸಮಿತಿ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರದ ಧ್ಯೇಯವನ್ನು ಸ್ಪಷ್ಟವಾಗಿ ಸೂಚಿಸಬೇಕಾಗಿತ್ತು. ಆ ತತ್ತ್ವವನ್ನು ಕೂಡಲೇ ಒಪ್ಪಬೇಕು, ಕ್ರಮೇಣ ಜಾರಿಗೆ ತರಬೇಕು.'' ಎಂದು ಹೇಳಿದ್ದರು. ಇದರಿಂದ ಮಿರ್ಜಾ ಸಾಹೇಬರು ಅಸಮಾಧಾನಗೊಂಡರು. ಆದರೆ ಜವಾಬ್ದಾರಿ ಸರ್ಕಾರ ವಿಷಯದ ಬೆಂಬಲಿಗರ ಒತ್ತಾಯದಿಂದ, ಡಿವಿಜಿ ಅಲ್ಲಿಗೇ ಬಿಡಲಿಲ್ಲ. ಮಹಾತ್ಮರ ಗಮನಕ್ಕೆ ಇದನ್ನು ತಂದು, ಅವರಿಂದ ಮಿರ್ಜಾರ ಮನವೊಲಿಸುವಂತೆ ಮಾಡಲೆತ್ನಿಸಿದರು. ಆದರೆ ಅವರ ನಿರೀಕ್ಷೆಯಂತೆ ಮಹಾತ್ಮರ ಹಾಗೂ ಮಿರ್ಜಾರ ಭೇಟಿ ಆಗಲಿಲ್ಲ. ಡಿವಿಜಿ–ಮಿರ್ಜಾ ಇಬ್ಬರ ರಾಜಕೀಯ ಭಿನ್ನಾಭಿಪ್ರಾಯ ಉಳಿದೇ ಉಳಿಯಿತು. ಆದರೂ ಸ್ನೇಹ ಅಳಿಯಲಿಲ್ಲ. ಮೇಲೆ ಹೇಳಿದ ವರದಿ ಬಂದ ಹಿಂದೆಯೆ ಡಿವಿಜಿ ಕಾಯಿಲೆ ಮಲಗಿದ್ದಾಗ ಮಿರ್ಜಾರವರು ಪ್ರತಿದಿನವೂ ಬಂದು ಅವರನ್ನು ವಿಚಾರಿಸಿಕೊಳ್ಳುತ್ತಿದ್ದುದು ಈ ಸ್ನೇಹದ ದ್ಯೋತಕ. 1939ರಲ್ಲೂ ಮೈಸೂರು ರಾಜ್ಯಾಂಗ ಸುಧಾರಣಾ ಸಮಿತಿಯಲ್ಲಿ ಡಿವಿಜಿ ಜವಾಬ್ದಾರಿ ಸರ್ಕಾರವನ್ನೇ ಪ್ರತಿಪಾದಿಸಿದರು. ಮಿರ್ಜಾರ ಅವಸಾನದವರೆಗೂ ಡಿವಿಜಿ ಆಪ್ತರಾಗಿ ಉಳಿದರು. ಜೊತೆಗೇ ಪ್ರಜಾಪ್ರಭುತ್ವವನ್ನು ಪ್ರಬಲವಾಗಿ ಪ್ರತಿಪಾದಿಸಿದರು.

1947ರಲ್ಲಿ ಭಾರತ ಸ್ವತಂತ್ರವಾಯಿತು. ಆಗ ಅವರು ರಚಿಸಿದ ಪದ್ಯ ಮಾಲಿಕೆ 'ಸ್ವತಂತ್ರ ಭಾರತ ಅಭಿನಂದಸ್ತವ' ಡಿವಿಜಿಯ ರಾಷ್ಟ್ರಗೌರವಕ್ಕೆ ಸಾಕ್ಷಿ. ವಿಶ್ವದಲ್ಲಿ ಭಾರತ ನಿರ್ವಹಿಸಬೇಕಾದ ವಿಶೇಷ ಕರ್ತವ್ಯವಿದೆ. ಇತರ ರಾಷ್ಟ್ರಗಳಿಂದ ಭಿನ್ನವಾದ ಕರ್ತವ್ಯ. ಲೋಕ ಬಯಸುತ್ತಿರುವ ಬೆಳಕು ಇಲ್ಲಿಂದ ಚೆಲ್ಲಬೇಕು. ಅದಕ್ಕೆ ಭಾರತ ಸಜ್ಜುಗೊಳ್ಳಬೇಕು. ತನ್ನೊಳಗಿನ ಭಿನ್ನತೆ, ದಾರಿದ್ರ್ಯ, ಅಜ್ಞಾನಗಳನ್ನು ತೊಡೆದುಹಾಕಿ ಬಲಗೊಂಡು ಧೀಮಂತವಾಗಿ ನಿಲ್ಲಬೇಕು. ಅಂಥ ಭಾರತವನ್ನು ಕಟ್ಟುವ ಶಕ್ತಿ, ನಡೆಸುವ ಸಾಮರ್ಥ್ಯ, ನಮ್ಮ ನಾಯಕರಿಗೆ ಬರಬೇಕು, ನಮ್ಮ ಜನಕ್ಕೆ ಮೈಗೂಡಬೇಕು ಎಂದು ಆಶಿಸಿದರು. ಭಾರತ ಇಬ್ಭಾಗವಾಗಬೇಕಾಗಿ ಬಂದಾಗ ಸಹಜವಾಗಿಯೆ ಡಿವಿಜಿ ವ್ಯಗ್ರರಾದರು. ಭಾರತವನ್ನು ವಿಭಜನೆ ಮಾಡುವ

ಮೌಂಟ್‌ಬ್ಯಾಟನ್ ಯೋಜನೆ ಸದುದ್ದೇಶದ್ದಲ್ಲ, ಅದರಲ್ಲಿ ಅಪಾಯ ಕಾದಿದೆ ಎಂದು ಎಚ್ಚರಿಸಿದರು. ಆದರೆ ಅಂದಿನ ರಾಜಕೀಯ ಪರಿಸ್ಥಿತಿ ಬೇರೆ ದಿಕ್ಕಿನಲ್ಲಿ ಸಾಗಿತು. ವಿಭಜನೆ ಅನಿವಾರ್ಯವೇ ಆಯಿತು. ಪರಸ್ಪರ ಸದಾ ಸಂದೇಹಿಸುವ, ದ್ವೇಷಿಸುವ ಎರಡು ರಾಷ್ಟ್ರಗಳು ಜನ್ಮತಾಳಿದವು.

ಸ್ವಾತಂತ್ರ್ಯದ ಹಿಂದೆಯೆ ಹಳೆಯ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರದ ಹೋರಾಟ ನಡೆಯಿತು. ಮಹಾರಾಜರು ಪ್ರಜೆಗಳ ಒತ್ತಾಯಕ್ಕೆ ಮಣಿಯ ಬೇಕಾಯಿತು. ಜವಾಬ್ದಾರಿ ಸರ್ಕಾರ ರಚನೆಗೆ ದೊರೆಗಳು ಒಪ್ಪಿದ ಘೋಷಣೆ ಯಿಂದ ಡಿವಿಜಿ ಸಂತೋಷಪಟ್ಟರು. ಅಂದೇ ಅಕಸ್ಮಾತ್ತಾಗಿ ಮಿರ್ಜಾ ಸಾಹೇಬರನ್ನು ಭೇಟಿ ಆದಾಗ, ಸಾಹೇಬರು ಕೇಳಿದ ಮೊದಲ ಪ್ರಶ್ನೆ, "ನಿನಗೆ ಸಂತೋಷವಾಯಿತಷ್ಟೆ!" ಈ ಮಾತೇ ಇಬ್ಬರ ರಾಜಕೀಯ ಚಿಂತನೆಗೆ ಕೈಗನ್ನಡಿ.

ಸ್ವಾತಂತ್ರ್ಯ ಬಂದ ಮೇಲೆಯೂ ಡಿವಿಜಿ ರಾಷ್ಟ್ರಹಿತಚಿಂತನೆಯಲ್ಲೆ ಮುಳುಗಿ ದ್ದರು. ಭಾರತದಲ್ಲಿ ನಡೆಯುತ್ತಿದ್ದ ರಾಜಕೀಯದ ರೀತಿನೀತಿಗಳನ್ನು ವಿಮರ್ಶಿಸುತ್ತ ಇದ್ದರು. ಇಲ್ಲಿನ ನೈತಿಕ ಅವನತಿಗಾಗಿ ಕೊರಗುತ್ತಿದ್ದರು. ಭಾಷಾವಾರು ಪ್ರಾಂತ್ಯ ವಿಂಗಡನೆ, ಹಿಂದೀ ಭಾಷೆ ಸಮಸ್ಯೆ, ಇಂಗ್ಲಿಷಿನ ಸ್ಥಾನ, ಖಾಸಗೀ ಉದ್ಯಮಗಳ ಸ್ಥಾನ, ಸೋಷಿಯಲಿಸ್ಟಿಕ್ ಮಾದರಿ ಇತ್ಯಾದಿ ಪ್ರಶ್ನೆಗಳ ಬಗ್ಗೆ ತಮ್ಮ ಖಚಿತ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು. ಅವರ ಕೆಲವು ವಿಚಾರಗಳು ಜನಪ್ರಿಯ ಆಗುತ್ತಿರಲಿಲ್ಲ. ಉದಾಹರಣೆಗೆ ಕರ್ನಾಟಕ ಏಕೀಕರಣದ ಬಗ್ಗೆ ಡಿವಿಜಿ ಎತ್ತಿದ ಆಕ್ಷೇಪ. ಕನ್ನಡ ಭಾಷೆಯ ಪ್ರಾಚೀನತೆ, ಸಾಮರ್ಥ್ಯಗಳ ಬಗ್ಗೆ ರಾಜಾಜಿ ಹೇಳಿದ್ದಕ್ಕೆ ಬೆಂಬಲಿಸಿದ್ದು ಇತ್ಯಾದಿ. ಆದರೆ ಡಿವಿಜಿಗೆ ಜನಪ್ರಿಯತೆ ಮುಖ್ಯವಲ್ಲ. ಸತ್ಯ, ಆತ್ಮಸಾಕ್ಷಿ ಪ್ರಧಾನ.

ಡಿವಿಜಿ ನ್ಯಾಯ ವಿಧಾಯಕ ಸಭೆಯ ಸದಸ್ಯರಾಗಿದ್ದರು ಎಂದೆವು. 1926 ರಿಂದ 40ರವರೆಗೆ ಅವರು ಆ ಸಭೆಯಲ್ಲಿ ಪ್ರಜಾಹಿತವನ್ನು ಪ್ರತಿಪಾದಿಸಿದರು, ಪಕ್ಷ ರಾಜಕೀಯದಿಂದ ಮುಕ್ತವಾಗಿ ಸ್ವತಂತ್ರ ಧೋರಣೆಯನ್ನು ತಾಳಿದ್ದರು. ಪ್ರತಿಯೊಂದು ವಿಷಯವನ್ನೂ ಬುಡಮಟ್ಟ ಶೋಧಿಸಿ, ಅದರ ನಾನಾ ಅಂಶ ಗಳನ್ನೆಲ್ಲ ತೆರೆದ ಮನಸ್ಸಿನಿಂದ ನೋಡಿ, ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸುತ್ತಿದ್ದರು. ವಿರೋಧಿಸಬೇಕಾಗಿ ಬಂದಾಗ ಹಿಂಜರಿಯುತ್ತಿರಲಿಲ್ಲ. ಆದರೆ ವಿರೋಧಕ್ಕಾಗಿಯಷ್ಟೆ ವಿರೋಧವಲ್ಲ. ಅವರ ಆಕ್ಷೇಪಣೆಯಲ್ಲಿ ಆಗ್ರಹ, ಆಕ್ರೋಶ ಇರುತ್ತಿರಲಿಲ್ಲ. ತಪ್ಪನ್ನು ತಿದ್ದುವ ಮನೋಭಾವ, ತಪ್ಪಿಗಾಗಿ ದಂಡಿಸುವುದಲ್ಲ ಅಥವಾ ಆ ತಪ್ಪಿನ ಉರಿಯಲ್ಲಿ ತನ್ನ ಇಲ್ಲವೇ ತನ್ನ ಪಕ್ಷದ ಗುಂಪಿನ ಬೇಳೆ

ಬೇಯಿಸಿಕೊಳ್ಳುವುದಲ್ಲ. ನ್ಯಾಯವಿಧಾಯಕ ಸಭೆಯ ಆಗಿನ ಕಾರ್ಯಕಲಾಪಗಳ ವರದಿಗಳು ಡಿವಿಜಿ ಅವರ ಕೊಡುಗೆಯನ್ನು ಬಿಂಬಿಸುತ್ತವೆ.

ಜವಾಬ್ದಾರಿ ಸರ್ಕಾರ ಸ್ಥಾಪನೆ ಆದಮೇಲೆ ಮೈಸೂರು ರಾಜ್ಯಾಂಗ ರಚನಾ ಸಭೆ ಏರ್ಪಾಟಾಯಿತು. ಅದರ ಅಧ್ಯಕ್ಷಸ್ಥಾನಕ್ಕೆ ಡಿವಿಜಿ ಅವರ ಹೆಸರು ಪ್ರಸ್ತಾಪಿತವಾಯಿತು. ಆದರೆ ಡಿವಿಜಿ ಒಪ್ಪಿಕೊಳ್ಳಲಿಲ್ಲ. ತಮ್ಮ ಕಾರ್ಯಕ್ಕಾಗಿ ಯಾವುದೇ ಪ್ರತಿಫಲವನ್ನು ಒಪ್ಪಿಕೊಳ್ಳಲಿಲ್ಲ. ಈ ನಿಟ್ಟಿನಲ್ಲಿ ವಿಶ್ವೇಶ್ವರಯ್ಯ ನವರಿಂದ, ಮಿರ್ಜಾರಿಂದ ಬಂದ ಹಲವಾರು ಸೂಚನೆಗಳನ್ನೆಲ್ಲ ನಿರಾಕರಿಸಿ ಬಿಟ್ಟರು. ಯಾವ ಹಂಗನ್ನೂ ಹತ್ತಿರಕ್ಕೆ ಸೇರಿಸಲಿಲ್ಲ. ಪೂರಾ ಸ್ವತಂತ್ರರಾಗಿಯೆ ಉಳಿದರು.

ಡಿವಿಜಿಯವರದು ಪಕ್ಷಾತೀತ ರಾಜಕಾರಣ. ಅದಕ್ಕೆ ಅವರಿಗೆ ಎಳೆತನ ದಿಂದಲೇ ಮನವೊಕ್ಕ 'ಲಿಬರಲಿಸಂ' ಅಥವಾ ಮಿತವಾದ (ಸೌಮ್ಯವಾದ)ದ ಪ್ರಭಾವ ಕಾರಣ. ಇಂಗ್ಲೆಂಡಿನಲ್ಲಿ ಜಾನ್ ಸ್ಟೂಯರ್ಟ್‌ಮಿಲ್, ಎಡ್ಮಂಡ್ ಬರ್ಕ್ ಮತ್ತು ಪ್ರಮುಖವಾಗಿ ಲಾರ್ಡ್ ಮಾರ್ಲೆ ಅವರ ಲಿಬರಲ್ ಧೋರಣೆ ಇವರ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ಮಾರ್ಲೆ ಅವರ ಎಡ್ಮಂಡ್ ಬರ್ಕ್ ಜೀವನ ಚರಿತ್ರೆ, ಇಟಲಿಯ ಮ್ಯಾಜಿನಿ ಅವರ ಜೀವನ ವಿಚಾರಗಳನ್ನು ಡಿವಿಜಿ ತುಂಬ ಮೆಚ್ಚಿ ಕೊಂಡಿದ್ದರು. ಆ ದೃಷ್ಟಿಯಿಂದಲೇ ಅವರಿಗೆ ದಾದಾಭಾಯಿ ನವರೋಜಿ, ಗೋಪಾಲ ಕೃಷ್ಣ ಗೋಖಲೆ ಮುಂತಾದ ಭಾರತೀಯ ಸೌಮ್ಯವಾದಿ ನಾಯಕರುಗಳ ವಿಚಾರ ತುಂಬ ಹಿಡಿಸಿತು.

'ಸೌಮ್ಯವಾದ' ಎನ್ನುವುದು ಅವರಿಗೆ ರಾಜಕೀಯ ಧೋರಣೆ ಮಾತ್ರವಲ್ಲದೆ ಜೀವನ ವಿಧಾನವೂ ಆಗಿತ್ತು. 'ಲಿಬರಲಿಸಂ' ಎಂಬ ಕಲ್ಪನೆಯಲ್ಲಿ ಸ್ವಾತಂತ್ರ್ಯ ಹಾಗೂ ಸೌಮ್ಯ ನಡೆ ಸೇರಿತ್ತು. *Gokhale for today : Liberalism Re-stated* ಎಂಬ ಒಂದು ಲೇಖನದಲ್ಲಿ (ತ್ರಿವೇಣಿ ಪತ್ರಿಕೆ) ಡಿವಿಜಿ ತಮ್ಮ ಈ ವಿಚಾರವನ್ನು ಸ್ಪಷ್ಟಪಡಿಸಿದ್ದಾರೆ. ಈ ಧೋರಣೆಯ ತಾತ್ತ್ವಿಕ ಹಿನ್ನೆಲೆ, ರಾಷ್ಟ್ರೀಯ ಅಂತಾರಾಷ್ಟ್ರೀಯ ನೀತಿ, ಆರ್ಥಿಕ ನೀತಿ, ವ್ಯಕ್ತಿ ಮತ್ತು ರಾಷ್ಟ್ರಗಳ ಸಂಬಂಧ ಎಲ್ಲವನ್ನೂ ವಿಮರ್ಶಿಸಿದ್ದಾರೆ. ಅನಿರ್ಬಂಧಿತ ವ್ಯಕ್ತಿಸ್ವಾತಂತ್ರ್ಯಕ್ಕೆ ಒಲಿದವರು ಡಿವಿಜಿ. ಆದರೆ ಸಮಾಜ ಜೀವನದಲ್ಲಿ ವ್ಯಕ್ತಿ–ಸಮಾಜಗಳ ನಡುವೆ ಹೊಂದಾಣಿಕೆ ಇರಲೇಬೇಕು. ಪ್ರಜ್ಞಾವಂತನೂ, ಧರ್ಮದೃಷ್ಟಿಯುಳ್ಳವನೂ ಆದ ವ್ಯಕ್ತಿ ಇರುವಲ್ಲಿ ಇಂಥ ಸೌಹಾರ್ದ ಸುಲಭ. ವ್ಯಕ್ತಿಗೂ–ಸಮಾಜಕ್ಕೂ ಘರ್ಷಣೆ ಅನಿವಾರ್ಯ ಏನಲ್ಲ. ಸಮಾಜದ ಹಿತಕ್ಕಾಗಿ ವ್ಯಕ್ತಿಯೆ ತನ್ನ ಬೇಕು–ಬೇಡಗಳನ್ನು ತಾನೇ

ನಿಯಂತ್ರಿಸಿಕೊಳ್ಳುತ್ತಾನೆ. ಸಮಾಜವೂ ವ್ಯಕ್ತಿಯ ಹಿತಾಸಕ್ತಿಗಳಿಗೆ, ಧರ್ಮಕ್ಕೆ ಧಕ್ಕೆ ಬರದಂತೆ ನಡೆದುಕೊಳ್ಳುತ್ತದೆ. ಆಗ ಘರ್ಷಣೆಗೆ ಎಡೆ ಇಲ್ಲ. ಒಂದು ವೇಳೆ ಘರ್ಷಣೆ ಅನಿವಾರ್ಯವಾದಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಧಕ್ಕೆ ಬಂದಲ್ಲಿ ಸೌಮ್ಯವಾದಿ ವ್ಯಕ್ತಿಸ್ವಾತಂತ್ರ್ಯದ ಪರವಾಗಿಯೆ ನಿಂತಾನು ಎನ್ನುತ್ತಾರೆ ಡಿವಿಜಿ. ಮತ್ತೊಂದು ಅಂಶ ಎಂದರೆ ಅವರು ಸಾರ್ವಜನಿಕ ವ್ಯವಹಾರದಲ್ಲಿ ವೈಯಕ್ತಿಕ ಮಾಲೀಕತ್ವ ಮುಂತಾದವುಗಳನ್ನು ಪೂರಾ ವಿರೋಧಿಸರು. ಸಮುದಾಯದ ಹತೋಟಿ ಅವರಿಗೆ ಹಿಡಿಸದು. ಬದಲಾಗಿ ಗಾಂಧೀಜಿ ಪ್ರತಿಪಾದಿಸಿದ ಧರ್ಮದರ್ಶಿತ್ವ ತತ್ವ (Trusteeship) ಸರಿ ಎನ್ನುತ್ತಾರೆ.

ಗೋಖಲೆಯವರ ಸೌಮ್ಯವಾದ (ಮಿತವಾದ ಎಂದೂ ಹೇಳಲಾಗಿದೆ) ಆರು ಸೂತ್ರಗಳನ್ನು ಉಳ್ಳದ್ದು. (1) ಸ್ವಾತಂತ್ರ್ಯ (2) ವಾಸ್ತವತೆ (3) ಸಮಗ್ರ ಅಧ್ಯಯನ (4) ಬದಲಾವಣೆಯಲ್ಲಿ ಕ್ರಮಬದ್ಧತೆ, ನಿಧಾನ (5) ಪರಂಪರೆಯ ಅವಿಚ್ಛಿನ್ನತೆ (6) ಆಡಳಿತ ದಕ್ಷತೆ, ಹಾಗೂ ಸಾರ್ವಜನಿಕ ವೆಚ್ಚದಲ್ಲಿ ಹಿಡಿತ. ಇಲ್ಲಿ ಕ್ರಾಂತಿ, ಘರ್ಷಣೆ, ಆಕ್ರೋಶ, ಉದ್ವೇಗಗಳಿಗೆ ಎಡೆಯಿಲ್ಲ.

ಮಹಾತ್ಮರ ಮಾರ್ಗವನ್ನು ಬಹುತೇಕ ಡಿವಿಜಿ ಒಪ್ಪುತ್ತಾರೆ. ಆದರೆ 'ಸತ್ಯಾಗ್ರಹ'ದಲ್ಲಿ ಇರಬಹುದಾದ ಅಪ್ರತ್ಯಕ್ಷ ಒತ್ತಡ, ಆಗ್ರಹದ ಅಂಶವನ್ನು ಅವರು ಒಪ್ಪರು. ಅಲ್ಲದೆ ಗಾಂಧೀಜಿ ಮಾನವನಲ್ಲಿನ ಒಳಿತಿನ ಅಂಶವನ್ನು ಪೂರಾ ನೆಚ್ಚಿ ತಮ್ಮ ರೀತಿಯನ್ನು ರೂಪಿಸಿದರು. ಮಾನವನ ಓರೆಕೋರೆ, ಲೋಪದೋಷ ತಪ್ಪುನೆಪ್ಪುಗಳ ಇನ್ನೊಂದು ಮುಖವನ್ನು ಪರಿಗಣಿಸಲಿಲ್ಲ. ಇದರಿಂದಾಗಿ ಅವರ ಸಿದ್ಧಾಂತ ಆದರ್ಶವಾಗಿ ಸರಿಯೆ ಆದರೂ ಆಚರಣೆಯಲ್ಲಿ ಪೂರಾ ವ್ಯಾವಹಾರಿಕವಾಗಲಿಲ್ಲ ಎನ್ನುವುದು ಡಿವಿಜಿಯವರ ವಾದ. ಇಲ್ಲಿಯೂ ಅವರ ಸ್ವತಂತ್ರ ವಿಚಾರ ಸರಣಿ ಸ್ಪಷ್ಟವಾಗಿದೆ.

ರಾಜಕೀಯ ಸಿದ್ಧಾಂತವನ್ನು ಕುರಿತು ಡಿವಿಜಿ ಮಾಡಿದ ಅಭ್ಯಾಸ, ಚಿಂತನೆ ಅಪಾರ. ದೇಶ–ವಿದೇಶಗಳ ಸಿದ್ಧಾಂತಗಳನ್ನೆಲ್ಲ ಅವರು ಅರಿತಿದ್ದರು. ಪ್ರಾಚೀನ ಗ್ರೀಕ್ ರೋಮನ್ನರ ಸಿದ್ಧಾಂತಗಳು, ಅರಿಸ್ಟಾಟಲ್ ಪ್ಲೇಟೋಗಳು, ಭಾರತದ ಹಿಂದಿನ ಶ್ರುತಿ ಸ್ಮೃತಿಗಳು, ವಿದ್ಯಾರಣ್ಯರ ದರ್ಶನ, ಆಧುನಿಕ ರೀತಿನೀತಿಗಳು, ಬ್ರಿಟನ್ನಿನ ಲಿಬರಲಿಸಂ, ರಷ್ಯಾದ ಕಮ್ಯೂನಿಸಂ ಇತ್ಯಾದಿ ಎಲ್ಲವನ್ನೂ ಅವರು ಕೂಲಂಕಷವಾಗಿ ಅಭ್ಯಾಸ ಮಾಡಿದ್ದರು. ಆಗಲೇ ಹೇಳಿದಂತೆ ಮಾರ್ಲೆ ಅವರ ಪ್ರತಿಪಾದನೆಗೆ ತುಂಬ ಒಲಿದಿದ್ದರು. ವ್ಯಕ್ತಿಹಿತ–ರಾಷ್ಟ್ರಹಿತ ಮುಖ್ಯ, ಪಕ್ಷಹಿತ ಅಲ್ಲ ಎನ್ನುತ್ತಿದ್ದರು. ಯಾವುದೇ ಸಮಸ್ಯೆಯನ್ನೂ ನಾನಾ ದೃಷ್ಟಿಗಳಿಂದ ಚೆನ್ನಾಗಿ

ವಿಮರ್ಶೆ ಮಾಡಲೇಬೇಕು. ಎಂಥ ದೊಡ್ಡ ವ್ಯಕ್ತಿಯೆ ಆಗಲಿ ಆತನ ವಿಚಾರವನ್ನು ಒರೆಹಚ್ಚಿ ಪರೀಕ್ಷಿಸಲೇಬೇಕು. ಅನುದ್ವೇಗಕರ ವಿಮರ್ಶೆ ಅತ್ಯಗತ್ಯ. ಘೋಷಣೆಗಳಿಗೆ ಮರುಳಾಗಬಾರದು. ಸಮಾಜ ಪರಿವರ್ತನದಲ್ಲಿ ಅವಸರ ಸಲ್ಲದು. ಅನೇಕ ವರ್ಷಗಳಿಂದ ರೂಢವಾಗಿರುವ ಪದ್ಧತಿಗಳು ರೀತಿ–ರಿವಾಜು, ಕಟ್ಟಳೆಗಳನ್ನು ಏಕಾಏಕಿ ತಳ್ಳಿ ಹಾಕತಕ್ಕದ್ದಲ್ಲ. ಪರಿವರ್ತನೆ ಎಂದರೆ ಸಹಜ ರೀತಿಯ ವಿಕಾಸ. ಇಂದಿನದರ ನಾಶವಲ್ಲ. ಜಗತ್ತು ಸದಾ ಪರಿವರ್ತನಶೀಲ. ಆದರೆ ಪರಿವರ್ತನೆ ಹೂವಿನೊಳಗಿಂದ ಕಾಯಿ ಮೂಡುವಂತೆ ಬರಬೇಕು. ಕಾಯಿ ತಾನೇ ಮಾಗಿ ಹಣ್ಣಾಗುವಂತೆ ಬರಬೇಕು. ಹಿಸುಕಿ ಹಿಸುಕಿ ಹಣ್ಣು ಮಾಡಿದರೆ ಪಕ್ವತೆ ಬಾರದು. ಹೊರ ಒತ್ತಡಗಳಿಂದ ಆಗುವ ಪರಿವರ್ತನೆ ಕೃತ್ರಿಮ, ಕೃತಕ, ಅಸಹಜ, ಛಿದ್ರಕಾರಕ. ಇದು ರಾಜಕೀಯದಲ್ಲೂ ಅಗತ್ಯ ಎನ್ನುವುದು ಅವರ ಮತ.

ಈ ವ್ಯಾಪಕ ಅಧ್ಯಯನ ಚಿಂತನಗಳ ಫಲವೇ ಡಿವಿಜಿ ಅವರ ರಾಜ್ಯಶಾಸ್ತ್ರ ಗ್ರಂಥಗಳು. 'ರಾಜ್ಯಾಂಗ ತತ್ತ್ವಗಳು', 'ರಾಜ್ಯಶಾಸ್ತ್ರ', 'ರಾಜ್ಯಕುಟುಂಬ', 'ರಾಜಕೀಯ ಪ್ರಸಂಗಗಳು' ಎಂಬ ಐದಾರು ಪುಸ್ತಕಗಳು ಕನ್ನಡದ ರಾಜಕೀಯ ಚಿಂತನಕ್ಕೆ ಡಿವಿಜಿ ಅವರ ಅಮೂಲ್ಯ ಕೊಡುಗೆ.

ಕನ್ನಡದಲ್ಲಿ ರಾಜ್ಯಶಾಸ್ತ್ರ ಚಿಂತನೆ ಕಡಿಮೆ. ದಿನದಿನದ ರಾಜಕೀಯ ವಿಮರ್ಶೆಯ ಲೇಖನ ಎಷ್ಟೋ ಬಂದಿವೆ, ನಿಜ. ಆದರೆ ಈ ವಿಷಯವನ್ನು ಶಾಸ್ತ್ರವಾಗಿ ಕ್ರಮವಾಗಿ ಅಧ್ಯಯನ ಮಾಡಿ ತಿಳಿಸಿರುವುದು ಅಪರೂಪ. ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯವಾಗಿ ಹಲಕೆಲವು ಹೊತ್ತಗೆ ಬಂದಿರಬಹುದು. ಆದರೆ ಜನಸಾಮಾನ್ಯರ ತಿಳಿವಳಿಕೆಗಾಗಿ, ರಾಜಕೀಯ ಪ್ರೌಢಿಮೆಯ ಉದ್ದೇಶದಿಂದ ಈ ಶಾಸ್ತ್ರವನ್ನು ತಿಳಿಯಾದ ಭಾಷೆಯಲ್ಲಿ ಹೇಳಿರುವವರು ಪ್ರಾಯಶಃ ಡಿವಿಜಿಯವರೇ. ಅನ್ಯ ಭಾಷೆಗಳ ಕೃತಿಗಳ ಅನುವಾದ ಸಿಕ್ಕಾವು. ಆದರೆ ಮೂಲ ಚಿಂತನವನ್ನೇ ಕನ್ನಡದಲ್ಲಿ ಮಾಡಿ ಹೇಳಿರುವುದು ವಿರಳ.

ಈ ನಾಲ್ಕಾರು ಗ್ರಂಥಗಳಲ್ಲಿ ಡಿವಿಜಿ ಜಗತ್ತಿನ ರಾಜಕೀಯ ಇತಿಹಾಸವನ್ನೇ ಕೊಡುತ್ತಾರೆ. ಆದಿಯಿಂದ ಮೂಡಿಬಂದ ಕ್ರಮಗಳು, ಸಮಾಜ ಬೆಳೆದ ಬಗೆ, ರಾಜ್ಯಶಾಸನದ ಅಗತ್ಯ, ಸ್ವರೂಪ, ಬೆಳವಣಿಗೆ, ಉದ್ದೇಶ, ರೀತಿನೀತಿ, ಬಗೆಗಳು, ಪ್ರತಿಕ್ರಿಯೆಗಳು, ವ್ಯಕ್ತಿಯ ಹಕ್ಕುಬಾಧ್ಯತೆಗಳು, ಪ್ರಭುತ್ವದ ಹಕ್ಕುಬಾಧ್ಯತೆಗಳು, ಎಲ್ಲವನ್ನೂ ವಿವರಿಸುತ್ತಾರೆ. ತಿಳಿಯಾದ ಭಾಷೆಯಲ್ಲಿ ಸರಳವಾದ ಮಾತಿನಲ್ಲಿ ರಾಜ್ಯಶಾಸ್ತ್ರವನ್ನು ಪರಿಚಯಿಸುತ್ತಾರೆ. ಸ್ವಾತಂತ್ರ್ಯಕ್ಕೆ ಹಿಂದೆಯೆ ಡಿವಿಜಿ ಈ ಎಷ್ಟೋ

ಲೇಖನಗಳನ್ನು ಬರೆದಿದ್ದರು. ಸ್ವಾತಂತ್ರ್ಯ ಬಂದ ಮೇಲೂ ಕೊನೆಯವರೆಗೂ ಸಮಸ್ಯೆಗಳ ವಿಮರ್ಶೆಯನ್ನು ನಡೆಸುತ್ತಲೇ ಇದ್ದರು.

'ರಾಜ್ಯಶಾಸ್ತ್ರ' ಎಂಬ ಉದ್ಗ್ರಂಥವಂತೂ ಅತ್ಯಂತ ಶ್ರೇಷ್ಠ ಕೃತಿ. ಅದರ ಉದ್ದೇಶವನ್ನು ಹೀಗೆ ಗುರುತಿಸಿದ್ದಾರೆ ಡಿವಿಜಿ—

"ನಮ್ಮ ಮಹಾಜನ ರಾಷ್ಟ್ರಕತತ್ತ್ವಗಳನ್ನೂ ರಾಜ್ಯಸಂಸ್ಥೆಯ ಅಂಗಗಳನ್ನೂ ತಿಳಿದುಕೊಳ್ಳಲು ಕುತೂಹಲವುಳ್ಳವರಾಗಿರಬಹುದೆಂಬ ಆಶೆ, ಉತ್ಸಾಹಗಳಲ್ಲಿ ಇದನ್ನು ಬರೆದದ್ದು.

"ನಮ್ಮ ದೇಶಕ್ಕೆ ಪ್ರಜಾರಾಜ್ಯಕ್ರಮವನ್ನು ತಂದುಕೊಟ್ಟಿದ್ದೇವೆ. ಆದರೆ ಜನರಲ್ಲಿ (1) ರಾಷ್ಟ್ರಕತತ್ತ (2) ನ್ಯಾಯನಿಷ್ಠೆ (3) ನೀತಿದಾರ್ಢ್ಯ (4) ಸೌಜನ್ಯ ಇವು ಇದ್ದಲ್ಲದೆ ಎಂಥ ರಾಜ್ಯ ವ್ಯವಸ್ಥೆಯೂ ಜನಕ್ಕೆ ಸುವ್ಯವಸ್ಥೆ ಎನಿಸಲಾರದು. ಜನರಲ್ಲಿ ನೀತಿ ಸಂಪತ್ತು ಬೆಳೆದಂತೆ ಅವರ ರಾಜಕೀಯ, ಆರ್ಥಿಕ, ಸಾಮಾಜಿಕ ಸೌಕರ್ಯಗಳು ಬೆಳೆಯುತ್ತವೆ. ಇದಕ್ಕೆಲ್ಲ ಸಾಧಕವಾದದ್ದು ರಾಷ್ಟ್ರಕ ಪ್ರಜ್ಞೆ ಮತ್ತು ರಾಜಕೀಯ ವಿವೇಕ. ಈ ಎರಡು ಗುಣಗಳನ್ನು ಪ್ರಚಾರಪಡಿಸಲು ಈ ಸಣ್ಣ ಪ್ರಯತ್ನ ಸಾಧನವಾಗಲಿ.

"ರಾಷ್ಟ್ರ–ರಾಷ್ಟ್ರಕ ಸಂಬಂಧದ ಭಾವನೆಯೂ ರಾಷ್ಟ್ರಕ ಕರ್ತವ್ಯವೂ ಸರ್ವ ಸಾಮಾನ್ಯ ಧರ್ಮದ ಒಂದು ಮುಖ್ಯಾಂಶವೆಂಬ ಭಾವನೆಯು ನಮ್ಮ ದೇಶಕ್ಕೆ ಹೊಸದೆಂದು ಕಾಣುತ್ತದೆ. ಇಂಥಾ ಭಾವನೆಯನ್ನು ಪ್ರಚಾರಪಡಿಸುವುದು ಈ ಗ್ರಂಥದ ಉದ್ದೇಶ."

ಡಿವಿಜಿ ಮೂಲತಃ ವಿದ್ವಾಂಸರು, ಸಾಹಿತಿಗಳು. ಆದರೆ ರಾಜಕೀಯವನ್ನಾಗಲಿ, ಸಾಮಾಜಿಕ ವ್ಯವಹಾರ ಸಮಸ್ಯೆಗಳನ್ನಾಗಲಿ ದೂರ ಇಡುವುದು ಅವರಿಗೆ ಸಹಿಸದು. ಬದುಕು ದೊಡ್ಡದು, ವ್ಯಾಪಕ. ಆದರಲ್ಲಿ ರಾಜಕೀಯ, ವಿಜ್ಞಾನ, ಧರ್ಮ, ಸಾಹಿತ್ಯ, ಕಲೆ ಎಲ್ಲ ಅವಶ್ಯ. ಅಂತೆಯೆ ಅವರು ರಾಜಕೀಯವನ್ನು ನಡೆಸಿದರು. ವಾಸ್ತವವಾಗಿ ಈ ನಾನಾ ಅಂಗಗಳ ನಡುವೆ ಅವರು ಯಾವ ವಿರೋಧವನ್ನೂ, ಅಸಂಗತತೆಯನ್ನೂ ಮಾನ್ಯ ಮಾಡಲಿಲ್ಲ. ಅವರಿಗೆ ಕಾವ್ಯ ಎಷ್ಟು ಪ್ರಿಯವೋ, ರಾಜಕೀಯವೂ ಅಷ್ಟೆ. ಧರ್ಮಾರ್ಥಗಳ ಹಾಗೆಯೆ ರಾಜಕಾರಣವೂ ಅಗತ್ಯ.

ಸುಖಸ್ಯ ಮೂಲಂ ಧರ್ಮಃ ।
ಧರ್ಮಸ್ಯ ಮೂಲಮರ್ಥಃ ।
ಅರ್ಥಸ್ಯ ಮೂಲಂ ರಾಜ್ಯಂ ।

ಎಂಬ ಚಾಣಕ್ಯ ಸೂತ್ರ ಅವರಿಗೆ ಪ್ರಿಯ.

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ ।
ಭೂಮಿಗದನೆಟುಕಿಸುವೆನೆಂಬೆಸೆಕ ರಾಷ್ಟ್ರಕತೆ ।।

ಎನ್ನುವ ಅವರ ಮಾತು ರಾಜಕಾರಣ–ಕಾವ್ಯಗಳ ಸಮನ್ವಯವನ್ನು ಸೂಚಿಸುತ್ತದೆ. ಈ ಹಿನ್ನಲೆಯಲ್ಲಿ ರಾಜಕಾರಣವೂ ಕಾವ್ಯದ ಹಾಗೆಯೆ ಬದುಕಿನ ಅವಶ್ಯಕ ಭಾಗವಾಗುತ್ತದೆ. ಅದು ಇಂದಿನ ದುಷ್ಟ ಅರ್ಥವುಳ್ಳದ್ದಾಗದೆ, ಮಾನವನ ಒಳ–ಹೊರಗುಗಳ ಉದ್ಧಾರದ ಮಾರ್ಗವಾಗುತ್ತದೆ. ಇದಕ್ಕೆ ಗುರಿ ರಾಮರಾಜ್ಯ ಕಲ್ಪನೆ ಎನ್ನಬಹುದು. ಡಿವಿಜಿ ಹೇಳುತ್ತಾರೆ :—

"ರಾಮರಾಜ್ಯವು ಸಿದ್ಧವಸ್ತುವಾಗದೆ ಸಾಧ್ಯಧ್ಯೇಯುವಾಗಿಯೆ ಇರುವ ಒಂದು ಜೀವಿತ ಸೌಂದರ್ಯದ ಕಲ್ಪನೆ. ಅದನ್ನು ಹುಡುಕುತ್ತಿರುವುದೇ, ಅದಕ್ಕಾಗಿ ಪಡುವ ಶ್ರಮವೇ, ಅದನ್ನು ಕುರಿತ ತಪಸ್ಸೇ ನಮ್ಮ ಆತ್ಮಕ್ಕೆ ಲಾಭ.....

"ವಾಲ್ಮೀಕಿಯ ಕಲ್ಪನೆ ಸತ್ಯಾತ್ಮಕವಾದದ್ದು. ಅದು ಸಾಧ್ಯಸತ್ಯ..... ಅದು ಮನುಷ್ಯನಲ್ಲಿ ಸದ್ಯಕ್ಕೆ ಆಳವಾಗಿ ಅಡಕಿಕೊಂಡಿರುವ–ಆದರೆ ಒಂದಾನೊಂದು ದಿನ ವಿಕಸಿತವಾಗಬಹುದಾಗಿರುವ – ಶ್ರೇಷ್ಠ ಗುಣಗಳ ಪರಮೋನ್ನತಿಯ ಪ್ರತಿಭಾರೂಪವಾದ ಸತ್ಯ.

"ಮನುಷ್ಯನ ರಾಮರಾಜ್ಯಾನ್ವೇಷಣೆಯು ಸತತವಾಗಿ ನಡೆಯುತ್ತಿರಬೇಕು.... ಆತ್ಮಸಂಸ್ಕಾರ ದೃಷ್ಟಿಯಿಂದ ರಾಷ್ಟ್ರಕನು ರಾಜಕೀಯಕ್ಕೆ ತೊಡಗಬೇಕು ; ರಾಮರಾಜ್ಯವನ್ನರಸುತ್ತಿರಬೇಕು.

"ರಾಜ್ಯವೆಂಬುದು ಕುಟುಂಬದಂತೆ–ಒಂದು ಧರ್ಮಕ್ಷೇತ್ರ. ಮನುಷ್ಯನ ಅಹಂಭಾವವನ್ನು ಸವೆಯಿಸಿ, ಅಂತಃಕರಣವನ್ನು ವಿಸ್ತಾರಪಡಿಸಲು ಸಂಸಾರ ಹೇಗೆ ಒಂದು ಸಾಧನವೊ ರಾಜ್ಯವೂ ಹಾಗೆ ಒಂದು ಸಾಧನ. ಗೃಹಾಭಿಮಾನದಂತೆ ದೇಶಾಭಿಮಾನವೂ ಹೃದಯಪರಿಪಾಕಕ್ಕೆ ಅವಕಾಶವುಂಟುಮಾಡಬಲ್ಲದು... ರಾಷ್ಟ್ರಕತ್ವವೂ ಹಾಗೆ ಆತ್ಮಸಂಸ್ಕಾರರೂಪದಲ್ಲಿ ಉಪಕಾರವಾಗತಕ್ಕದ್ದು. ಈ ಭಾವನೆಯನ್ನೇ ಮನು–ವಸಿಷ್ಠರುಗಳೂ, ಗೋಖಲೆ–ಗಾಂಧೀಗಳೂ ನಿದರ್ಶನಪಡಿಸಿದ್ದಾರೆ. ಇಟಲಿಯ ಮಟ್ಸಿನಿ, ಇಂಗ್ಲಂಡಿನ ಗ್ಲಾಡ್‌ಸ್ಟನ್, ಅಮೆರಿಕಾದ ಲಿಂಕನ್ – ಇವರೂ ಅದೇ ಪಂಥದವರು.

ಯಥಾ ಭೇರುಡ ಶಕುನೇಃ ದೇಹ್ಯೈಕ್ಯೇ೭ಪಿ ಮುಖದ್ವಯಮ್ ।
ತಥಾ ರಾಷ್ಟ್ರಕ ಧರ್ಮಸ್ಯ ಕೃತ್ಯೈಕ್ಯೇ೭ಪಿ ಫಲ ದ್ವಯಮ್ ।।

ಗಂಡಭೇರುಂಡ ಪಕ್ಷಿಗೆ ಎರಡು ಮುಖಗಳಿರುವಂತೆ ಶುದ್ಧಚಿತ್ತನ ರಾಷ್ಟ್ರಕ ಧರ್ಮಾಚರಣೆಗೆ ಎರಡು ಪ್ರಯೋಜನಗಳು :— (1) ರಾಜ್ಯದ ಕ್ಷೇಮ ಸಂಪತ್ತು

ಗಳಲ್ಲಿ ಹೆಚ್ಚು ಹೆಚ್ಚು ಭಾಗ. (2) ನಿರ್ಮಮತಾಭ್ಯಾಸಪೂರ್ವಕವಾದ ಅಂತರಾತ್ಮ ವಿಸ್ತರಣೆ.'' (ರಾಜ್ಯಶಾಸ್ತ್ರ–390–391)

ಡಿವಿಜಿಯವರದು ಇಂಥ 'ಶುದ್ಧಚಿತ್ತನ ರಾಷ್ಟ್ರಕ ಧರ್ಮಾಚರಣೆ'.

ಭಾರತದ ಸ್ವಾತಂತ್ರ್ಯದ ನಂತರದ ವರ್ಷಗಳಲ್ಲಿ ದೇಶದ ರಾಜಕೀಯ ನಡೆದ ದಾರಿ, ದಿಕ್ಕು, ರೀತಿ ಅನೇಕರನ್ನು ನಿರಾಶರಾಗಿಸಿತು, ಬೇಸರಗೊಳಿಸಿತು. ಅಂತಹವರಲ್ಲಿ ಡಿವಿಜಿ ಸಹ ಒಬ್ಬರು. ರಾಷ್ಟ್ರದ ರಥ ಲಂಗುಲಗಾಮು ಇಲ್ಲದೆ ಓಡುತ್ತಿದೆ ಎಂಬ ಅಪಾಯದ ಸುಳಿವನ್ನು ಕಂಡರು. ರಾಜಾಜಿ ಅವರು ಸ್ವತಂತ್ರ ಪಕ್ಷವನ್ನೇ ಕಟ್ಟಿದರು. ಪಕ್ಷ ರಾಜಕೀಯದಿಂದ ದೂರ ಇದ್ದ ಡಿವಿಜಿ ಸಹ ಆಗ ಆ ಪಕ್ಷಕ್ಕೆ ಬೆಂಬಲಿಸಿದರು. ಕ್ರಮೇಣ ಆ ಪಕ್ಷ ಮಾಯವಾಯಿತು. ರಾಜಕಾರಣ ಇನ್ನೇನೊ ತಿರುವು ಪಡೆಯಿತು.

ಪಕ್ಷ ರಾಜಕೀಯವನ್ನು ಡಿವಿಜಿ ವಿರೋಧಿಸಿದರು. ದಿಟ. ಆದರೆ ಪ್ರಜಾ ಪ್ರಭುತ್ವದಲ್ಲಿ ಪಕ್ಷಗಳ ಅನಿವಾರ್ಯತೆಯನ್ನು ಅವರು ಒಪ್ಪಿಕೊಂಡಿದ್ದರು. ಇಂಗ್ಲೆಂಡಿನಲ್ಲಿ ಇರುವಂತೆ ಎರಡು ಪಕ್ಷ ಇರುವುದು ಒಳಿತು. ಒಂದು ಆಡಳಿತ ಪಕ್ಷ ಇನ್ನೊಂದು ಪ್ರತಿಪಕ್ಷ. ಆದರೆ ಆ ಪಕ್ಷಗಳಿಗೆ ಸದಾ ಕುರ್ಚಿಯ ಮೇಲೆಯೆ ಕಣ್ಣು. ಕುರ್ಚಿ ಏರುವುದು, ಏರಿದ ಮೇಲೆ ಬೇರು ಬಿಡುವುದು, ಅಥವಾ ಕುರ್ಚಿಯಲ್ಲಿ ಇರುವವರನ್ನು ಕೆಳಗಿಳಿಸಿ ತಾವು ಏರಲು ಹವಣಿಸುವುದು—ಇದೇ ಪೈಪೋಟಿ ಆಗಿ ಹೋಗುತ್ತದೆ. ರಾಷ್ಟ್ರ ಹಿತ, ಪ್ರಜಾಹಿತ ಹಿಂದಾಗಿ ಹೋಗುತ್ತದೆ. ಸಮಸ್ಯೆಗಳ ನಿಷ್ಪಕ್ಷಪಾತವಾದ ನ್ಯಾಯನಿಷ್ಠವಾದ ವಿಮರ್ಶೆ, ಪರಿಶೀಲನೆ ಅಸಾಧ್ಯ. ಪರಿ ಹಾರವೇನು? ಡಿವಿಜಿ ಹೇಳುತ್ತಾರೆ – ಈ ಎರಡು ಪಕ್ಷಗಳ ಜೊತೆಗೆ ಮೂರನೆ ಯದು ಒಂದು ಇರಬೇಕು. ಇಂಗ್ಲೆಂಡಿನ ಲಿಬರಲ್ ಪಕ್ಷದ ಹಾಗೆ. ಅಧಿಕಾರಕ್ಕೆ ಹಾತೊರೆಯದ, ಆದರೆ ಸಾರ್ವಜನಿಕ ವಿಷಯಗಳಲ್ಲಿ ಆಸಕ್ತರಾದ ಸಜ್ಜನರ ಒಂದು ತಂಡ. ಅವರ ಸಂಖ್ಯೆ ಸಣ್ಣದೇ ಇರಬಹುದು. ಅವರಿಗೆ ಅಧಿಕಾರ ಎಂದೆಂದಿಗೂ ಅಸಾಧ್ಯವೇ ಇರಬಹುದು. ಆದರೂ ಪಕ್ಷ ಪ್ರತಿಪಕ್ಷಗಳ ಸೆಣಸಾಟ ಗೊಂದಲಗಳ ನಡುವೆ, ಮೂಲ ಜನಹಿತ ವಿಷಯಗಳನ್ನು ಸಮಗ್ರವಾಗಿ, ಶಾಂತವಾಗಿ ಪರಿಶೀಲಿಸಿ, ಸ್ವಾರ್ಥ ಇಲ್ಲವೇ ಪಕ್ಷದೃಷ್ಟಿಯನ್ನು ಬಿಟ್ಟು, ರಾಷ್ಟ್ರ ಹಿತದೃಷ್ಟಿಯಿಂದ ವಿಚಾರ ವಿಮರ್ಶೆ ಮಾಡಿ, ಅಭಿಪ್ರಾಯ ವ್ಯಕ್ತಪಡಿಸುವ ಇಂಥ ಮೂರನೆಯ ತಂಡ ಅತ್ಯಗತ್ಯ. ಪ್ರಜಾಪ್ರಭುತ್ವ ದೊಂಬಿಯ ದರ್ಬಾರು ಆಗದಂತೆ ವಿವೇಕದ ದಾರಿ ತೋರಬೇಕು ಈ ಮೂರನೆಯ ಪಕ್ಷ. ದೊಂಬಿ ದಾಂಧಲೆಗಳಲ್ಲಿ ವಿಷಯ ಹಿಂದೆ ಬೀಳಬಹುದು, ಸದ್ದು ಹೆಚ್ಚಾಗಿ ವಿವೇಕ ಕೇಳಿಸದೆ ಹೋಗ

ಬಹುದು, ಧೂಳು ಕವಿದು ಬೆಳಕು ಮಸುಕಾಗಬಹುದು. ಅಂಥ ವೇಳೆ ವಿಷಯವನ್ನು ಎತ್ತಿ ಹಿಡಿಯಲು, ವಿವೇಕವನ್ನು ಸಾರಿ ಹೇಳಲು, ಬೆಳಕನ್ನು ತೋರಿಸಲು ಸಜ್ಞಾದ ಸಜ್ಜನರ ತಂಡವೊಂದು ಇರಲೇಬೇಕಾಗುತ್ತದೆ. ಇದು ಡಿವಿಜಿ ಅವರ ಪ್ರತಿಪಾದನೆ.

ಡಿವಿಜಿ ಸಾಹಿತಿ, ವಿದ್ವಾಂಸ ಎಂದು ಪ್ರಸಿದ್ಧರು. ಸಹಜವೇ. ಆದರೆ ಜೊತೆಜೊತೆಗೇ ಅವರು ಎಂಥ ಉನ್ನತ ರಾಜನೀತಿ ಚಿಂತಕರು, ರಾಷ್ಟ್ರ ಪ್ರೇಮಿಗಳು ಎನ್ನುವುದು ಗಮನಿಸಲೇಬೇಕಾದ ವಿಷಯ. ಕನ್ನಡದಲ್ಲಿನ ರಾಜನೀತಿಚಿಂತನದ ಅಧ್ವರ್ಯು ಎಂದರೆ ತಪ್ಪೂ ಇಲ್ಲ, ಹೆಚ್ಚೂ ಇಲ್ಲ.

# 8. ಸೇವೆಯ ಹಲವು ಹಾದಿಗಳು

"ಸಾರ್ವಜನಿಕ ಕಾರ್ಯಕ್ಕೆ ನನ್ನನ್ನು ಹಚ್ಚಿದವರು ವಾಜಪೇಯಂ ವೆಂಕಟಸುಬ್ಬಯ್ಯ ನವರು ಮತ್ತು ಎನ್. ನರಸಿಂಹಮೂರ್ತಿಗಳು" ಎಂದು ಹೇಳಿಕೊಂಡಿದ್ದಾರೆ ಡಿವಿಜಿ.

ಸಾರ್ವಜನಿಕ ಕಾರ್ಯ ಪ್ರಾಯಶಃ ಅವರಿಗೆ ಎಳೆತನದಿಂದಲೇ ಇದ್ದ ಪ್ರವೃತ್ತಿ. ಅವರು ಬೆಂಗಳೂರಿಗೆ ಬಂದೊಡನೆಯೆ ಅದು ಅರಳಿಕೊಂಡಿತು. ಪತ್ರಿಕೆಯ ಕೆಲಸ ರಾಜಕಾರಣದ ಕೆಲಸಗಳ ಸ್ವರೂಪದಿಂದಾಗಿ ಸಾರ್ವಜನಿಕ ಸಂಪರ್ಕಗಳು ಚೆನ್ನಾಗಿ ಬೆಳೆದವು. ಅಂದಿನ ಸಾರ್ವಜನಿಕ ಮುಂದಾಳುಗಳ ಪರಿಚಯ ಆಯಿತು. ಸಾಹಿತ್ಯ, ಸಂಗೀತ, ಸೇವೆ ಇತ್ಯಾದಿ ನಾನಾ ವಿಷಯಗಳಲ್ಲಿ ಆಸಕ್ತಿ ಬೆಳೆಯಿತು. ಸಂಬಂಧಪಟ್ಟ ಹಿರಿಯರ ಸ್ನೇಹ ಒದಗಿತು. ಸಹಜವಾಗಿಯೆ ಇವೆಲ್ಲವೂ ಅವರನ್ನು ಸಾರ್ವಜನಿಕ ಸೇವೆಯ ನಾನಾ ಕಾರ್ಯಗಳಲ್ಲಿ ತೊಡಗಿಸಿದವು.

ಎನ್. ನರಸಿಂಮೂರ್ತಿ, ವಾಜಪೇಯಂ ವೆಂಕಟಸುಬ್ಬಯ್ಯ, ಕೆ.ಪಿ. ಪುಟ್ಟಣ್ಣ ಶೆಟ್ಟಿ, ಎಸ್.ಜಿ. ಶಾಸ್ತ್ರಿ, ಎಂ.ಜಿ. ವರದಾಚಾರ್, ಟಿ.ಎಸ್ ವೆಂಕಣ್ಣಯ್ಯ, ಬೆಳ್ಳಾವೆ ವೆಂಕಟನಾರಾಯಣಪ್ಪ, ಮಾಸ್ತಿಯವರು, ಸರ್ ಮಿರ್ಜಾ ಇಸ್ಮಾಯಿಲ್, ಸರ್.ಎಂ. ವಿಶ್ವೇಶ್ವರಯ್ಯ, ಕೆ.ಎ. ಕೃಷ್ಣಸ್ವಾಮಿ ಅಯ್ಯರ್, ಬಳ್ಳಾರಿ ರಾಘವ, ಮೈಸೂರು ವಾಸುದೇವಾಚಾರ್, ಎಂ. ವೆಂಕಟಕೃಷ್ಣಯ್ಯ (ತಾತಯ್ಯ), ಕೆ.ಎಸ್. ಕೃಷ್ಣಯ್ಯರ್, ಪಿ. ಕೋದಂಡರಾವ್, ಕೆ. ರಾಮಚಂದ್ರರಾವ್, ಡಿ. ವೆಂಕಟರಾಮಯ್ಯ, ಎಸ್.ಜಿ. ನರಸಿಂಹಾಚಾರ್, ಆರ್. ನರಸಿಂಹಾಚಾರ್, ವಿ.ಎಸ್. ಶ್ರೀನಿವಾಸ ಶಾಸ್ತ್ರಿ ಮುಂತಾದವರೆಲ್ಲರ ಆಪ್ತ ಸ್ನೇಹ ಡಿವಿಜಿಯವರಿಗೆ ದೊರೆತದ್ದು ವಿಶೇಷ. ಕಾರಣ ಆ ಒಬ್ಬೊಬ್ಬರೂ ಒಂದೊಂದು ಬಗೆಯಲ್ಲಿ ಮಹಿಮಾನ್ವಿತರು. ಸಾಹಿತ್ಯ ಇರ ಬಹುದು, ರಾಜಕಾರಣ, ಪತ್ರಿಕೋದ್ಯಮ ಇರಬಹುದು, ಸೇವಾ ಸಂಘಟನೆ ಇರಬಹುದು, ರಾಷ್ಟ್ರೀಯ ಭಾವನೆಯ ಕ್ಷೇತ್ರ ಇರಬಹುದು–ಡಿವಿಜಿಯವರಿಗೆ ಎಲ್ಲದರಲ್ಲೂ ಸಲೀಸು, ಎಲ್ಲರಲ್ಲೂ ಸಲಿಗೆ.

ಬದುಕಿಗೆ ಈ ಯಾವ ವಿಚಾರವೂ ಹೊರತಲ್ಲ. ಎಲ್ಲವೂ ಬೇಕು. ಈ ಭಾವನೆ ಅವರನ್ನು ಅನೇಕ ಸಾರ್ವಜನಿಕ ಕ್ಷೇತ್ರಗಳಿಗೆ ಕೊಂಡೊಯ್ದಿತು. ಎಲ್ಲೆಲ್ಲಿ ನೋಡಿದರೂ ಡಿವಿಜಿಯೆ ಕಾಣಿಸುತ್ತಿ ದ್ದರು.

ಗೆಳೆಯರ ಬಳಗವೊಂದು ಆಗಾಗ ಸೇರಿ ಚರ್ಚೆ–ಅಧ್ಯಯನ ನಡೆಸುವ ಪರಿಪಾಠ ಇತ್ತು. ವಿಶ್ವೇಶ್ವರಯ್ಯನವರಾದಿಯಾಗಿ ಅದಕ್ಕೆ ಬರುತ್ತಿದ್ದರು. ಒಮ್ಮೆ ಡಿವಿಜಿ ಹುಷಾರಿಲ್ಲದೆ ಬಂದಿರಲಿಲ್ಲ. ಅದು ವಿಶ್ವೇಶ್ವರಯ್ಯನವರ ಗಮನ ಸೆಳೆಯಿತು. ಮರುದಿನವೇ ಅವರು ಡಿವಿಜಿ ಮನೆಗೆ ಹೋದರು. ವಿಚಾರಿಸಿದರು. "You do not have time to fall ill" ಎಂದರು! (ಕಾಯಿಲೆ ಬೀಳಲು ನಿನಗೆ ಪುರುಸೊತ್ತಿಲ್ಲ).

ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್ (ಎ.ಡಿ.ಎ.) ಸಂಪರ್ಕ ಬೆಳೆಯಿತು. ಅದರಿಂದಾಗಿ ಬಳ್ಳಾರಿ ರಾಘವರ ಪರಿಚಯ. ಆಂಧ್ರದ ಕೋಲಾಚಲಂ ನಾಟಕ ಕಂಪನಿಯ ಭೇಟಿ. ಎ.ಡಿ.ಎ. ನಾಟಕಗಳನ್ನು ಮಾತ್ರ ಆಡಲಿಲ್ಲ. ಇತರ ಸೇವಾಕಾರ್ಯವನ್ನೂ ಹಮ್ಮಿಕೊಂಡಿತು. ಲಲಿತಕಲಾ ಉತ್ಸವ, ಕನ್ನಡ ಪುಸ್ತಕ ಪ್ರಕಟಣೆಗಳು (ಕೈಲಾಸಂ 'ಟೊಳ್ಳುಗಟ್ಟಿ), ಸಂಗೀತ ಕಚೇರಿಗಳು, ಕವಿಜಯಂತಿಗಳು ಇತ್ಯಾದಿ. ಗುರುದೇವ ಠಾಕೂರರು, ಕವಿಕೋಗಿಲೆ ಸರೋಜಿನಿದೇವಿ, ಕಟ್ಟಮಂಚಿ ರಾಮಲಿಂಗರೆಡ್ಡಿ ಮೊದಲಾದ ಅಖಿಲ ಭಾರತ ಖ್ಯಾತಿಯ ಹಿರಿಯರನ್ನು ಕರೆಸಿದ್ದುಂಟು. 1917–18ರಲ್ಲಿ ಇನ್‌ಫ್ಲೂಯೆಂಜಾ ಕಾಯಿಲೆ ಆವರಿಸಿದಾಗ ಇದೇ ಗೆಳೆಯರ ಗುಂಪು ಮಾಡಿದ ಸೇವಾಕಾರ್ಯ ಉಲ್ಲೇಖನೀಯ. ಎ.ಡಿ.ಎ. ಕೆಲವು ಜನ, ಜೊತೆಗೆ ಡಾ|| ಗುಂಡಣ್ಣ, ಡಾ|| ಸುಬ್ಬರಾವ್, ಕೆ.ಎಸ್. ಕೃಷ್ಣಯ್ಯರ್, ಎಚ್.ವಿ.ಆರ್. ಅಯ್ಯಂಗಾರ್, ಬಿ.ಕೆ. ರಾಮಪ್ರಸಾದ್ ಮೊದಲಾದ ಗೆಳೆಯರೆಲ್ಲ ಕೂಡಿ ರೋಗಿಷ್ಟರ ಉಪಚಾರಕ್ಕೆ ಹೊರಟರು. ಥೈಮಾಲ್ ಔಷಧಿಯ ಸೀಸೆಗಳನ್ನು, ಬಕೆಟ್, ಪೊರಕೆಗಳನ್ನು, ರವೆಗಂಜಿ ಸೀಸೆಗಳನ್ನು ಹೊತ್ತುಕೊಂಡ ಈ ತಂಡ ಬೆಂಗಳೂರಿನ ಬಳೇಪೇಟೆ, ಚಿಕ್ಕಪೇಟೆ, ರಾಣಾಸಿಂಗ್ ಪೇಟೆ ಮುಂತಾದ ಪ್ರದೇಶಗಳ ಗಲ್ಲಿ ಗಲ್ಲಿ ತಿರುಗಿತು. ಮನೆಮನೆಗೂ ಹೋಗುವುದು, ಯೋಗಕ್ಷೇಮ ವಿಚಾರಿಸುವುದು, ಸಮಾಧಾನ ಹೇಳುವುದು, ಉಪಚಾರ ಮಾಡುವುದು, ಕೊಳೆ ಆಗಿದ್ದರೆ ಶುಚಿ ಮಾಡುವುದು, ಔಷಧಿ ಗಂಜಿ ಕೊಡುವುದು, ಅಗತ್ಯ ಇದ್ದರೆ ವೈದ್ಯರನ್ನು ಕರೆತರುವುದು–ಮುಂತಾದ ಕೆಲಸಗಳನ್ನು ಮಾಡಿತು. ಯಾವ ಪ್ರತಿಫಲದ ಆಸೆಯೂ ಇಲ್ಲ. ಹೆಸರಿನ ಆಸೆಯೂ ಇಲ್ಲ.

ಮೈಸೂರಿನಲ್ಲಿ ತಾತಯ್ಯ ಅಂದಿನ ಸಾರ್ವಜನಿಕ ಮುಂದಾಳುಗಳಲ್ಲಿ ಹಿರಿಯರು, ಪ್ರಮುಖರು, ಅವರ ಬಗ್ಗೆ ಡಿವಿಜಿಗೆ ಅಪಾರ ಗೌರವ.

'ಪಂಕ್ತಿ ಪಾವನರು' ಎಂದು ಅವರನ್ನು ಭಾವಿಸಿದ್ದರು. ಜನರ ಉನ್ನತಿಗಾಗಿ, ಹಿತಾಸಕ್ತಿ, ಹಕ್ಕು–ಬಾಧ್ಯತೆಗಳ ರಕ್ಷಣೆಗಾಗಿ ಏನಾದರೂ ಸ್ಥಾಯಿೀ ಸಂಘಟನೆ ಆಗಬೇಕು ಎಂದು ಇಬ್ಬರೂ ವಿಚಾರ ಮಾಡಿದ್ದರು. ಅದಕ್ಕಾಗಿ ಇಬ್ಬರೂ ನಾನಾ ರೀತಿಯಲ್ಲಿ ಶ್ರಮಿಸಿದರು. ಕೊನೆಗೆ ಗೋಖಲೆ ಸಾರ್ವಜನಿಕ ಸಂಸ್ಥೆ ಡಿವಿಜಿಯವರ ಆ ಕಲ್ಪನೆಗೆ ಸಾಕಾರರೂಪ ಕೊಟ್ಟಿತು.

ಈ ವಿಚಾರದ ಗುಂಗೇ ಮೈಸೂರಿನಲ್ಲಿ 'ಮೈಸೂರು ಸಾರ್ವಜನಿಕ ಸಭೆ' ಯನ್ನು ಹುಟ್ಟು ಹಾಕಿತು. 1909ರಲ್ಲಿ. ಪ್ರಜಾಪ್ರತಿನಿಧಿ ಸಭೆಗೆ ಬರುತ್ತಿದ್ದ ಸದಸ್ಯರು ಆಗಾಗ ಸೇರಿ ವಿಚಾರ ಮಾಡಲು ವ್ಯವಸ್ಥೆ. ಎರಡು–ಮೂರು ವರ್ಷ ನಡೆಯಿತು ಇದು.

ಹೀಗೆಯೆ, ಶ್ರೀ ರಾಮಕೃಷ್ಣ ಸೇವಾ ಸಂಘ, ಪಾಪ್ಯುಲರ್ ಎಜ್ಯುಕೇಷನ್ ಲೀಗ್, ಬೆಂಗಳೂರು ಸ್ಟಡಿ ಕ್ಲಬ್, ಬುಕ್ ಕ್ಲಬ್, ರಾನಡೆ ಸೊಸೈಟಿ, ಹಿಂದೂ ಕಾಫಿ ಕ್ಲಬ್, ಇಂಡಿಪೆಂಡೆಂಟ್ ಬೋರ್ಡ್, ಸೋಷಿಯಲ್ ಸರ್ವಿಸ್ ಲೀಗ್, ಬೆಂಗಳೂರು ಸಿಟಿಜನ್ಸ್ ಕ್ಲಬ್ (ಬಿ.ಸಿ.ಸಿ.), ದೇಶಾಭ್ಯುದಯ ಸಂಘ— ಒಂದಲ್ಲ, ಎರಡಲ್ಲ ಹತ್ತಾರು ಸಂಘ ಸಂಸ್ಥೆಗಳು. ಒಂದು ಕಣ್ಣುಮುಚ್ಚಿಕೊಂಡರೆ ಇನ್ನೊಂದರ ಆರಂಭ. ಗೆಳೆಯರು ಸೇರುವುದು, ಸಾರ್ವಜನಿಕ ವಿಚಾರಗಳನ್ನು ಚರ್ಚಿಸುವುದು, ಸಾಹಿತ್ಯ ಅವಲೋಕನ, ಗ್ರಂಥಾಭ್ಯಾಸ ಇತ್ಯಾದಿ. ಕೆಲವೊಮ್ಮೆ ಸಾಹಿತಿಗಳಿಗೆ ವಿದ್ಯಾರ್ಥಿಗಳಿಗೆ ನೆರವು ನೀಡಲು ಯತ್ನಿಸುವುದು. Non-entities (ಅನಾಮಧೇಯರು) ಇಂಥ ಒಂದು ಗುಂಪು. ವಿದೇಶಕ್ಕೆ ಓದಲು ಹೋಗುವ ತರುಣರಿಗೆ ಸಹಾಯ ಮಾಡುವುದು ಅದರ ಉದ್ದೇಶ. ಶ್ರೀ ರಾಮಕೃಷ್ಣ ಸೇವಾ ಸಂಘ ಹಾಗೂ ಪಾಪ್ಯುಲರ್ ಎಜ್ಯುಕೇಷನ್ ಲೀಗ್ ಪರವಾಗಿ ಉಪನ್ಯಾಸ, ಕಾವ್ಯ ವಾಚನಗಳು ಮಾತ್ರವಲ್ಲದೆ, ಆಸ್ಪತ್ರೆಗಳಿಗೆ ಭೇಟಿ, ರೋಗಿಗಳಿಗೆ ದೀಪಾವಳಿ ಸಿಹಿ ಹಂಚಿಕೆ, ಬಟ್ಟೆ ವಿತರಣೆ, ರೈಲು ಗೂಡ್ಸ್ ಷೆಡ್ ಬಳಿಯ ಕೂಲಿಗಳ ವಠಾರಗಳಲ್ಲಿ ರಾತ್ರಿ ಶಾಲೆಗಳನ್ನು ನಡೆಸುವುದು ಮುಂತಾದ ಕೆಲಸಗಳೂ ನಡೆದದ್ದು ಉಂಟು. ಕೆ.ಎಸ್. ಕೃಷ್ಣಯ್ಯರ್ ಅವರ ಮನೆ ಹಾಗೂ ಐರಿಷ್ ಪ್ರೆಸ್, ಉತ್ಸಾಹಿ ತರುಣರು ಸೇರಲು ಪ್ರಶಸ್ತವಾದ ಸ್ಥಳ.

1906ರಲ್ಲಿ ಸ್ವಾಮಿ ಅಭೇದಾನಂದರು ಬೆಂಗಳೂರಿಗೆ ಬಂದರು. ಅವರ ಸ್ವಾಗತಕ್ಕಾಗಿ ಡಿವಿಜಿಯವರ ಸಡಗರವೇ ಸಡಗರ. ಡಿವಿಜಿ ಬರೆದ ಇಂಗ್ಲಿಷ್ ಸ್ವಾಗತ ಪದ್ಯ ಅವರನ್ನು ಕೆ. ರಾಮಚಂದ್ರರಾವ್, ಕೆ.ಎ. ಕೃಷ್ಣಸ್ವಾಮಿಅಯ್ಯರ್,

ಎಂ.ಜಿ. ವರದಾಚಾರ್ ಮೊದಲಾದ ವಿದ್ವಾಂಸರುಗಳ ಬಳಿಗೆ ಕೊಂಡೊಯ್ದಿತು. ಪರಿಣಾಮ ಡಿವಿಜಿ ಅವರಿಗೆ ದೊರೆತ ಮನಃ ಪರಿಪಾಕ, ಜ್ಞಾನ ವಿಸ್ತರಣೆ.

1912–13ರ ಸುಮಾರು. ಗಾಂಧೀಜಿಯವರ ದಕ್ಷಿಣ ಆಫ್ರಿಕಾ ಸತ್ಯಾಗ್ರಹ ನಡೆದಿತ್ತು. ಮಾನವನ ಘನತೆಯ ಉಳಿವಿಗಾಗಿ ಹೋರಾಟ. ಅಹಿಂಸಾತ್ಮಕ ಹೋರಾಟ. ಜಗತ್ತು ಈವರೆಗೆ ಕಂಡರಿಯದ ಹೊಸಪರಿಯ ಹೋರಾಟ. ಅದಕ್ಕೆ ಭಾರತೀಯರು ಬೆಂಬಲವನ್ನೂ ಹಣಸಹಾಯವನ್ನೂ ಒದಗಿಸಬೇಕು ಎಂದು ಗೋಪಾಲಕೃಷ್ಣ ಗೋಖಲೆ ಕರೆ ನೀಡಿದ್ದರು. ಗೋಖಲೆಯವರ ಪ್ರಭಾವಕ್ಕೆ ಒಳಗಾಗಿದ್ದ ಗುಂಡಪ್ಪನವರಿಗೆ ಇದು ಆದೇಶವೇ. ಧನಸಂಗ್ರಹಣೆಗಾಗಿ ಓಡಾಡಿದರು. ಮುಂದೆ 1915ರಲ್ಲಿ ಗಾಂಧೀಜಿ ಮದರಾಸಿಗೆ ಬಂದಾಗ, ಅವರನ್ನು ಬೆಂಗಳೂರಿಗೂ ಕರೆತರುವ ಯತ್ನ ನಡೆಯಿತು. ಗಾಂಧೀಜಿ ಬೆಂಗಳೂರಿಗೆ ಬಂದರು. ಅವರ ವಾಸ್ತವ್ಯಕ್ಕಾಗಿ ಸ್ವಯಂ ಸೇವಕರು ಎಲ್ಲ ಏರ್ಪಾಟನ್ನೂ ಮಾಡಿದ್ದರು. ಸರ್ಕಾರದ ನೆರವೂ ಇತ್ತು. ವಿಶ್ವೇಶ್ವರಯ್ಯನವರೇ ದಿವಾನರು. ಗಾಂಧೀಜಿ ಬಗ್ಗೆ ಗೌರವ ಅವರಿಗೆ. ಆಗ ಆ ಪ್ರವಾಸ ವ್ಯವಸ್ಥೆಯಲ್ಲಿ ಡಿವಿಜಿಯವರದು ಚುರುಕಿನ ಪಾತ್ರ. ಆಗಲೇ ಗಾಂಧೀಜಿ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಿದ್ದು. (8–5–1915) ಇದನ್ನು ಆಗಲೇ ನೋಡಿದ್ದೇವೆ. ಮೂರು ತಿಂಗಳ ಹಿಂದೆ ತಾನೇ ಗೋಖಲೆ ತೀರಿಕೊಂಡಿದ್ದರು. ಆಗ ನಡೆದ ಸಂತಾಪ ಸೂಚಕ ಸಭೆಗೆ ವಿಶ್ವೇಶ್ವರಯ್ಯನವರೇ ಅಧ್ಯಕ್ಷರು. ಆ ಸಂದರ್ಭವೇ ಮೈಸೂರು ಸೋಷಿಯಲ್ ಸರ್ವಿಸ್ ಲೀಗ್ ಎಂಬ ಸಂಸ್ಥೆಗೆ ಜನ್ಮ ಕೊಟ್ಟಿತ್ತು. ಗಾಂಧೀಜಿಯವರನ್ನು ಕರೆಸಿಕೊಂಡದ್ದು ಅದೇ ಸಂಸ್ಥೆ. ಅದು ಬಹುಕಾಲ ಉಳಿಯಲಿಲ್ಲ. ಸಾರ್ವಜನಿಕ ಕೆಲಸಕ್ಕಾಗಿ ಇಂಥ ಹಲವು ಸಂಸ್ಥೆಗಳಲ್ಲಿ ಡಿವಿಜಿ ಪಾಲುಗೊಂಡರು. ಅನೇಕ ಬಿಡಿಬಿಡಿ ಪ್ರಯತ್ನಗಳು. ಕೊನೆಗೆ ಸ್ಥಿರವಾಗಿ ಸ್ಪಷ್ಟವಾಗಿ ಸುಭದ್ರವಾಗಿ ನೆಲೆಗೊಂಡದ್ದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ.

ವಿಶ್ವೇಶ್ವರಯ್ಯನವರ ಕಾಲದಲ್ಲೆ ಮೈಸೂರಿನಲ್ಲಿ ಅವರಿಗೆ ವಿರೋಧವಾಗಿ ಕೋಮು ರಾಜಕೀಯ ತಲೆಯೆತ್ತಿತು. 'ಪ್ರಜಾ ಮಿತ್ರ ಮಂಡಲಿ' ಎಂಬ ಹೆಸರಿನಲ್ಲಿ ಆ ವಿರೋಧ ವ್ಯಕ್ತಗೊಂಡಿತು. ಅದನ್ನು ಖಂಡಿಸಬೇಕು, ಸಾರ್ವಜನಿಕ ವಿಷಯಗಳನ್ನು, ಹಿತಾಸಕ್ತಿಗಳನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿ ಸಮತೂಕದ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕು– ಈ ಉದ್ದೇಶದಿಂದ 1919ರಲ್ಲಿ ಮೈಸೂರಿನಲ್ಲಿ ಒಂದು ಸಮ್ಮೇಳನ ಏರ್ಪಟ್ಟಿತು. ಮೈಸೂರು ಪ್ರಜಾಜನ ಮಹಾಸಭೆ (People's Convention). ಅದಕ್ಕೆ ತಾತಯ್ಯನವರ ಆಶ್ರಯ. ಡಿವಿಜಿಯವರ ಸಕ್ರಿಯ

ಪಾತ್ರ. ರಾಜ್ಯದಲ್ಲಿ ಪ್ರಜೆಗಳಿಗೆ ಹೆಚ್ಚಿನ ಸ್ವಾತಂತ್ರ್ಯ ಕೊಡಬೇಕು, ಆಡಳಿತದಲ್ಲಿ ಪ್ರಜಾಪ್ರಾತಿನಿಧ್ಯ ಇರಬೇಕು. ಭಾರತ ರಾಜ್ಯಾಂಗ ವ್ಯವಸ್ಥೆಯಲ್ಲಿ ಸಂಸ್ಥಾನಗಳಿಗೆ ಸೂಕ್ತ ಸ್ಥಾನ ಇರಬೇಕು ಎಂದು ನಿರ್ಣಯವಾಯಿತು. ಮಾಂಟೆಗೊ ಚೆಲ್ಮ್ಸ್‌ಫರ್ಡ್ ಸುಧಾರಣೆ ಆಗ ತಾನೇ ಬಂದಿತ್ತು. ಅದರ ಅಧ್ಯಯನವೂ ನಡೆಯಿತು.

ಆಗ ದೇಶದಲ್ಲೆಲ್ಲಾ ರಾಷ್ಟ್ರೀಯತೆ ಉಕ್ಕಿ ಹರಿದಿತ್ತು. 'ಸ್ವರಾಜ್ಯ–ಸ್ವದೇಶಿ' ಮಂತ್ರಗಳೇ ಎಲ್ಲರ ಬಾಯಲ್ಲೂ. ಬೆಂಗಳೂರಿಗೂ ಅದರ ಬಿಸಿ ತಾಗದೆ ಇರಲಿಲ್ಲ. ರಾಷ್ಟ್ರೀಯ ನಾಯಕರ ಜನ್ಮದಿನಗಳನ್ನು ಆಚರಿಸುವುದು ಆಗಿನ ಒಂದು ಪ್ರಮುಖ ಕಾರ್ಯಕ್ರಮ. ದಾದಾಭಾಯಿ ನವರೋಜಿ, ಮಹದೇವ ಗೋವಿಂದ ರಾನಡೆ, ಗೋಖಲೆ ಇತ್ಯಾದಿ ನಾಯಕರ ದಿನಾಚರಣೆಗಳಲ್ಲಿ ಡಿವಿಜಿಯವರದೇ ಮುಂದಾಳುತನ. ಆಯಾ ನಾಯಕರ ಭಾವಚಿತ್ರ ಸಮೇತ ಮೆರವಣಿಗೆ, ಕೊನೆಯಲ್ಲಿ ಸಭೆ, ಉಪನ್ಯಾಸ ಇತ್ಯಾದಿ. ಆಯಾ ನಾಯಕರ ಜೀವನ ಪರಿಚಯದ ಪುಸ್ತಿಕೆಗಳನ್ನು ಬರೆದು ಪ್ರಕಟಿಸುವುದು.

ವಿಶ್ವೇಶ್ವರಯ್ಯನವರು ಮೈಸೂರು ಅರ್ಥಸಾಧಕ ಪರಿಷತ್ತು ಒಂದನ್ನು ಏರ್ಪಡಿಸಿದ್ದನ್ನು ಈ ಹಿಂದೆಯೇ ಪ್ರಸ್ತಾಪಿಸಲಾಗಿದೆ. ಅದರ ಶೈಕ್ಷಣಿಕ–ಸಾಹಿತ್ಯಕ ಸಮಿತಿಗಳಲ್ಲಿ ಡಿವಿಜಿ ಕೆಲಸ ಮಾಡಿದರು. ಪತ್ರಿಕೆಯನ್ನು ನಡೆಸಿದ್ದನ್ನು ಆಗಲೇ ನೋಡಿದ್ದೇವೆ. ಆ ಪರಿಷತ್ತಿನ ಒಂದು ಫಲಶ್ರುತಿಯೆ ಕನ್ನಡ ಸಾಹಿತ್ಯ ಪರಿಷತ್ತಿನ ಆರಂಭ.

ವಿಶ್ವೇಶ್ವರಯ್ಯನವರ ಆಪ್ತರಲ್ಲಿ ಡಿವಿಜಿ ಒಬ್ಬರು. ಅವರ ಅನೇಕ ಚಿಂತನೆಗಳನ್ನು ಕಾರ್ಯಕ್ರಮಗಳನ್ನು ಡಿವಿಜಿ ಹತ್ತಿರದಿಂದ ಕಂಡಿದ್ದರು. ಡಿವಿಜಿ ಅವರ ಜ್ಞಾನ, ಸಾಮರ್ಥ್ಯಗಳನ್ನು ಆಡಳಿತಕ್ಕೆ ಸದುಪಯೋಗ ಮಾಡಿಕೊಳ್ಳಲು ದಿವಾನರಿಗೆ ತುಂಬ ಆಕಾಂಕ್ಷೆ. ಆದರೆ ಡಿವಿಜಿ ಯಾವ ಬಂಧನಕ್ಕೂ ಒಳಗಾಗದ ಸ್ವಭಾವದವರು. ಆಡಳಿತ ವ್ಯವಸ್ಥೆಯಲ್ಲಿ ತೊಡಗಿಕೊಳ್ಳಲಿಲ್ಲ. ಹೊರಗೇ ನಿಂತು ತಮಗೆ ಸರಿಕಂಡದ್ದನ್ನು ಬೆಂಬಲಿಸಿದರು. ತಪ್ಪು ಎನಿಸಿದ್ದನ್ನು ನಿರ್ದಾಕ್ಷಿಣ್ಯವಾಗಿ ಆದರೆ ನಯವಾಗಿ ವಿರೋಧಿಸಿದರು. ಡಿವಿಜಿ ಅವರ ಸಾಂಸಾರಿಕ ಪರಿಸ್ಥಿತಿ ಮುಗ್ಗಟ್ಟಿನಲ್ಲೇ ಇತ್ತು. ಎಂದೂ ಅವರು ಸಿರಿವಂತಿಕೆ ಇರಲಿ, ಆರ್ಥಿಕವಾಗಿ ನಿಶ್ಚಿಂತೆಯನ್ನು ಕಾಣಲಿಲ್ಲ. ಅಹನ್ಯಹನಿ ಕಾಲಕ್ಷೇಪವೇ ಉದ್ದಕ್ಕೂ. ಇವರ ಸ್ಥಿತಿಗೆ ಮರುಗಿ ನೆರವು ನೀಡಲು ಹಲವರು ಯತ್ನಿಸಿದರು. ವಿಶ್ವೇಶ್ವರಯ್ಯನವರೂ ಹಲವು ಅವಕಾಶಗಳನ್ನು ಕೊಡಮಾಡಿದರು. ಡಿವಿಜಿ ಒಪ್ಪಲಿಲ್ಲ.

ಮುಂದೆ ಸರ್ ಮಿರ್ಜಾ ದಿವಾನಗಿರಿಯಲ್ಲೂ ಹೀಗೆಯೆ ಆಯಿತು. ಮಿರ್ಜಾ ಸಾಹೇಬರಿಗೂ ಡಿವಿಜಿ ಬಗ್ಗೆ ಅಪಾರ ವಿಶ್ವಾಸ, ಗೌರವ. ಇವರಿಗಾಗಿ ಏನು ಸಹಾಯ ಮಾಡಲೂ ಸಿದ್ಧ. ಡಿವಿಜಿ ತಮ್ಮಂದಿರೊಂದಿಗೆ ಆರಂಭಿಸಿದ್ದ ಕರ್ನಾಟಕ ಪ್ರಕಟನಾಲಯಕ್ಕೆ ಸೇರಿದಂತೆ ಅಚ್ಚುಕೂಟವನ್ನು ನಡೆಸಬೇಕೆಂದಿದ್ದರು. ಅದಕ್ಕಾಗಿ ಆಗತಾನೇ ರೂಪುಗೊಳ್ಳುತ್ತಿದ್ದ 'ಸಿಲ್ವರ್ ಜ್ಯೂಬಿಲಿ ಪಾರ್ಕ್' ರಸ್ತೆಯಲ್ಲಿ, ಡಿವಿಜಿಗೆ ಯಾವ ನಿವೇಶನ, ಎಷ್ಟು ವಿಸ್ತೀರ್ಣದ್ದು ಬೇಕೊ, ತೋರಿಸಿ ಕೊಡಿ ಎಂದು ಮಿರ್ಜಾ ನಗರಸಭೆಯ ಅಧಿಕಾರಿಗಳಿಗೆ ಸೂಚನೆ ನೀಡಿದರು. ಅಧಿಕಾರಿಗಳು ಡಿವಿಜಿ ಯವರನ್ನು ಸ್ಥಳ ಆರಿಸಲು ಕರೆದೊಯ್ದರು. ಡಿವಿಜಿ ಯಾವ ಸ್ಥಳವನ್ನೂ ಆರಿಸಲಿಲ್ಲ. "ನನಗೇಕೆ ? ಬೇಡ" ಎಂದುಬಿಟ್ಟರು. ದಿವಾನರಿಂದ ಮತ್ತೆ ಮತ್ತೆ ಬಂದ ಒತ್ತಾಯಕ್ಕೂ ಮಣಿಯಲಿಲ್ಲ. ಈಗ ಆ ರಸ್ತೆಯ ಪ್ರದೇಶ ನಗರದ ಹೃದಯವಾಗಿದೆ. ಲಕ್ಷಗಟ್ಟಲೆ ಬೆಲೆ ಬಾಳುವುದಾಗಿದೆ.

ವಿಶ್ವೇಶ್ವರಯ್ಯನವರಾಗಲಿ, ಮಿರ್ಜಾ ಆಗಲಿ ಆಗಾಗ್ಗೆ ಡಿವಿಜಿಯಿಂದ ಬರೆಹದ ನೆರವು ಪಡೆಯುತ್ತಿದ್ದರು. ಭಾಷಣಗಳ ಸಿದ್ಧತೆ, ಲೇಖನಗಳ ತಿದ್ದುಪಡಿ ಇತ್ಯಾದಿ. ಮಾಡಿಸಿಕೊಂಡ ಕೆಲಸಕ್ಕೆ ಪ್ರತಿಫಲ ನೀಡಲು ದಿವಾನರುಗಳಿಗೆ ಕಾತರ. ಡಿವಿಜಿಗೆ ಅದು ಬೇಡ. ತಮ್ಮದು ವಿಶ್ವಾಸದ ಸೇವೆ ಎಂದು ಹಟ. ಎಷ್ಟೋ ಸಲ ದಿವಾನರುಗಳಿಂದ ಬಂದ ಹಣವನ್ನು ವಾಪಸು ಕಳಿಸಿದ್ದು ಉಂಟು. ಮನ ನೋಯಬಹುದು ಇದರಿಂದ, ಎಂದು ತಿಳಿದು ಆಮೇಲಾಮೇಲೆ ಇಂಥ ಚೆಕ್ಕುಗಳನ್ನು ಮುರಿಸದೆಯೆ ಇಟ್ಟುಬಿಡುತ್ತಿದ್ದರು.

ಬೆಂಗಳೂರಿನಲ್ಲಿ ಒಂದು ಮೋಟಾರು ಕಾರ್ಖಾನೆ ಆರಂಭಿಸಬೇಕು ಎನ್ನುವುದು ವಿಶ್ವೇಶ್ವರಯ್ಯನವರ ಒಂದು ಕನಸು. ಅದಕ್ಕಾಗಿ ಯೋಜನೆ ತಯಾರಿಸಲು ಒಂದು ಅನಧಿಕೃತ ಸಮಿತಿ ಏರ್ಪಟ್ಟಿತ್ತು. ವಿಶ್ವೇಶ್ವರಯ್ಯ, ವಾಲ್‌ಚಂದ್ ಹಿರಾಚಂದ್ ಹಾಗೂ ಡಿವಿಜಿ ಸಮಿತಿಯಲ್ಲಿದ್ದರು. ಯೋಜನೆಯೇನೋ ತಯಾರಾಯಿತು. ಆದರೆ ಆಗಿನ ಪರಿಸ್ಥಿತಿಯಲ್ಲಿ, ವಿದೇಶೀ ಸರ್ಕಾರದ ವಿರೋಧದಲ್ಲಿ ಅದು ಕೈಗೂಡಲಿಲ್ಲ. ಅದೇ ಹಿರಾಚಂದರು ಮುಂದೆ ಹಿಂದುಸ್ತಾನ್ ವಿಮಾನ ಕಾರ್ಖಾನೆಯನ್ನು ಸ್ಥಾಪಿಸಿದರು.

1914–15 ವಿಶ್ವಯುದ್ಧದ ಕಾಲ. ಹಣಕ್ಕಾಗಿ ಸರ್ಕಾರ ಸಾಲ ಎತ್ತುತ್ತಿತ್ತು. 'War Loan Bond' ಎಂಬ ಹುಂಡಿಗಳನ್ನು ಮಾರಾಟ ಮಾಡುತ್ತಿತ್ತು. ಅದಕ್ಕೆ ಹಣ ಕೂಡಿಸಲು ಡಿವಿಜಿಯವರೂ ಸ್ವಲ್ಪಕಾಲ ದುಡಿದರು.

ಎಸ್.ಎಸ್.ಎಲ್.ಸಿ.ಯಲ್ಲಿ ಕನ್ನಡದಲ್ಲಿ ಉತ್ತೀರ್ಣರಾಗದ ಡಿವಿಜಿಗೆ ಇಂಗ್ಲಿಷ್–ಕನ್ನಡ ನಿಘಂಟು ತಯಾರಿಸಬೇಕೆಂಬ ಉಚ್ಚು. ಆ ಕಾಲದಲ್ಲಿ ಕಿಟ್ಟೆಲ್ ನಿಘಂಟು (ಕನ್ನಡ–ಇಂಗ್ಲಿಷ್) ಬಿಟ್ಟರೆ ಬೇರೆ ಒಳ್ಳೆಯ ನಿಘಂಟು ಇರಲಿಲ್ಲ. ಪತ್ರಿಕಾಕಾರ್ಯದಲ್ಲಿ ತೊಡಗಿದ್ದ ಗುಂಡಪ್ಪನವರಿಗೆ ಇಂಗ್ಲಿಷ್–ಕನ್ನಡ ನಿಘಂಟಿನ ಅಗತ್ಯ ತೋರಿಬಂದದ್ದು ಸಹಜ. ಆ ಕೊರತೆಯನ್ನು ನೀಗಿಸಲು ತಾವೇ ಮುಂದಾದರು. 'ಮೈಸೂರು ಸ್ಟಾಂಡರ್ಡ್' ಪತ್ರಿಕೆಯ ಶ್ರೀನಿವಾಸಯ್ಯಂಗಾರ್ಯರು ಜೊತೆಗೆ ಸೇರಿದರು. ನೂರಾರು ಪುಟ ಶಬ್ದಸಂಗ್ರಹ ಏನೊ ಆಯಿತು. ನಿಘಂಟನ್ನು ಅಚ್ಚುಮಾಡಲು ವಿಶೇಷ ರೀತಿಯ ಅಚ್ಚಿನ ಮೊಳೆ ಅಗತ್ಯ. ಅದನ್ನು ಮಾಡಿಸಲೆಂದು ಮದರಾಸಿಗೆ ಓಡಾಡಿದರು. ನಡುವೆ ಇನ್ನೇನೊ ಕೆಲಸ ಬಂತು. ನಿಘಂಟು ಅಲ್ಲಿಗೇ ನಿಂತಿತು. ಆದರೆ ಆ ವಿಚಾರ ನಿಲ್ಲಲಿಲ್ಲ. ಮುಂದೆ ಮೈಸೂರು ವಿಶ್ವವಿದ್ಯಾನಿಲಯ ಆ ಯೋಚನೆಯನ್ನು ಕೈಗೆತ್ತಿಕೊಂಡು ನಿರ್ವಹಿಸಿತು. ಅದರಲ್ಲೂ ಡಿವಿಜಿಯ ಪಾತ್ರ ಇತ್ತು.

ಪತ್ರಿಕೆಯ ವರದಿಗಾರನಾಗಿ ಡಿವಿಜಿ ಮೈಸೂರಿನ ಪ್ರಜಾಪ್ರತಿನಿಧಿ ಸಭೆಗೆ ಹೋಗಬೇಕಾಗುತ್ತಿತ್ತು. ಅಲ್ಲಿನ ಕಲಾಪಗಳನ್ನು ವೀಕ್ಷಿಸುವ, ವರದಿ ಮಾಡುವ ಕೆಲಸ. ಇದರಿಂದ ರಾಜಕೀಯದ ಒಳ–ಹೊರಗುಗಳ ಪರಿಚಯ ಆಗುತ್ತಿತ್ತು. ನಾಯಕರುಗಳ ಪರಿಚಯವೂ ಆಗುತ್ತಿತ್ತು.

ಮೈಸೂರಿನ ಸ್ಥಿತಿಗತಿ, ಸಂಪತ್ತು, ಆಡಳಿತ ಇತ್ಯಾದಿ ಸಮಸ್ತ ವಿಷಯಗಳ ಬಗ್ಗೆ ಒಂದು ಕೈಪಿಡಿ ರಚಿಸುವುದು ಡಿವಿಜಿ ಅವರ ಇನ್ನೊಂದು ಹುಚ್ಚು. 1912ರಲ್ಲಿ ಇದನ್ನು ಮಾಡಿದರು. 'ಮೈಸೂರಿನ ಕೈಗನ್ನಡಿ' ಎಂಬ ಈ ಹೊತ್ತಗೆಯಲ್ಲಿ ಇತಿಹಾಸ, ಸಂಸ್ಕೃತಿ, ಆಡಳಿತ, ರಾಜವಂಶ, ಅಧಿಕಾರಿಗಳು, ಹಣಕಾಸು, ಸಂಪನ್ಮೂಲಗಳು, ಅರಣ್ಯ, ಕೃಷಿ, ಶಿಕ್ಷಣ, ಸಾಹಿತ್ಯ, ಕಲೆ ಸಮಸ್ತ ವಿಷಯಗಳೂ ಅಡಕವಾಗಿವೆ.

ವಿದ್ಯಾ ಇಲಾಖೆಯ ಪಠ್ಯಪುಸ್ತಕ ಸಮಿತಿ, ಕನ್ನಡ ಪಂಡಿತ ಪರೀಕ್ಷಾ ಸಮಿತಿ, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆ, ಕೌನ್ಸಿಲ್ ಸಭೆ, ನಿಘಂಟು ಸಮಿತಿಗಳಲ್ಲಿಯೂ ಡಿವಿಜಿ ಸದಸ್ಯರಾಗಿ ಕೆಲಸ ಮಾಡಿದರು. ಪತ್ರಕರ್ತರ ಸಂಘಟನೆ ವಿಚಾರ ಆಗಲೇ ಬಂದಿದೆ. ಮೈಸೂರು ಶೀಘ್ರಲಿಪಿಕಾರರ ಸಂಘದ ಆರಂಭ ಬೆಳವಣಿಗೆಯಲ್ಲೂ ಡಿವಿಜಿಯವರ ಪಾತ್ರ ಹಿರಿದು.

1945ರಲ್ಲಿ ಜಯಪುರದಲ್ಲಿ ಅಖಿಲ ಭಾರತ ಲೇಖಕರ ಸಮ್ಮೇಳನ ನಡೆಯಿತು. ಡಿವಿಜಿ ಅದರಲ್ಲಿ ಭಾಗವಹಿಸಿ ಲೇಖಕನ ಸ್ವಾತಂತ್ರ್ಯ ಕುರಿತಂತೆ ಪ್ರಬಂಧ ಮಂಡಿಸಿದರು.

ಬೆಂಗಳೂರು ನಗರ ಮಹಾಸಭೆಯ ಸದಸ್ಯತ್ವ ಡಿವಿಜಿ ಅವರ ಸಾರ್ವಜನಿಕ ಜೀವನದ ಇನ್ನೊಂದು ಮುಖ್ಯ ಮಜಲು. ಅದು ಅವರಿಗೆ 'ಬೇಕಿಲ್ಲದ ಹುದ್ದೆ'. ಆದರೆ ದಿವಾನ್ ವಿಶ್ವೇಶ್ವರಯ್ಯನವರ ಆದೇಶ, ಪುರಸಭಾಧ್ಯಕ್ಷ ಸರ್ ಕೆ.ಪಿ. ಪುಟ್ಟಣ್ಣಶೆಟ್ಟರ ಒತ್ತಾಸೆ, ಇವುಗಳಿಗೆ ಕಟ್ಟುಬಿದ್ದು 1912ರಿಂದ 20ರವರೆಗೆ ನಗರಸಭೆಯಲ್ಲಿದ್ದರು. ನಗರಸಭೆಯ ಸಮಸ್ಯೆಗಳು, ಪೌರಸಮಸ್ಯೆಗಳು, ಅವು ಗಳ ಪರಿಹಾರ ಇತ್ಯಾದಿ ವಿಷಯಗಳ ಅಧ್ಯಯನಕ್ಕೆ ಅವಕಾಶ ಆಯಿತು. ಪೌರಸಮಸ್ಯೆಗಳ ಪರಿಶೀಲನೆಯಲ್ಲಿ ಡಿವಿಜಿ ತುಂಬ ಆಸಕ್ತರು. ಸಾಹಿತ್ಯ-ಪಾಂಡಿತ್ಯ-ಕಲ್ಪನೆ ಎಂದು ದಂತಗೋಪುರದಲ್ಲಿ ಇರುವುದು ಅವರ ಜಾಯಮಾನ ವಲ್ಲ. ಅವುಗಳ ಜೊತೆಜೊತೆಗೇ ಅವರು ದೈನಂದಿನ ಲೋಕವ್ಯವಹಾರದಲ್ಲಿ ಲೆಕ್ಕಾಚಾರಗಳಲ್ಲಿ, ಆರ್ಥಿಕ ರಾಜಕೀಯ ಪ್ರಸಂಗಗಳಲ್ಲಿ ಅಷ್ಟೇ ಉತ್ಸಾಹದಿಂದ, ತಾದಾತ್ಮ್ಯದಿಂದ ಆದರೆ ನಿರ್ಲಿಪ್ತತೆಯಿಂದ ಪಾಲುಗೊಳ್ಳುತ್ತಿದ್ದರು.

ಸಂಗೀತ ಡಿವಿಜಿಯನ್ನು ಮೋಹಗೊಳಿಸಿದ ಇನ್ನೊಂದು ಹವ್ಯಾಸ. ಎಳೆಯ ತನದಲ್ಲೆ ಮುಳುಬಾಗಿಲಿನಲ್ಲಿ ಹಲವಾರು ಭಜನೆ, ಕೀರ್ತನೆ, ಹಾಡುಗಳನ್ನು ಕೇಳಿ ಅನುಭವಿಸಿದ್ದರು. ಸಣ್ಣಪುಟ್ಟ ಊರುಗಳಲ್ಲೂ ಇಂಥ ಕಲೆಗಳು ಉಳಿದಿದ್ದುದು ಅಂದಿನ ವಿಶೇಷ. ಮೈಸೂರು ಬೆಂಗಳೂರುಗಳಂತೂ ಸಂಗೀತ ಕಲೆಗಳ ನೆಲೆ ಗಳೇ. ಇಲ್ಲಿ ಡಿವಿಜಿ ಅವರ ಈ ಪ್ರವೃತ್ತಿ ಗರಿಗೆದರಿತು. ಮೈಸೂರು ವಾಸು ದೇವಾಚಾರ್ಯರಂಥ ಹಿರಿಯರ ಗೆಳೆತನ ಲಭಿಸಿತು. ನರಸಿಂಹಮೂರ್ತಿ, ಕೃಷ್ಣಸ್ವಾಮಿ ಅಯ್ಯರ್ ಮುಂತಾದ ಆಪ್ತರ ಸಂಗೀತಾಸಕ್ತಿ ಡಿವಿಜಿ ಅವರಿಗೆ ಇಂಬುಗೊಟ್ಟಿತು. ಪಿಟೀಲು ನಾರಾಯಣಸ್ವಾಮಿ ಭಾಗವತರಲ್ಲಿ ಕೆಲವು ಕಾಲ ಕಲಿತದ್ದು ಉಂಟು. ರಾತ್ರಿಯೆಲ್ಲ ತಾಲೀಮು. ಮೈಸೂರು ವಾಸುದೇವಾಚಾರ್ಯರ ಗರಡಿ ಅನುಭವವೂ ಆಯಿತು. ಸಂಗೀತಜ್ಞಾನ ಹೆಚ್ಚಿತು. ಸಂಗೀತ ಕಲೆ ಕೈಗೂಡಲಿಲ್ಲ. ಆ ಜ್ಞಾನದ ಪ್ರಭಾವವನ್ನು ಅವರ ಅನೇಕ ಕೃತಿಗಳಲ್ಲಿ ಕಾಣಬಹುದು. ತಮ್ಮ ಅನೇಕ ಹಾಡುಗಳಿಗೆ ಅವರೇ ರಾಗ ನಿರ್ದೇಶನ ಮಾಡಿದ್ದಾರೆ. ಮುಖ್ಯವಾಗಿ ಗೀತ ಶಾಕುಂತಲ ಮತ್ತು ಅಂತಃಪುರ ಗೀತೆಗಳು ಸಂಗೀತದ ಕೃತಿಗಳೇ ಎನ್ನುವಂತಿವೆ. ರಾಗ ತಾಳ ಬದ್ಧವಾಗಿವೆ. ಅನೇಕ ಸಂಗೀತ ಕಚೇರಿಗಳಲ್ಲಿ, ನಾಟ್ಯ ಕಾರ್ಯಕ್ರಮಗಳಲ್ಲಿ ಇತರ ವಾಗ್ಗೇಯಕಾರರ ಕೃತಿಗಳ ಸಾಲಿನಲ್ಲಿ ಮೆರೆದಿವೆ.

ಎರಡನೆಯ ಮಹಾಯುದ್ಧದ ಕಾಲ. 1938-39. ಜರ್ಮನಿ ಮೇಲುಗೈ ಪಡೆದಿತ್ತು. ಅದರ ಯುದ್ಧನೌಕೆ ಎಮ್‌ಡನ್ ಮದರಾಸಿನ ಬಳಿ ಪ್ರತ್ಯಕ್ಷವಾಗಿತ್ತು. ಜನರೆಲ್ಲ ತಲ್ಲಣಗೊಂಡಿದ್ದರು. ಅವರಲ್ಲಿ ಧೈರ್ಯವನ್ನು ಉಂಟುಮಾಡಬೇಕು ಎಂದು

ಡಿವಿಜಿ ಜನಸಂಘಟನೆಯ ಕೆಲಸ ಕೈಗೊಂಡರು. ಪ್ರಜಾ ಆತ್ಮರಕ್ಷಣ ಸಮಿತಿಯನ್ನು ಕಟ್ಟಿದರು (Self Protection League). ಅಪಾಯ ಬಂದರೆ ಹೇಗೆ ಎದುರಿಸಬೇಕು, ಏನು ಮಾಡಬೇಕು ಇತ್ಯಾದಿ ವಿಷಯಗಳಲ್ಲಿ ಜನತೆಗೆ ತಿಳಿವಳಿಕೆ ಕೊಡುವ ಕೆಲಸ, ಜನರನ್ನು ಸಜ್ಜುಗೊಳಿಸುವ ಕೆಲಸ.

ರೈಟ್ ಆನರಬಲ್ ವಿ.ಎಸ್. ಶ್ರೀನಿವಾಸ ಶಾಸ್ತ್ರಿಗಳ ಸಂಪರ್ಕ ಮತ್ತು ಸಾನ್ನಿಧ್ಯ ಡಿವಿಜಿ ಅವರ ಬದುಕಿನ ಅಮೂಲ್ಯ ಅಧ್ಯಾಯ. ಗುರು ಗೋಖಲೆಯ ಆಪ್ತರು ಶಾಸ್ತ್ರಿಗಳು. ಮಿತವಾದಿ ವಿಚಾರದವರು. ಮೇಲಾಗಿ ಅಗಾಧ ಪಂಡಿತರು, ಅಮೋಘ ವಾಗ್ಮಿ. ಉನ್ನತ ಚಿಂತನಶೀಲರು. ಭಾರತದ ಪರಂಪರಾಗತ ಜ್ಞಾನಾನುಭವದಲ್ಲಿ ದೃಢವಾದ ನಿಷ್ಠೆ ಉಳ್ಳವರು. ಜೊತೆಗೇ ಆಧುನಿಕ ಲೋಕ ಜ್ಞಾನಕ್ಕೆ ಮನ ತೆರೆದವರು, ಧವಳ ಚರಿತ್ರರು. ಡಿವಿಜಿ ಶ್ರೀ ಶಾಸ್ತ್ರಿಗಳನ್ನು ಮೆಚ್ಚಿಕೊಂಡಿದ್ದು, ಹಚ್ಚಿಕೊಂಡಿದ್ದು ಆಶ್ಚರ್ಯವೇನಲ್ಲ. ಅವರ ಒಡನಾಟ, ಸೇವೆ, ಡಿವಿಜಿಯವರ ಪಾಲಿಗೆ ಒಂದು ಮಹಾಯೋಗ. ಅವರಿಂದಾಗಿ ಡಿವಿಜಿಯವರ ಜೀವನ ದೃಷ್ಟಿ ಸಾಕಷ್ಟು ಮಟ್ಟಿಗೆ ರೂಪುಗೊಂಡಿತು ಎಂದರೆ ತಪ್ಪಲ್ಲ.

1940ರ ವೇಳೆಗೆ ಡಿವಿಜಿ ಅವರ ಸರ್ಕಾರದ ಸಂಬಂಧ ಕೊನೆಗೊಂಡಿತು. ಅಲ್ಲಿಂದ ಆಚೆಗೆ ಗೋಖಲೆ ಸಂಸ್ಥೆಯ ಸರ್ವಸ್ವವಾಯಿತು.

ಜನಸಂಗ್ರಹ – ಲೋಕಸಂಗ್ರಹ ಎಂದರೆ ಡಿವಿಜಿಗೆ ಆಸಕ್ತಿ. ಲೋಕಜೀವನದಿಂದ ದೂರ ಇರುವುದು ಅವರಿಗೆ ಒಗ್ಗದು. ಈಸಬೇಕು ಇದ್ದು ಜೈಸಬೇಕು ಎಂಬುದೇ ಅವರ ಪಂಥ. ತಾವು ಅಂತರಿಕವಾಗಿ ಎಷ್ಟೇ ಚಿಂತನಪರರೂ, ವೈರಾಗ್ಯಪರರೂ, ಲೌಕಿಕ ಬಂಧನಗಳಿಂದ ಮುಕ್ತರಾಗಿರಬೇಕೆಂಬ ಪ್ರವೃತ್ತಿಯವರೂ, ವಿದ್ವಾಂಸರೂ, ಕವಿಗಳೂ ಆಗಿದ್ದರೂ, ಲೋಕಜೀವನವನ್ನು ದೂರೀಕರಿಸುವುದು ಅವರಿಗೆ ಇಷ್ಟವಿರಲಿಲ್ಲ. ಅಂತೆಯೆ ಜನರನ್ನು ಕಲೆಹಾಕುವುದು, ಗೆಳೆಯರನ್ನು ಜೊತೆಗೂಡಿಸುವುದು, ಒಂದಲ್ಲ ಒಂದು ಸಾರ್ವಜನಿಕ ಕೆಲಸದಲ್ಲಿ ತೊಡಗುವುದು–ಇದೆಲ್ಲ ಅವರ ಬದುಕಿನಿಡೀ ನಡೆದಿತ್ತು. "ಹೊರಗೆ ಲೋಕಾಸಕ್ತಿ–ಒಳಗದರ ವಿರಕ್ತಿ" ಮಂಕುತಿಮ್ಮನ ಈ ಮಾತಿಗೆ ಡಿವಿಜಿಯೆ ಉದಾಹರಣೆ.

ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಗೋಖಲೆ ಸಂಸ್ಥೆಗಳು ಡಿವಿಜಿಯಿಂದ ಪಡೆದ ಸೇವೆ, ಸ್ಫೂರ್ತಿ ಅಪಾರ. ಅದು ಪ್ರತ್ಯೇಕವಾಗಿಯೆ ಪರಿಗಣಿಸಬೇಕಾದ್ದು.

# 9. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ

ಕನ್ನಡ ನಾಡು ನುಡಿ ಸಂಸ್ಕೃತಿಗಳ ಅಭಿವೃದ್ಧಿಗ ತನ್ನನ್ನು ಅರ್ಪಿಸಿಕೊಂಡು ಬೆಳೆದು ನಿಂತಿರುವ ಮಹಾ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ಇದೇ ಉದ್ದೇಶವನ್ನು ಇಟ್ಟುಕೊಂಡು ಹುಟ್ಟಿ ಕೆಲವು ಕಾಲ ಬಾಳಿದ ಸಂಸ್ಥೆಗಳು ಹಲವು. ಧಾರವಾಡದ ವಿದ್ಯಾವರ್ಧಕ ಸಂಘ ಇನ್ನೂ ಇದೆ. ಆದರೆ ವ್ಯಾಪ್ತಿ ವಿಸ್ತಾರಗಳಲ್ಲಿ, ಅಭಿವೃದ್ಧಿಯಲ್ಲಿ ಸಾಹಿತ್ಯ ಪರಿಷತ್ತು ಇತರ ಎಲ್ಲ ಸಂಸ್ಥೆಗಳನ್ನೂ ಮೀರಿದ್ದು. ಒಂದು ರೀತಿಯಲ್ಲಿ ಇದು ಕನ್ನಡದ ಪ್ರಧಾನ ಸಂಸ್ಥೆ, ಮಾತೃಸಂಸ್ಥೆ. ಇದರ ಆಶ್ರಯವೇ ಅನೇಕ ಸಂಸ್ಥೆಗಳಿಗೆ ಆಧಾರ. ಸಾಹಿತ್ಯ ಸೃಷ್ಟಿ, ಪೋಷಣೆ, ಪ್ರೇರಣೆ, ಪ್ರಚಾರ ಎಲ್ಲದರಲ್ಲೂ ಸಾಹಿತ್ಯ ಪರಿಷತ್ತು ಮಾಡಿರುವ ಕಾರ್ಯ ಅಪಾರ. ಈ ಮಹತ್ಸಾಧನೆಯಲ್ಲಿ ಈಚಿನ ಸುಮಾರು ಹತ್ತಾರು ವರ್ಷಗಳ ಕಾರ್ಯ, ಮುನ್ನಡೆ ಎಷ್ಟು ನಿಚ್ಚಳವೊ, ಪರಿಷತ್ತಿನ ಆದಿಯಿಂದ ನಡೆದ ಸಾಧನೆಯೂ ಅಷ್ಟೇ ಮುಖ್ಯ; ಗಮನಾರ್ಹ. ಈಗಿನದು ಮಹಲು ಕಟ್ಟುವ ಕೆಲಸ. ಕಣ್ಣಿಗೆ ಎದ್ದು ಕಾಣುತ್ತದೆ, ಕೀರ್ತಿ ತರುತ್ತದೆ ಕಾರ್ಯಕರ್ತರಿಗೆ. ಹಿಂದಿನದು ಅಡಿಪಾಯ ಹಾಕುವ ಕೆಲಸ. ಅಡಿಪಾಯ ಕಣ್ಣಿಗೆ ಕಾಣದು. ಆದರೆ ಅದು ಇಲ್ಲದೆ ಕಟ್ಟಡ ಎಲ್ಲಿ? ಅಂತೆಯೆ ಪರಿಷತ್ತನ್ನು ಹುಟ್ಟುಹಾಕಿ ಶ್ರದ್ಧೆ ನಿಷ್ಠೆ ತ್ಯಾಗಗಳ ನೀರು ಎರೆದು ಬೆಳೆಸಿದ ಹಿಂದಲ ಆದ್ಯರನೇಕರು ನಿತ್ಯಸ್ಮರಣೀಯರು. ಪ್ರೇರಣೆ ಇತ್ತ ಸರ್ ಎಂ. ವಿಶ್ವೇಶ್ವರಯ್ಯ, ಚಾಲನೆ ಇತ್ತ ಹೆಚ್.ವಿ. ನಂಜುಂಡಯ್ಯ, ಪೋಷಣೆ ಇತ್ತ ನಂಗಪುರಂ ವೆಂಕಟೇಶ ಅಯ್ಯಂಗಾರ್, ಅಚ್ಯುತರಾವ್, ರಾಮಚಂದ್ರರಾವ್, ರಘುನಾಥರಾವ್, ಬಿ.ಎಂ.ಶ್ರೀಕಂಠಯ್ಯ, ಮಾಸ್ತಿ, ಎ.ಆರ್. ಕೃಷ್ಣಶಾಸ್ತ್ರಿ, ಬೆಳ್ಳಾವೆ ವೆಂಕಟನಾರಣಪ್ಪ, ಎಂ.ಆರ್. ಶ್ರೀನಿವಾಸ ಮೂರ್ತಿ, ಎಂ.ಎಸ್. ಪುಟ್ಟಣ್ಣ, ಡಿ.ಸಿ. ಸುಬ್ಬರಾಯಪ್ಪ, ಕರ್ಪೂರ ಶ್ರೀನಿವಾಸ ರಾವ್, ಬಿ. ಕೃಷ್ಣಪ್ಪ, ಇತ್ಯಾದಿ ಮಹನೀಯರು ಇಂದಿನ ಪರಿಷತ್ತಿನ ಬುನಾದಿಯ ಆಧಾರ ಶಿಲೆಗಳು.

ಈ ಪಂಕ್ತಿಯಲ್ಲಿ ರಾರಾಜಿಸುವವರು ಡಿವಿಜಿ. ಪರಿಷತ್ತು ಆರಂಭವಾದುದು

1915ರಲ್ಲಿ. ವಿಶ್ವೇಶ್ವರಯ್ಯನವರ ಅರ್ಥಸಾಧಕ ಪರಿಷತ್ತಿನ ಫಲಶ್ರುತಿಯಾಗಿ ಮೂಡಿಬಂದ ಕಲ್ಪನೆಗಳು ಎರಡು. ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಕನ್ನಡ ಸಾಹಿತ್ಯ ಪರಿಷತ್ತು. ಶಿಕ್ಷಣ ಪ್ರಸಾರ, ಅಭಿವೃದ್ಧಿ, ಸಾಹಿತ್ಯ–ಸಂಸ್ಕೃತಿ ಪ್ರಸಾರ ಅಭಿವೃದ್ಧಿ ಇವುಗಳಿಗಾಗಿ ಹುಟ್ಟಿದವು ಈ ಸಂಸ್ಥೆಗಳು. ಈ 70 ವರ್ಷದಲ್ಲಿ ಇವು ಆದ್ಯರ ಮೂಲೋದ್ದೇಶಗಳನ್ನು ಬಹುಮಟ್ಟಿಗೆ ಸಾರ್ಥಕಗೊಳಿಸಿರುವುದು ತೀರ ಸ್ಪಷ್ಟ ಮಾತ್ರವಲ್ಲ. ಅಂದಿನ ಉದ್ದೇಶ, ಕಾರ್ಯವ್ಯಾಪ್ತಿ ಸ್ವರೂಪಗಳನ್ನು ಹಿಗ್ಗಿಸಿ, ಕನ್ನಡ ನಾಡಿನ ಸರ್ವತೋಮುಖ ಅಭಿವೃದ್ಧಿಯ ಸಾಧನೆಯಲ್ಲಿ ಪರಿಣಾಮಕಾರಿ ಯಾದ ಪಾತ್ರವನ್ನು ವಹಿಸಿವೆ.

1912–13ರ ಸಮಯ. ಮೈಸೂರಿನಲ್ಲಿ ಸಾಹಿತ್ಯ ಕುರಿತ ಒಂದು ಸಭೆ. ತಾತಯ್ಯನವರು, ಅಂಬಳೆ ಅಣ್ಣಯ್ಯ ಪಂಡಿತರು, ಕರ್ಪೂರ ಶ್ರೀನಿವಾಸರಾಯರು ಮುಂತಾದ ಅಂದಿನ ಧೀಮಂತರ ಹಾಜರಿ. ಜೊತೆಗೆ ಪ್ರಜಾಪ್ರತಿನಿಧಿ ಸಭೆ ಸದಸ್ಯರು. ಬಿ.ಎಂ. ಶ್ರೀಕಂಠಯ್ಯನವರ ಇಂಗ್ಲಿಷ್ ಭಾಷಣ. ಕನ್ನಡದ ಮುನ್ನಡೆ ಬಗ್ಗೆ! ಕನ್ನಡ ಸಂಸ್ಕೃತದ ಹಿಡಿತದಿಂದ ಬಿಡಿಸಿಕೊಂಡು ಹೊರನಾಡುಗಳ ಸಾಹಿತ್ಯ ವಿಚಾರಗಳನ್ನು ಮೈಗೂಡಿಸಿಕೊಂಡು ಹೊಸ ಪರಿಯಲ್ಲಿ ಬೆಳೆಯಬೇಕು ಎನ್ನುವುದು ಉಪನ್ಯಾಸದ ತಿರುಳು. ಬಿ.ಎಂ.ಶ್ರೀ ಅವರ ಹೊಸಗನ್ನಡದ ಮೊಳಗು. ಇದನ್ನು ಸಂಸ್ಕೃತ ವಿರೋಧ ಎಂದು ಭಾವಿಸಿ ಕೆಲವು ಹಳೆಯ ವಿದ್ವಾಂಸರು ಖಂಡಿಸಿದ್ದೂ ಉಂಟು. ಆಗ ಡಿವಿಜಿ ತಮ್ಮ ಸಂಧಾನ ಕೌಶಲದಿಂದ ಘರ್ಷಣೆಯನ್ನು ತಪ್ಪಿಸಿದರು. ಸಂಸ್ಕೃತದ ಉಚ್ಚಾಟನೆ ಅಲ್ಲ ಭಾಷಣಕಾರರ ಉದ್ದೇಶ. ಕನ್ನಡದ ಮುನ್ನಡೆ. ಅದಕ್ಕೆ ಎಷ್ಟು ಅಗತ್ಯವೊ ಅಷ್ಟು ಸಂಸ್ಕೃತ ಇರಲೇಬೇಕು ಎಂದು ಸಮನ್ವಯ ಮಾಡಿದರು.

ಆ ಸಭೆಯೆ ಮುಂದಿನ ಸಾಹಿತ್ಯಿಕ ಚಟುವಟಿಕೆಗೆ ನಾಂದಿ. ಮುಂದೆ 3 ವರ್ಷದಲ್ಲಿ ಸಾಹಿತ್ಯ ಪರಿಷತ್ತು ಜನ್ಮತಾಳಿತು. ಮೊಟ್ಟಮೊದಲನೆಯ ಸಭೆಯಲ್ಲಿ ಇದ್ದವರಲ್ಲಿ ಗುಂಡಪ್ಪನವರೂ ಒಬ್ಬರು. ಪರಿಷತ್ತಿನ ಕರಡು ನಿಯಮಾವಳಿ ರಚಿಸಿದ ಸಮಿತಿಯಲ್ಲೂ ಇದ್ದರು. ಅಂತೆಯೆ ಪರಿಷತ್ತಿನ ಸೃಷ್ಟಿಕರ್ತರಲ್ಲಿ ಡಿವಿಜಿಯೂ ಒಬ್ಬರು.

ಬೆಳ್ಳಾವೆಯವರ ಸಮರ್ಪಣಾಭಾವದ ತಪೋಬಲ ಪರಿಷತ್ತನ್ನು ಬೆಳೆಯಿಸಿತು. ಅವರಿಗೆ ಹೆಗಲೆಣೆಯಾಗಿ ನಿಂತು ಸಹಕರಿಸಿದವರು ಡಿವಿಜಿ. ಪರಿಷತ್ತಿನ ಪುಸ್ತಕ ಭಂಡಾರ, ಪ್ರಕಟಣೆಗಳು, ಉಪನ್ಯಾಸಾದಿ ಕಾರ್ಯಕ್ರಮಗಳು, ಸಮ್ಮೇಳನಗಳು, ಧನ ಸಂಗ್ರಹಣೆ ಎಲ್ಲದರಲ್ಲೂ ಡಿವಿಜಿಯವರದು ಪ್ರಧಾನ ಪಾತ್ರ.

ಆ ವೇಳೆಗಾಗಲೇ ಡಿವಿಜಿ ಸಾಹಿತಿ ಆಗಿದ್ದರು. ಕೆಲವು ಜೀವನಚರಿತ್ರೆಗಳನ್ನು, ನಿವೇದನ ಮುಂತಾದ ಕವಿತೆಗಳನ್ನು ರಚಿಸಿದ್ದರು. ವಿದ್ವಲ್ಲೋಕದಲ್ಲಿ ಗಣನೀಯರಾಗಿದ್ದರು. ಹೀಗಾಗಿ 1932ರಲ್ಲಿ ಮಡಕೇರಿಯಲ್ಲಿ ನಡೆದ ಹದಿನೆಂಟನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗೆ ಡಿವಿಜಿ ಆಹ್ವಾನಿತರಾದುದು ಆಶ್ಚರ್ಯವೇನೂ ಅಲ್ಲ.

ಪರಿಷತ್ತಿನ ಸಮ್ಮೇಳನಾಧ್ಯಕ್ಷತೆ ಕೇವಲ ಗೌರವದ ಸ್ಥಾನ. ಯಾವ ಅಧಿಕಾರವೂ ಇಲ್ಲದ ಸ್ಥಾನ. ವಿದ್ವಾಂಸರು ನಾಡು ನುಡಿಯ ಬಗ್ಗೆ ತಮ್ಮ ಚಿಂತನವನ್ನು ಮಂಡಿಸುವ ಸಂದರ್ಭ. ಜಾತ್ರೆ ಎಂದೇ ಟೀಕೆಗೆ ಗುರಿ ಆದದ್ದೂ ಉಂಟು. ಆದರೆ ಬದುಕಿನಲ್ಲಿ ಜಾತ್ರೆಗಳೂ ಅವಶ್ಯವೇ. ಪರಸ್ಪರ ಭೇಟಿ ಪರಿಚಯ ಸಂಪರ್ಕ ವಿಚಾರ ವಿನಿಮಯಗಳಿಗೆ ಅವಕಾಶ, ವಿದ್ವಾಂಸರ ಆಲೋಚನಾ ಲಹರಿಯ ಸಂಸ್ಪರ್ಶಕ್ಕೆ ಅವಕಾಶ, ಜನಸಾಮಾನ್ಯರಲ್ಲಿ ಸಾಹಿತ್ಯ ಪ್ರೇರಣೆ, ಉತ್ಸಾಹ, ಆಸಕ್ತಿಗಳ ಬೆಳವಣಿಗೆಗೆ, ಹೆಚ್ಚಳಕ್ಕೆ ಅವಕಾಶ. ಮಡಕೇರಿ ಸಾಹಿತ್ಯ ಸಮ್ಮೇಳನ ವಿಶೇಷವಾದದ್ದು. ಕನ್ನಡದಲ್ಲಿ ಆಗಲೇ ಸಾಕಷ್ಟು ಹೆಸರು ಮಾಡಿದ್ದ ಡಿವಿಜಿ ಅಧ್ಯಕ್ಷರು. ಅವರ 'ವನಸುಮ' ಹಾಡು ಕನ್ನಡ ನಾಡಿನ ಮೂಲೆಮೂಲೆಯಲ್ಲೂ ಮನೆಮನೆಯಲ್ಲೂ ನಲಿದಿತ್ತು. ರಂಗಾಚಾರ್ಲು, ಗೋಖಲೆ ಮುಂತಾದ ಜೀವನಚಿತ್ರಗಳು, ವಿದ್ಯಾರಣ್ಯ ವಿಜಯ ನಾಟಕ ಹಾಗೂ ಇತರ ವಿದ್ಯಾರಣ್ಯ ಸಂಬಂಧಿತ ಅಧ್ಯಯನ ಕೃತಿಗಳು, ನೂರಾರು ಪತ್ರಿಕಾ ಲೇಖನಗಳು–ಎಲ್ಲವೂ ಡಿವಿಜಿಯವರನ್ನು ನಾಡಿನ ಪ್ರಮುಖ ಸಾಹಿತಿ–ಚಿಂತಕರ ಪಂಕ್ತಿಯಲ್ಲಿ ಪ್ರತಿಷ್ಠಿಸಿದ್ದವು.

ಸಮ್ಮೇಳನ ಅಪಾರ ಆಸಕ್ತಿ ಹುಟ್ಟಿಸಿತು. ಅದರ ಪ್ರಮುಖ ಆಕರ್ಷಣೆ, ಅಧ್ಯಕ್ಷರು ಹಾಗೂ ಅವರ ವಿದ್ವತ್ಪೂರ್ಣ ಭಾಷಣ. ಡಿವಿಜಿಯವರ ಅಧ್ಯಕ್ಷ ಭಾಷಣ ಅಭ್ಯಾಸಯೋಗ್ಯ ದಾಖಲೆ. ಸಾಹಿತ್ಯದ ಗುರಿ, ರೂಪರೇಷೆ, ಜೀವನದಲ್ಲಿ ಅದರ ಅಗತ್ಯ, ಜೀವನ ದೃಷ್ಟಿ, ಸಾಹಿತ್ಯದಲ್ಲಿ ಸಾಮರಸ್ಯ, ಸಮಚಿತ್ತತೆ, ಪಾಂಡಿತ್ಯ ಪೋಷಣೆಯ ಅಗತ್ಯ, ಕನ್ನಡದ ಸಮಸ್ಯೆಗಳು, ಅವುಗಳಿಗೆ ಪರಿಹಾರ, ಕಾವ್ಯಧರ್ಮ, ಕನ್ನಡ–ಸಂಸ್ಕೃತ ಸಂಬಂಧ, ಛಂದಸ್ಸಿನ ಹಾಗೂ ವ್ಯಾಕರಣದ ಸ್ಥಾನ, ವಿಜ್ಞಾನಾದಿ ಲೌಕಿಕ ಗ್ರಂಥಗಳ ರಚನೆಯ ಅಗತ್ಯ, ವಾಚಕರ ಸಿದ್ಧತೆ, ನಿಘಂಟಿನ ಅವಶ್ಯಕತೆ, ಪರಿಷತ್ತಿನ ಕಾರ್ಯವ್ಯಾಪ್ತಿ, ಇತ್ಯಾದಿ ಅನೇಕ ವಿಷಯಗಳ ಪರಾಮರ್ಶೆ ಆ ಭಾಷಣ. ಅಲ್ಲಿನ ಗದ್ಯ ಚೇತೋಹಾರಿ, ವಿಷಯದಂತೆಯೆ. ಕಾವ್ಯ–ಜೀವನ, ಕಾವ್ಯ–ವಿಜ್ಞಾನ, ಕಾವ್ಯ–ರಾಜಕೀಯ, ಇವುಗಳಲ್ಲಿ ಸಮರಸ ಇರಬೇಕು ಎನ್ನುವುದು ಡಿವಿಜಿಯವರ ದೃಢವಾದ ನಂಬಿಕೆ.

"ಬುದ್ಧಿಯ ಗತಿಗಳು ಅನಂತ ; ಮನಸ್ಸಿನ ವಿಲಾಸಗಳು ಅನಂತ ; ಸತ್ಯದ ಕಿರಣಗಳು ಅನಂತ ; ಸೌಂದರ್ಯದ ಅಲಗುಗಳು ಅನಂತ ; ಜೀವಗಳು ಅನಂತ; ಜಗತ್ತು ಅನಂತ ; ಜೀವಜಗತ್ತುಗಳ ಋಣಾನುಬಂಧಗಳು ಅನಂತ. ಈ ನಾನಾ ಅನಂತತೆಗಳ ಅಲ್ಲೋಲ–ಕಲ್ಲೋಲಗಳ ನಡುವೆ ನಿಲ್ಲುವ ಒಂದಿಷ್ಟು ಗಟ್ಟಿ ನೆಲವನ್ನು ಹುಡುಕಿ ಕೊಡುವವನು ವಿಜ್ಞಾನಿ, ತಿನ್ನಲು ಒಂದಿಷ್ಟು ಆಹಾರ ವನ್ನೊದಗಿಸುವವನು ಕವಿ. ಸ್ವಭಾವ, ಸತ್ಯ, ಸೌಂದರ್ಯ, ಧರ್ಮ, ಆನಂದ, ಜೀವನ —ಇವೆಲ್ಲವೂ ಕವಿಗೆ ಒಂದೇ ವಸ್ತುವಿನ ಅನೇಕ ಪ್ರಕಾರಗಳು"—ಈ ಮಾತು ಸಾಮರಸ್ಯಕ್ಕೆ ಕಳಕಳಿಗೆ ಸಾಕ್ಷಿ. ಹೃದ್ಯವಾದ ಗದ್ಯಕ್ಕೂ ಉದಾಹರಣೆ.

"ಕನ್ನಡದ ಒಂದೊಂದು ನುಡಿಯೂ ಕಿಡಿಯಾಗಬೇಕು, ಸಿಡಿಲಾಗಬೇಕು, ನಕ್ಷತ್ರವಾಗಬೇಕು, ಅಮೃತ ಬಿಂದುವಾಗಬೇಕು. ಇದೀಗ ನಮ್ಮ ಆಶೆ. ಈ ಆಶೆ ಗಾಗಿ ದುಡಿಯುವುದರಲ್ಲಿ ಎಲ್ಲ ದೇಶ ಭಾಷಾ ಬಾಂಧವರೂ ಅವರ ಅದೃಷ್ಟ ಶಕ್ತಿಗಳೂ ಸಹಕರಿಸಲಿ"—ಇಂಥ ಪ್ರೋತ್ಸಾಹಕ ಉತ್ತೇಜಕ ಕರೆ ಅಂದು ಸಮ್ಮೇಳನದಲ್ಲಿ ಎಂಥ ಸ್ಫೂರ್ತಿಯನ್ನು, ಉತ್ಸಾಹವನ್ನು, ತೇಜಸ್ಸನ್ನು, ಉಕ್ಕಿಸಿರ ಬೇಕು ! ಆ ಭಾಷಣ ಎಂದೆಂದಿಗೂ ಮನನೀಯ! ಕೇವಲ ಸಾಹಿತ್ಯದ ದೃಷ್ಟಿಯಿಂದಷ್ಟೇ ಅಲ್ಲ, ಸಮಷ್ಟಿ ಜೀವನದ ದೃಷ್ಟಿಯಿಂದ, ಸಾರ್ವಕಾಲಿಕವಾದ ತತ್ತ್ವದೃಷ್ಟಿಯಿಂದಲೂ ಅಧ್ಯಯನ ಯೋಗ್ಯ.

ಮರುವರ್ಷವೇ ಡಿವಿಜಿ ಅವರಿಗೆ ಪರಿಷತ್ತಿನ ಕಾರ್ಯಭಾರವೂ ಒದಗಿ ಬಂತು. 1933ರಲ್ಲಿ ಅವರು ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆ ಆದರು. ಆಗ ಅಧ್ಯಕ್ಷರದು ಗೌರವ ಸ್ಥಾನ. ಉಪಾಧ್ಯಕ್ಷರೇ ಕಾರ್ಯಾಧಿಕಾರಿಗಳು. 1937ರವರೆಗೆ ನಾಲ್ಕು ವರ್ಷ ಡಿವಿಜಿ ಆ ಸ್ಥಾನದಲ್ಲಿದ್ದರು. ಪರಿಷತ್ತು ಏನು ಕೆಲಸ ಮಾಡಬೇಕು ಎಂದು ಅವರು ಭಾವಿಸಿಕೊಂಡಿದ್ದರೊ, ಪ್ರತಿಪಾದಿಸಿದ್ದರೊ ಅದನ್ನು ಕಾರ್ಯಗತ ಮಾಡಲು ಶ್ರಮಿಸಿದರು. ಬಹುಮಟ್ಟಿಗೆ ಯಶಸ್ವಿ ಆದರು. ಪರಿಷತ್ತು ಕನ್ನಡ ಸಾಹಿತ್ಯ ಲೋಕದ ಕೇಂದ್ರ ಬಿಂದು ಆಗಬೇಕು ಎಂದು ಡಿವಿಜಿ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡರು. ಆ ಕಾರ್ಯಕ್ಕೆ ಅನುಕೂಲವಾಗುವ ಹಾಗೆ ಸಿಬ್ಬಂದಿ ವರ್ಗವನ್ನು ಹೆಚ್ಚಿಸಿದರು. ವಿದ್ವಾಂಸರನ್ನು ನೇಮಿಸಿಕೊಂಡರು. ಪರಿಷತ್ತಿನ ನಿಬಂಧನೆಗಳನ್ನೆಲ್ಲ ಕ್ರೋಢೀಕರಿಸಿ ಪ್ರಕಟಿಸಿದರು. ಜನಸಾಮಾನ್ಯರಿಗೆ ಪರಿಷತ್ತಿನಲ್ಲಿ ಆಸಕ್ತಿ ಹುಟ್ಟಲೆಂದು, ಅನೇಕ ಬಗೆಯ ಜನಪ್ರಿಯ ಕಾರ್ಯಕ್ರಮಗಳನ್ನು ಏರ್ಪಡಿಸಿ ದರು. ವಾರವಾರವೂ ಭಾಷಣ, ಕಾವ್ಯ ವಾಚನಗಳು. ಸಾಹಿತಿಗಳು ಪಂಡಿತರು ಮಾತ್ರವೇ ಅಲ್ಲದೆ ಆಸಕ್ತ ಸಾಮಾನ್ಯರಿಗೂ ಪರಿಷತ್ತು ಸ್ವಾಗತ ನೀಡಿತು.

ಸದಸ್ಯಸಂಖ್ಯೆ ಮೂರು ಪಟ್ಟು ಹೆಚ್ಚಿತು. ನಾಡಿನ ನಾನಾ ಕನ್ನಡ ಸಂಘಗಳನ್ನು ಜೊತೆಗೂಡಿಸಿಕೊಂಡು ಕೆಲಸ ಮಾಡಬೇಕೆಂಬ ಉದ್ದೇಶವನ್ನು ಡಿವಿಜಿ ಸಾಧಿಸಿದರು. 1939ರಲ್ಲಿ ಅಖಿಲ ಕರ್ನಾಟಕ ಸಂಘಗಳ ಸಮ್ಮೇಳನ ನಡೆಸಿದರು.

ವಿಶೇಷ ಸಾಹಿತ್ಯೋತ್ಸವ ಅಥವಾ ವಸಂತ ಸಾಹಿತ್ಯೋತ್ಸವ ಡಿವಿಜಿಯವರ ವಿಶಿಷ್ಟ ಕೊಡುಗೆ. ಇದರ ಆರಂಭ 1934ರಲ್ಲಿ. ಬೇಸಿಗೆ ಕಾಲದಲ್ಲಿ ಸಾಹಿತ್ಯ ಹಾಗೂ ಇತರ ನಾನಾ ವಿಷಯಗಳ ಬಗ್ಗೆ ಜನಸಾಮಾನ್ಯರಿಗೆ ಹಿಡಿಸುವಂತಹ ಉಪನ್ಯಾಸಾದಿ ಕಾರ್ಯಕ್ರಮಗಳು ಉತ್ಸವದ ಮುಖ್ಯ ಅಂಗ. ಶಾಲೆಗಳ ಉಪಾಧ್ಯಾಯರುಗಳು ಬಂದು ಭಾಗವಹಿಸಿ ತಮ್ಮ ಅರಿವನ್ನು ಹೆಚ್ಚಿಸಿಕೊಳ್ಳಲು ಅವಕಾಶ. ಅದಕ್ಕಾಗಿ ಊರೂರುಗಳಿಂದ ಬರುವವರಿಗೆ ಊಟ ವಸತಿ ಸಹ ಏರ್ಪಾಟಾಗುತ್ತಿತ್ತು. ವೈಚಾರಿಕ ಕಾರ್ಯಕ್ರಮಗಳೊಂದಿಗೆ ನಾಟಕ, ಸಂಗೀತ, ಕಾವ್ಯವಾಚನಾದಿ ಮನರಂಜನ ಕಾರ್ಯಕ್ರಮಗಳೂ ಸಮ್ಮಿಳಿತಗೊಂಡಿರುತ್ತಿದ್ದವು. ಇಂದು ಬೃಹತ್ತಾಗಿ ಗ್ರಂಥಪ್ರದರ್ಶನ ನಡೆಯುತ್ತವೆ. ಡಿವಿಜಿ 50 ವರ್ಷದ ಹಿಂದೆಯೆ ಈ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದರು.

ಈ ಸಾಹಿತ್ಯೋತ್ಸವ ಸ್ಥಾಯಿ, ಬೆಂಗಳೂರಿನಲ್ಲಿ. ಆದರೆ ನಾಡಿನ ನಾನಾ ಭಾಗಗಳಲ್ಲೂ ಇಂಥದು ಅಗತ್ಯ ತಾನೇ! ಅದಕ್ಕಾಗಿ "ಸಂಚಾರೋಪನ್ಯಾಸ ಯೋಜನೆ'' ರೂಪುಗೊಂಡಿತು. ಪರಿಷತ್ತಿನ ಸಂದೇಶವನ್ನು ಕನ್ನಡದ ಕಂಪನ್ನು ಹಳ್ಳಿಹಳ್ಳಿಗೂ ಕೊಂಡೊಯ್ಯುವ ಹಂಬಲ. ಮಹದಾಶೆಯ ಯೋಜನೆ. ಆದರೆ ಆಗಿನ ಇತಿಮಿತಿಗಳಲ್ಲಿ ಇದು ಕಾರ್ಯರೂಪಕ್ಕೆ ಬರುವುದು ಕಷ್ಟವಾಯಿತು.

ಗಮಕ ಕಲೆಗೆ ಕೊಟ್ಟ ಇಂಬು ಪ್ರೋತ್ಸಾಹ ಡಿವಿಜಿ ಅವರ ಇನ್ನೊಂದು ಮಹತ್ವದ ಸಾಧನೆ. ಆವರೆಗೆ ಗಮಕ ಕಾವ್ಯ ವಾಚನಗಳೆಲ್ಲ ವೈಯಕ್ತಿಕ ಮಟ್ಟದಲ್ಲಿ ನಡೆಯುತ್ತಿದ್ದವು. ಕಾವ್ಯಾಸಕ್ತಿಯ ವಿಸ್ತಾರ, ಕಾವ್ಯಪ್ರಸಾರ, ಸಂಸ್ಕೃತಿ ಪ್ರಸಾರಗಳಲ್ಲಿ ಗಮಕಕ್ಕೆ ಇರುವ ಮಹತ್ವವನ್ನು ಡಿವಿಜಿ ಕಂಡುಕೊಂಡರು. ಅದರ ಬೆಳವಣಿಗೆಗಾಗಿ ಸಾಂಘಿಕವಾದ ಸುಸಂಘಟಿತವಾದ ಯೋಜನೆಯನ್ನು ರೂಪಿಸಿದರು. ಅವರ ಕಾಲದಲ್ಲೆ ಮೊಟ್ಟಮೊದಲನೆಯದಾಗಿ ಪರಿಷತ್ತಿನಲ್ಲಿ ಗಮಕಶಿಕ್ಷಣ ಆರಂಭವಾಯಿತು. ಖ್ಯಾತ ಗಮಕಿ ಭಾರತ ಬಿಂದೂರಾಯರನ್ನು ಈ ಕೆಲಸಕ್ಕೆ ಹೂಡಿದರು. ಅಂದು ಆ ಶಿಕ್ಷಣ ಶಿಬಿರಗಳಲ್ಲಿ ತರಬೇತಿ ಪಡೆದ ಅನೇಕರು ಇಂದು ಕನ್ನಡದ ಹಿರಿಯ ಖ್ಯಾತ ಗಮಕಿಗಳಾಗಿದ್ದಾರೆ. ಗುಂಡಪ್ಪನವರ ದೂರ ದೃಷ್ಟಿ ಬಿಂದೂರಾಯರ ಅಧ್ಯಾಪನ ವೈಭವ ಗಮಕಕ್ಕೆ ಒಂದು ಸಾಂಘಿಕವಾದ ಭದ್ರವಾದ ನೆಲೆಗಟ್ಟನ್ನು ನಿರ್ಮಿಸಿದವು. ತರಗತಿಗಳ ಜೊತೆಗೆ ನಾಡಿನ ಉದ್ದಗಲಕ್ಕೂ ಅಲ್ಲಲ್ಲಿ

ಗಮಕ ಗೋಷ್ಠಿಗಳು ವಾಚನ ಕಾರ್ಯಕ್ರಮಗಳು ನಡೆದವು. "ಪಾಂಡಿತ್ಯ ಪೋಷಣೆ, ಜನಸಾಮಾನ್ಯರಲ್ಲಿ ಸಾಹಿತ್ಯೋತ್ಸಾಹದ ಪ್ರಚಾರ, ಅವರಿಗಾಗಿ ಆದರ್ಶಗಳ (standards) ನಿಷ್ಕರ್ಷೆ" – ಈ ಮೂರು ಪರಿಷತ್ತಿನ ಮುಖ್ಯ ಕಾರ್ಯ ಎಂದು ಡಿವಿಜಿ ಭಾವಿಸಿದ್ದರು. ಅವರ ನಾಲ್ಕು ವರ್ಷದ ಉಪಾಧ್ಯಕ್ಷತೆಯ ಅವಧಿಯಲ್ಲಿ ಅವರು ಈ ಮೂರು ಕಾರ್ಯಗಳನ್ನು ಸಮರ್ಪಕವಾಗಿ ಸಾಧಿಸಿದರು.

ಪರಿಷತ್ತಿನ ಇತಿಹಾಸಕಾರ ಮಾ.ನಾ. ಚೌಡಪ್ಪನವರ ಮಾತು ಇಲ್ಲಿ ಉಲ್ಲೇಖನಾರ್ಹ –

"ಪರಿಷತ್ತಿನ ಕಾರ್ಯಕಲಾಪಗಳನ್ನು ಯಾವ ರೀತಿಯಲ್ಲಿ ವಿಸ್ತರಿಸಬೇಕು, ಅವುಗಳ ರೂಪರೇಷೆ ಹೇಗಿರಬೇಕು ಎಂಬ ಅಂಶಗಳನ್ನು ಖಚಿತವಾಗಿ ಆಲೋಚಿಸಿ, ಅವುಗಳಲ್ಲಿ ಹಲವನ್ನು ಕಾರ್ಯರೂಪಕ್ಕೆ ತಂದು, ಧನದ ಬೆಂಬಲ ಅಷ್ಟಾಗಿ ಇಲ್ಲದಿದ್ದರೂ ಪರಿಷತ್ತಿನ ವ್ಯಕ್ತಿತ್ವವನ್ನೂ ವ್ಯಾಪಕತೆಯನ್ನೂ ಪ್ರಭಾವವನ್ನೂ ಹೇಗೆ ಬೆಳೆಸಬಹುದು ಎಂಬುದನ್ನು ತೋರಿಸಿಕೊಟ್ಟವರಲ್ಲಿ ಡಿ.ವಿ. ಗುಂಡಪ್ಪನವರು ಮೊದಲಿಗರು ಎಂದರೆ ಉತ್ಪ್ರೇಕ್ಷೆಯಲ್ಲ" – (ಚಿನ್ನದ ಬೆಳಸು4, ಪುಟ 9)

ತಾವು ಕೇವಲ ಕನಸುಗಾರ ಸಾಹಿತಿ ಅಲ್ಲ, ಆ ಕನಸುಗಳನ್ನು ಸಾರ್ಥಕಗೊಳಿಸಿ ನನಸು ಮಾಡುವ ಚತುರ ಕಾರ್ಯಕರ್ತ ಎನ್ನುವುದನ್ನು ಡಿವಿಜಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ತೋರಿಸಿಕೊಟ್ಟರು.

# 10. ಗೋಖಲೆ ಸಾರ್ವಜನಿಕ ಸಂಸ್ಥೆ

ಸಾರ್ವಜನಿಕ ಸಮಸ್ಯೆಗಳ ಬಗ್ಗೆ ಪಕ್ಷಾತೀತವಾಗಿ, ಉದ್ವೇಗ ಸ್ವಾರ್ಥರಹಿತವಾಗಿ, ಹಿತಾಸಕ್ತಿಗಳಿಂದ ಮುಕ್ತವಾಗಿ ನಿರ್ಲಿಪ್ತ ಮನಸ್ಸಿನಿಂದ ಅಧ್ಯಯನ ಮಾಡುವುದು, ವಿಚಾರ ಮಾಡುವುದು, ತಾತ್ಕಾಲಿಕವಾದ ಇಲ್ಲವೇ ವೈಯಕ್ತಿಕವಾದ, ಸ್ವಹಿತಪರವಾದ ಲಾಭಕ್ಕಾಗಿಯಲ್ಲದೆ, ಭವಿಷ್ಯದ ಹಿತಾಸಕ್ತಿ, ಇಡೀ ಸಮಾಜದ, ರಾಷ್ಟ್ರದ ಹಿತಚಿಂತನೆ, ಸಮುದಾಯದ ಸೌಖ್ಯ ಇವುಗಳನ್ನು ಮಾತ್ರ ಗಮನದಲ್ಲಿ ಇಟ್ಟುಕೊಂಡು ಪರಾಮರ್ಶಿಸುವುದು, ಸಮಸ್ಯೆಯ ಎಲ್ಲ ಮುಖಗಳನ್ನೂ ವಿಮರ್ಶಿಸುವುದು, ಅನಂತರ ಆ ಕುರಿತು ನಿಷ್ಪಕ್ಷಪಾತವೂ ಸಮತೋಲನ ಉಳ್ಳದ್ದೂ ಆದ ಅಭಿಪ್ರಾಯವನ್ನು ವ್ಯಕ್ತಗೊಳಿಸುವುದು ಅಗತ್ಯ. ಇದರಿಂದ ಜನಕ್ಕೆ ಸೂಕ್ತವಾದ ತಿಳಿವಳಿಕೆ ದೊರಕುತ್ತದೆ. ಸಮಾಜ ಜೀವನದಲ್ಲಿ ಅದರಲ್ಲೂ ಪ್ರಜಾಪ್ರಭುತ್ವದಲ್ಲಿ ಸತ್ಪ್ರಜೆ ಆಗಲು ಜನಕ್ಕೆ ಶಿಕ್ಷಣ ಅಗತ್ಯ. ಈ ಕೆಲಸವನ್ನು ಮಾಡಲು ಯೋಗ್ಯವಾದ ಸಂಘಟನ ಇರಬೇಕು–ಈ ಮಾತನ್ನು ಡಿವಿಜಿ ಅಡಿಗಡಿಗೆ ಹೇಳುತ್ತಿದ್ದರು. ಅವರು ಸಾರ್ವಜನಿಕ ಜೀವನಕ್ಕೆ ಕಾಲಿಟ್ಟಾಗಲೇ ಅಂದರೆ ಈ ಶತಮಾನದ ಮೊದಲಲ್ಲೆ ಹೀಗೆ ಆಲೋಚಿಸಿದ್ದರು. ಅದಕ್ಕಾಗಿ ಅವರು ನಡೆಸಿದ ಹಲವು ಪ್ರಯತ್ನಗಳನ್ನು ಆಗಲೇ ನೋಡಿದ್ದಾಗಿದೆ. ಆ ಪ್ರಯತ್ನಗಳು ಮೇಲಿಂದ ಮೇಲೆ ನಡೆದವು. ಬೇರೆ ಬೇರೆ ರೂಪದಲ್ಲಿ ನಡೆದವು. ಬೇರೆ ಬೇರೆ ಕಾರ್ಯಕ್ರಮ ನಡೆಸಿದವು. ಆದರೆ ಮೂಲ ಉದ್ದೇಶ ಒಂದೇ–ಸಾರ್ವಜನಿಕ ಜೀವನ ಹಸನಾಗಬೇಕು, ವ್ಯಕ್ತಿಶಃ ಹಾಗೂ ಸಮುದಾಯವಾಗಿ ಜನಜೀವನ ಸರ್ವಾಂಗೀಣ ಉನ್ನತಿಯತ್ತ ಸಾಗಬೇಕು.

ಗೋಪಾಲಕೃಷ್ಣ ಗೋಖಲೆ ಅಂದಿನ ಮಹಾನಾಯಕರಲ್ಲಿ ಒಬ್ಬರು. ದೇಶಪ್ರೇಮ, ಸ್ವಚ್ಛ ಚಾರಿತ್ರ್ಯ, ಸ್ವಾರ್ಥರಾಹಿತ್ಯ, ಅರ್ಪಣಾಭಾವ, ಜನಹಿತ ದೃಷ್ಟಿ ಚಿಂತನೆ, ಪರಂಪರೆಯಲ್ಲಿ ರಕ್ತಿ, ಪ್ರಗತಿಯಲ್ಲಿ ಆಸಕ್ತಿ—ಈ ಗುಣಗಳ ಸಾಕಾರರೂಪರು ಗೋಖಲೆ. 'ನನ್ನ ರಾಜಕೀಯ ಗುರು' ಎಂದು ಗಾಂಧೀಜಿ ಅವರನ್ನು ಭಾವಿಸಿದ್ದರು.

ಅಂಥ ಮಹಾನುಭಾವರ ವಿಚಾರ, ಕಾರ್ಯ ರೀತಿ ಡಿವಿಜಿಯವರಿಗೆ ಹಿಡಿಸಿದ್ದು ಆಶ್ಚರ್ಯವಲ್ಲ. ಮಿತವಾದ ಅಥವಾ ಸೌಮ್ಯವಾದಕ್ಕೆ ಡಿವಿಜಿ ಒಲಿದುದನ್ನು ಆಗಲೇ ನೋಡಿದ್ದೇವೆ. ಗೋಖಲೆಯವರು, ಅವರಿಗೂ ಹಿರಿಯರಾದ ದಾದಾ ಭಾಯಿ ನವರೋಜಿ ಅಂಥ ಮಿತವಾದದ ನಾಯಕರು. ಆ ಇಬ್ಬರೂ ನಾಯಕರ ಬಗ್ಗೆ ಡಿವಿಜಿಗೆ ಅಪಾರ ಗೌರವ, ಶ್ರದ್ಧೆ, ಭಕ್ತಿ. ಇಬ್ಬರ ಜೀವನ ಚರಿತ್ರೆಯನ್ನೂ ಬರೆದರು.

ತಾವು ಕಲ್ಪಿಸಿಕೊಂಡಿದ್ದ ಜನಸೇವಾ ಸಂಘಟನೆಯನ್ನು ಗೋಖಲೆಯವರ ಹೆಸರಿನಲ್ಲಿ ನಡೆಸುವ ವಿಚಾರ 1915ರಲ್ಲಿ ಡಿವಿಜಿಗೆ ಬಂದಿತ್ತು. ಗೋಖಲೆಯವರ ನಿಧನ ಈ ವಿಚಾರಕ್ಕೆ ಕಾವು ಕೊಟ್ಟು ಮಾಗಿಸಿತು. ಹಲವು ಮಿತ್ರರು ಸೇರಿ ಮೈಸೂರು ಸೋಷಿಯಲ್ ಸರ್ವಿಸ್ ಲೀಗ್ (ಮೈಸೂರು ಸಮಾಜ ಸೇವಾ ಸಂಸ್ಥೆ) ಎಂಬುದನ್ನು ಕಟ್ಟಿದರು. ಇದೇ ಬಳಗ ಗಾಂಧೀಜಿಯವರನ್ನು ಬೆಂಗಳೂರಿಗೆ ಬರಮಾಡಿಕೊಂಡಿದ್ದು. ಗಾಂಧೀಜಿ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಿದ್ದು, ಆ ಸಂಸ್ಥೆ ಮಾಡಿದ ಸಾರ್ವಜನಿಕ ಕೆಲಸ, ಉಪನ್ಯಾಸಾದಿಗಳು, ಕೂಲಿಗಾರರ ಸೇವೆ, ಶಿಕ್ಷಣ, ಬಡವರಿಗೆ ನೆರವು, ಇನ್ಫ್ಲುಯೆಂಜಾ ಬಂದಾಗ ಮಾಡಿದ ಸೇವೆ ಇದನ್ನೆಲ್ಲ ಆಗಲೇ ಪ್ರಸ್ತಾಪಿಸಲಾಗಿದೆ. ಈ ಗೋಖಲೆ ಬಳಗ ಸುಮಾರು 1920ರವರೆಗೂ ಚುರುಕಾಗಿತ್ತು. ಸಾಂಘಿಕವಾದ ಸ್ವರೂಪ ಪಡೆದಿರ ಲಿಲ್ಲ. ಸಡಿಲವಾದ ವಿಶ್ವಾಸಿಗಳ ಬಳಗ. 1920–30ರವರೆಗೆ ಹತ್ತು ವರ್ಷ ನಾನಾ ಕಾರಣದಿಂದಾಗಿ ಸಂಘಟನೆ ಬೆಳೆಯಲಿಲ್ಲ. ಬಳಗದ ಕಲ್ಪನೆ ಮಿತ್ರರ ಹೃದಯ ಗಳಲ್ಲಿ ಇತ್ತು. ಬಂಡೆಯ ಅಡಿಯ ಗರಿಕೆಯಂತೆ. ಬಂಡೆಯನ್ನು ಸರಿಸಿ, ಗರಿಕೆಯನ್ನು ಹಸಿರಾಗಿಸುವ ಪ್ರಯತ್ನ 1930ರಲ್ಲಿ ನಡೆಯಿತು. ಆಗ ಗೆಳೆಯರಿ ಗೆಲ್ಲ ಕಳಿಸಿದ ಒಂದು ಮನವಿಪತ್ರದಲ್ಲಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯೆಂಬ ಹೆಸರೂ ಉಲ್ಲೇಖವಾಗಿತ್ತು. ಆದರೆ ಕಾಲ ಇನ್ನೂ ಕೂಡಿ ಬರಲಿಲ್ಲ. 1939ರಲ್ಲಿ ಡಿವಿಜಿ ಮತ್ತೆ ಪ್ರಯತ್ನಿಸಿದರು. ಸಂಸ್ಥೆಯ ರೂಪುರೇಷೆಗಳನ್ನು ರಚಿಸಿದರು. ರೈಟ್ ಆನರಬಲ್ ವಿ.ಎಸ್. ಶ್ರೀನಿವಾಸ ಶಾಸ್ತ್ರಿಗಳಿಗೆ ತೋರಿಸಿ ತಿದ್ದಿಸಿಕೊಂಡರು. ದಿವಾನ್ ಮಿರ್ಜಾರ ಪ್ರೋತ್ಸಾಹವೂ ದೊರಕಿತು. 1941ರಲ್ಲಿ ಪ್ರಯತ್ನ ಮರುಕಳಿಸಿತು. ಆ ವರ್ಷದ ಮೇ 22ರಂದು ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನಲ್ಲಿ ರಾಜಕೀಯ ಅಧ್ಯಯನ ಮಂಡಲದ ಸಭೆ ಒಂದು ನಡೆಯಿತು. ಅದೇ ಗೋಖಲೆ ಸಂಸ್ಥೆಯ ಬೀಜಾಂಕುರ ಎನ್ನಬಹುದು. ಆದರೂ ಇನ್ನೂ ನಾಲ್ಕು ವರ್ಷ ಬೇಕಾಯಿತು ಈ ವಿಚಾರ ರೂಪ ತಾಳಲು. ಕೊನೆಗೆ 1945 ಫೆಬ್ರವರಿ

18ರಂದು ನಡೆದ ಆಸಕ್ತ ಮಿತ್ರರ ಸಭೆ, ಸಂಸ್ಥೆಯ ಉದ್ದೇಶ, ರೂಪರೇಷೆಗಳನ್ನು ಗೊತ್ತುಮಾಡಿತು. ಡಿವಿಜಿಯವರ ಕನಸು ನನಸಾಗಿತ್ತು !

"(1) ಮೈಸೂರು, ಕರ್ನಾಟಕ, ಭಾರತ ಹಾಗೂ ವಿಶ್ವದ ಹಿತಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ವ್ಯವಸ್ಥಿತವಾದ ವೈಜ್ಞಾನಿಕವಾದ ಅಧ್ಯಯನ, (2) ನಾಡಿನ ರಾಜಕೀಯ, ಸಾಮಾಜಿಕ ಸಂಸ್ಥೆಗಳಿಂದ ಅತ್ಯುತ್ತಮ ಫಲ ದೊರಕುವಂತೆ, ಪ್ರಜಾಪ್ರಭುತ್ವವಾದಿ ಪೌರತ್ವ ಸ್ವತಂತ್ರವಾಗಿ, ಜ್ಞಾನಪೂರ್ಣವಾಗಿ, ಪ್ರಜ್ಞಾಪೂರ್ಣವಾಗಿ ನಿರ್ವಾಹವಾಗುವುದರಲ್ಲಿ ನೆರವಾಗುವುದು–ತನ್ಮೂಲಕ ಭಾರತ ಸ್ವಾತಂತ್ರ್ಯದೆಡೆಗೆ ಮತ್ತು ಪ್ರಜಾಪ್ರಭುತ್ವವಾದೀ ಜವಾಬ್ದಾರೀ ಆಡಳಿತದೆಡೆಗೆ ಮುನ್ನಡೆಯಲು ಶ್ರಮಿಸುವುದು"–ಇದು ಸಂಸ್ಥೆಯ ಗುರಿ ಎಂದು ಆ ದಿನ ಘೋಷಿಸಲಾಯಿತು. ನಾಡಿನ ಅನೇಕ ವಿದ್ವಾಂಸರು, ಸಾರ್ವಜನಿಕ ಮುಖಂಡರು, ಚಿಂತಕರು, ಸಾಹಿತಿಗಳು, ರಾಜಕೀಯ ಕಾರ್ಯಕರ್ತರು, ನ್ಯಾಯವಾದಿಗಳು ಮೊದಲಾದವರೆಲ್ಲ ಇದನ್ನು ಅನುಮೋದಿಸಿದರು. ಸಂಸ್ಥೆಯನ್ನು ಸಾಕಾರಗೊಳಿಸಿದರು. ಹಾಗೆ ಹುಟ್ಟಿದ ಗೋಖಲೆ ಸಾರ್ವಜನಿಕ ಸಂಸ್ಥೆ ಇಂದು ಬೆಂಗಳೂರಿನ ಗಣ್ಯ ಸಂಸ್ಥೆಯಷ್ಟೇ ಅಲ್ಲದೆ, ಕರ್ನಾಟಕದ ಹೆಮ್ಮೆ, ಭಾರತದಲ್ಲೆ ಅಪರೂಪವಾದ ಸಂಸ್ಥೆ ಹಾಗೂ ದೇಶ ವಿದೇಶಗಳಲ್ಲೆಲ್ಲ ಪ್ರಸಿದ್ಧವಾಗಿರುವ ಸಂಸ್ಥೆಯಾಗಿದೆ.

ಸಂಸ್ಥೆಯ ಕಾರ್ಯ ಸಕ್ರಮವಾಗಿ ಆರಂಭವಾದುದು 1946 ಜೂನ್‌ನಲ್ಲಿ. ಅಂದಿನಿಂದ ಈ ಸುಮಾರು 41 ವರ್ಷವೂ ಅದರ ಸೇವೆ ನಿರಂತರವಾಗಿ ನಡೆದುಕೊಂಡು ಬಂದಿದೆ.

1965ರ ಜುಲೈನಲ್ಲಿ ಅದರ 20ನೆಯ ಹುಟ್ಟುಹಬ್ಬ. ಆಗ ಪ್ರಚುರಪಡಿಸಿದ ಸಂಸ್ಥೆಯ ರೂಪರೇಷೆ ಹೀಗಿದೆ –

ಗುರಿ — ಉತ್ತಮ ಪೌರತ್ವದ ಶಿಕ್ಷಣ–ಪಕ್ಷಪಾತ ಇಲ್ಲದ ಪೌರತ್ವ.

ಮಾರ್ಗ — ಪೌರತ್ವಕ್ಕೆ ಉಪಯುಕ್ತವಾದ ಜ್ಞಾನ ಪ್ರಸಾರ; ದೇಶದ ಸಮಸ್ಯೆಗಳ ಬಗ್ಗೆ ವಿಮರ್ಶೆ ಹಾಗೂ ವಿಚಾರ ಮಾಡಲು ಉತ್ತೇಜನ.

ಸ್ವರೂಪ — ಸ್ವತಂತ್ರವೂ, ಪಕ್ಷರಹಿತವೂ, ಕೋಮುರಹಿತವೂ ಆಗ ಸಂಘಟನೆ. ಪ್ರಜೆಗಳು ಪ್ರಜಾಪ್ರಭುತ್ವದ ಪೌರರಾಗಲು ಶಿಕ್ಷಣ ನೀಡುವ ಸಂಸ್ಥೆ. ಇದಕ್ಕಾಗಿ ಅಧ್ಯಯನ ಗೋಷ್ಠಿ. ತರುಣರಿಗೆ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ.

ಸೇವೆ — (1) ಸಾರ್ವಜನಿಕ ಪ್ರಶ್ನೆಗಳ ನಿಷ್ಪಕ್ಷಪಾತವಾದ ವೈಜ್ಞಾನಿಕವಾದ ಪರಾಮರ್ಶೆ.

(2) ಪೌರ ಜಾಗೃತಿ, ಸಮಾಜ ಸೇವೆಗಳ ಮೂಲಕ ಸಾರ್ವಜನಿಕ ಪ್ರಜ್ಞೆಯ ಬೆಳವಣಿಗೆ.

(3) ಸಾಹಿತ್ಯ–ಇತಿಹಾಸಗಳ, ಮಹಾಕೃತಿಗಳ, ಸತ್ಕೃತಿಗಳ ಅಧ್ಯಯನ; ತನ್ಮೂಲಕ ಮಾನವೀಯ ಸಂಸ್ಕೃತಿಯ ಉಪಾಸನೆ.

(4) ನಾನಾ ಬಗೆಯಲ್ಲಿ ಸಾರ್ವಜನಿಕ ಹಿತಸಾಧನೆ.

ಈ ನಿಟ್ಟಿನಲ್ಲಿ ಸಂಸ್ಥೆ ನಡೆಸಿದ ಹಾಗೂ ನಡೆಸುತ್ತಿರುವ ಕೆಲಸ ಹಲವು ಪರಿಯದು. ಜ್ಞಾನನಿಧಿ ಆದ ಗ್ರಂಥಭಂಡಾರ, ನೂರಾರು ಪತ್ರಿಕೆ ಇರುವ ವಾಚನಾಲಯ, ವಾರವಾರವೂ ಇಂಗ್ಲಿಷ್ ಸಂಸ್ಕೃತ ಕನ್ನಡಗಳಲ್ಲಿ ಅಧ್ಯಯನ ತರಗತಿಗಳು, ಸಾರ್ವಜನಿಕ ಉಪನ್ಯಾಸಗಳು, ಪೌರ ಸಮೀಕ್ಷೆಗಳು, ಜನಾಭಿಪ್ರಾಯ ಸಂಗ್ರಹಣೆಗಳು, ವಿಚಾರಗೋಷ್ಠಿಗಳು, ಸಮ್ಮೇಳನಗಳು, ಶಾಸನ ಮತ್ತಿತರ ಸಾರ್ವಜನಿಕ ಪ್ರಶ್ನೆಗಳ ಬಗ್ಗೆ ಮನವಿಪತ್ರಗಳನ್ನು ಸಿದ್ಧಪಡಿಸಲು ವ್ಯವಸ್ಥೆ, ಜನರ ಕುಂದುಕೊರತೆಗಳ ಬಗ್ಗೆ ಆಡಳಿತವರ್ಗದೊಡನೆ ವ್ಯವಹಾರ, ಸಾಂಸ್ಕೃತಿಕ ಸಾಮಾಜಿಕ ಕಾರ್ಯಕ್ರಮಗಳು, ಇಂಗ್ಲಿಷ್ ಮತ್ತು ಕನ್ನಡದಲ್ಲಿ ಪುಸ್ತಕ ಪ್ರಕಟಣೆಗಳು, 'ಪಬ್ಲಿಕ್ ಅಫೇರ್ಸ್' (ಸಾರ್ವಜನಿಕ) ಎಂಬ ಇಂಗ್ಲಿಷ್ ಕನ್ನಡ ಮಾಸಪತ್ರಿಕೆ— ಇತ್ಯಾದಿ.

ಗೋಖಲೆಯವರ ಹೆಸರೇ ಏಕೆ? ಡಿವಿಜಿ ವಿವರಣೆ ನೀಡಿದ್ದಾರೆ—"ಗೋಖಲೆ ಅವರಿಗೆ ಸಾರ್ವಜನಿಕ ಕಾರ್ಯ ಎನ್ನುವುದು ಒಂದು ತಪಸ್ಸು. ಪ್ರಜ್ಞಾಪೂರ್ಣ ಅಧ್ಯಯನ, ನಿರಂತರ ಸಾಧನೆ, ಶಿಸ್ತು, ಸ್ವಾರ್ಥದ ಲೇಶಮಾತ್ರ ಸ್ಪರ್ಶವೂ ಇಲ್ಲದಂಥ ಪರಮತ್ಯಾಗ ಇವುಗಳಿಂದ ಪುಷ್ಟಿಗೊಂಡ ತಪಸ್ಸು.

"ಸಾರ್ವಜನಿಕ ಕೆಲಸವನ್ನು ಅವರು ಎಂಥ ನಿಷ್ಠೆಯಿಂದ ಕೈಗೊಂಡರು, ಅದಕ್ಕಾಗಿ ತಮ್ಮನ್ನು ಎಂಥ ಪ್ರಜ್ಞಾಪೂರ್ಣ ರೀತಿಯಲ್ಲಿ ಸಜ್ಜುಗೊಳಿಸಿಕೊಂಡರು, ಹೇಗೆ ಅವರು ವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಣೆ ವಿಮರ್ಶೆ ಮಾಡುತ್ತಿದ್ದರು, ಹಾಗೂ ಅವರಿಗೆ ಇದ್ದ ಲೋಕವ್ಯವಹಾರ ದೃಷ್ಟಿ—ಇವು ನಮಗೆ ಅತಿ ಮುಖ್ಯ. (1) ನಾವು ಯಾವುದೇ ಪ್ರಶ್ನೆಯನ್ನು ಎತ್ತಿಕೊಳ್ಳಲಿ, ಇಡೀ ಭಾರತದ ದೃಷ್ಟಿ ನಮಗೆ ಆಧಾರವಾಗಬೇಕು, ಹಿನ್ನೆಲೆ ಆಗಬೇಕು ; (2) ನಮ್ಮ ಪರಾಮರ್ಶೆಯಲ್ಲಿ ರಚನಾತ್ಮಕ ಪ್ರಯತ್ನದಲ್ಲಿ ಗೋಖಲೆಯವರ ಪ್ರಜ್ಞಾಪೂರ್ಣ ಅಧ್ಯಯನ, ವೈಜ್ಞಾನಿಕ ನಿಷ್ಪಕ್ಷಪಾತ ಬುದ್ಧಿ, ವೈಚಾರಿಕ ದೃಷ್ಟಿ ಹಾಗೂ ಅತ್ಯಂತ ಹೊಣೆಗಾರಿಕೆಯ ಭಾವನೆ, ಈ ನಾಲ್ಕು ನಮಗೆ ಉದಾಹರಣೆ ಆಗಿರಬೇಕು—ಗೋಖಲೆಯವರ ಹೆಸರನ್ನು ಇಟ್ಟುಕೊಂಡರೆ ಈ ಎರಡು ಅಂಶಗಳೂ ಸದಾ ನಮಗೆ ದಾರಿದೀಪವಾದಾವು.

"ಗೋಖಲೆಯವರ ಕಾರ್ಯದ ಲಕ್ಷಣಗಳಲ್ಲಿ ಗಮನಿಸಬೇಕಾದ ಮೂರು ಅಂಶಗಳೆಂದರೆ :

(1) ವಿಷಯಗಳ ಕೂಲಂಕಷ ಅಧ್ಯಯನ. ಅಂಕಿ ಅಂಶಗಳ ಅಳತೆಗೆ ಸಿಗಬಹುದಾದ ಲೌಕಿಕ ವಿಷಯ ಮಾತ್ರವಲ್ಲ, ಮನಶ್ಶಾಸ್ತ್ರ, ಪರಂಪರೆಯ ಪ್ರಭಾವ, ಶಿಕ್ಷಣ, ಬಹುಕಾಲದಿಂದ ಇರುವ ರೂಢಿ– ಎಲ್ಲದರ ಅಧ್ಯಯನ.

(2) ವಿಚಾರಗಳ ನ್ಯಾಯಪೂರ್ಣ ಪರಿಶೀಲನೆ. ತಮ್ಮ ವಿಚಾರ ಮಾತ್ರವಲ್ಲ, ತಮ್ಮದಕ್ಕೆ ವಿರೋಧ ಎನಿಸಬಹುದಾದುದನ್ನೂ ಪರಿಶೀಲಿಸುವುದು.

(3) ರಚನಾತ್ಮಕ ದೃಷ್ಟಿ—ಯಾವುದೇ ಸುಧಾರಣೆಯಲ್ಲಾಗಲಿ, ತಾತ್ತ್ವಿಕವಾದ ಪರಿಪೂರ್ಣತೆಗಿಂತ ರಚನಾತ್ಮಕವಾದ ಆಚರಣೀಯವಾದ ಒಳಿತಿನ ಬಗ್ಗೆ ಹೆಚ್ಚು ಗಮನ.'

ಇದು ಡಿವಿಜಿಯವರ ಸೌಮ್ಯವಾದ ಚಿಂತನೆಯ ಸಾರ. ಜೀವನ ದೃಷ್ಟಿ ಅಂತೆಯೆ ಗೋಖಲೆ ಸಂಸ್ಥೆ ಡಿವಿಜಿಯವರ ಜೀವನದ ಸಾರ ಸರ್ವಸ್ವ ಫಲ !

ಸಂಸ್ಥೆ ಮೊದಲು ಬಸವನಗುಡಿಯ ಒಂದು ಖಾಸಗಿ ಮನೆಯಲ್ಲಿತ್ತು. ಬರಬರುತ್ತ ಕೆಲಸ ಹೆಚ್ಚಿತು, ಪ್ರಭಾವ ಬೆಳೆಯಿತು. 1949ರಲ್ಲಿ ಬೆಂಗಳೂರು ನಗರ ಸಭೆ ಒಂದು ನಿವೇಶನ ನೀಡಿತು. ಈಗ ಇರುವ ಕಟ್ಟಡ ಸಿದ್ಧವಾಯಿತು. ಪುಸ್ತಕ ಭಂಡಾರ, ಸಭಾಂಗಣ, ವಿದ್ಯಾರ್ಥಿ ವಸತಿ ರೂಪುಗೊಂಡವು. ಈ ಕಾರ್ಯದಲ್ಲಿ ಕೈನೆರವಿಗೆ ಬಂದುದು ಡಿವಿಜಿ ಅವರ ಅಪಾರ ಜನಪ್ರಿಯತೆ, ಜನಪೂಜ್ಯತೆ, ಅವರ ದೀರ್ಘಕಾಲದ ಸೇವೆ ಅವರಿಗೆ ಸಂಪಾದಿಸಿ ಕೊಟ್ಟಿದ್ದ ಅಪಾರ ಮಿತ್ರವರ್ಗ. ಅನೇಕ ಹಿರಿಯರು, ಮಿತ್ರರು ಧನಸಂಗ್ರಹಣೆ ಮಾಡಿದರು, ಅಗತ್ಯವಾದ ಸಾಮಗ್ರಿಗಳನ್ನು ಒದಗಿಸಿದರು ಗುಬ್ಬಿ ವೀರಣ್ಣನವರು ನಾಟಕ ಆಡಿ ಕಾಣಿಕೆ ಇತ್ತರು. ಸಂಗೀತ ವಿದುಷಿ ಎಂ.ಎಸ್. ಸುಬ್ಬುಲಕ್ಷ್ಮಿ ಸಹಾಯಾರ್ಥ ಕಚೇರಿ ನಡೆಸಿ ದೊಡ್ಡ ಮೊತ್ತದ ಕಾಣಿಕೆಯಿತ್ತರು. ಅವರೂ ಅವರ ಪತಿ ಸದಾಶಿವಂ ಅವರೂ ಡಿವಿಜಿ ಅವರ ಅಂತರಂಗದ ಸ್ನೇಹಿತರು. 29–7–1956ರಂದು ಸಂಸ್ಥೆ ಈ ತನ್ನ ಭವನದಲ್ಲಿ ನೆಲೆಗೊಂಡಿತು. 1915ರಲ್ಲಿ ಗಾಂಧೀಜಿ ಅನಾವರಣ ಮಾಡಿದ್ದ ಗೋಖಲೆಯವರ ಭವ್ಯಚಿತ್ರ ಇಂದಿಗೂ ಇಲ್ಲಿ ವಿರಾಜಮಾನವಾಗಿದೆ. ಆ ಇಬ್ಬರೂ ಮಹಾಪುರುಷರ ದಿವ್ಯ ಸ್ಮರಣೆಯನ್ನು ಮಾಡಿಕೊಡುತ್ತಿದೆ.

ಗೋಖಲೆ ಸಂಸ್ಥೆಯ ವೇದಿಕೆ ಅತ್ಯುನ್ನತ. ದೇಶ ವಿದೇಶಗಳ ವಿದ್ವಾಂಸರು, ಕಲಾವಿದರು, ಸಾರ್ವಜನಿಕ ಮುಖಂಡರು ಬಂದು ಆ ವೇದಿಕೆಯಲ್ಲಿ ಕಾರ್ಯಕ್ರಮ

ನಡೆಸಿಕೊಟ್ಟಿದ್ದಾರೆ. ಅಲ್ಲಿನ ತರುಣ ಶಿಷ್ಯವರ್ಗ ನಗರದ ಹಲವಾರು ಸಮಸ್ಯೆಗಳ ಅಧ್ಯಯನ ನಡೆಸಿದೆ. ಪೌರಸಮಸ್ಯೆಗಳನ್ನು ಪರಿಶೀಲಿಸಿ ಪರಿಹಾರಕ್ಕೆ ಪ್ರಯತ್ನ ಮಾಡಿದೆ. ವಾರವಾರವೂ ನಡೆಯುವ ವ್ಯಾಸಂಗಗೋಷ್ಠಿ ಅನೇಕ ತರುಣರಿಗೆ ರಾಮಾಯಣ, ಭಾರತ, ಗೀತೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಕಾಳಿದಾಸ ಇತ್ಯಾದಿ ಮಹಾ ಗ್ರಂಥಗಳನ್ನು ಮಹಾಕವಿಗಳನ್ನು ಪರಿಚಯಿಸಿಕೊಟ್ಟಿದೆ. ಅಲ್ಲಿರುವ ವ್ಯಾಸ ವಾಲ್ಮೀಕಿಗಳ ಪ್ರತಿಮೆಗಳು ಭಾರತದ ಸಾಂಸ್ಕೃತಿಕ ಆಧ್ಯಾತ್ಮಿಕ ಮಹಾಸ್ರೋತಗಳಾದ ಭಾರತ ರಾಮಾಯಣಗಳ ಸಂಕೇತಗಳಾಗಿ ಸ್ಫೂರ್ತಿಯ ಸೆಲೆ ಆಗಿವೆ. ಆ ಇಬ್ಬರು ರಾಷ್ಟ್ರೀಯ ಋಷಿಕವಿಗಳ ವಾರ್ಷಿಕ ಸ್ಮರಣೆಗಾಗಿ ಪ್ರತ್ಯೇಕ ನಿಧಿಯ ವ್ಯವಸ್ಥೆಯಾಗಿದೆ. ಅಲ್ಲಿನ ಸಂಸ್ಕೃತ ತರಗತಿಗಳು, ಗಮಕ ತರಗತಿಗಳು ಜನಪ್ರಿಯವಾಗಿವೆ. ಸಂಸ್ಥೆಯಲ್ಲಿ ಅನೇಕ ದತ್ತಿ ಉಪನ್ಯಾಸಗಳು ನಡೆಯುತ್ತವೆ ದೇಶವಿದೇಶಗಳ ವಿದ್ವಾಂಸರು ಅದಕ್ಕಾಗಿ ಬರುತ್ತಾರೆ. ಸಂಸ್ಕೃತ ಆಯೋಗ, ಧನ ಆಯೋಗಗಳಿಗೆ ಮನವಿ ಸಿದ್ಧಗೊಳಿಸುವ ಒಪ್ಪಿಸುವ ಕೆಲಸ ಆಗಿದೆ. ಸಾರ್ವಜನಿಕ ಕುಂದುಕೊರತೆಗಳನ್ನು ದಾಖಲು ಮಾಡಿಕೊಂಡು ಸಂಬಂಧಪಟ್ಟ ಆಡಳಿತ ವರ್ಗಕ್ಕೆ ತಿಳಿಸಿ, ಪರಿಹರಿಸುವ ಪ್ರಯತ್ನ ನಡೆದಿದೆ. ಬಸ್ ಸೌಕರ್ಯ, ಆಹಾರ ಧಾನ್ಯಗಳ ಬೆಲೆ ಏರಿಕೆ, ಬೀದಿ ದೀಪ, ಅಂಚೆ ತಂತಿ ವ್ಯವಸ್ಥೆ, ಧ್ವನಿವರ್ಧಕಗಳ ಹಾವಳಿ, ಪೊಲೀಸು ಠಾಣೆ, ಮತದಾನದ ಹಕ್ಕು, ಉದ್ಯಾನಗಳು, ರಸ್ತೆ ರಿಪೇರಿ, ಅಂಗಡಿ ವ್ಯಾಪಾರ ವಹಿವಾಟುಗಳಿಂದ ಉಂಟಾಗುವ ಧೂಳು ಇತ್ಯಾದಿ ಮಲಿನತೆ–ಹೀಗೆ ನಾನಾ ಬಗೆಯ ಸಮಸ್ಯೆಗಳನ್ನು ಎತ್ತಿಕೊಂಡು ಬಗೆಹರಿಸುವ ಪ್ರಯತ್ನ ನಡೆದಿದೆ. ಪೌರ ಸಮಸ್ಯೆಗಳ ಪ್ರತ್ಯಕ್ಷ ಅಧ್ಯಯನಕ್ಕಾಗಿ ವ್ಯಾಸಂಗ ಗೋಷ್ಠಿಯ ಸದಸ್ಯರು ತಂಡ ತಂಡವಾಗಿ ನಗರದ ನಾನಾ ಬಡಾವಣೆಗಳಲ್ಲಿ ಓಡಾಡಿ, ವಿಷಯ ಸಂಗ್ರಹಿಸಿ ಅಧ್ಯಯನ ಮಾಡಿ ವರದಿಗಳನ್ನು ತಯಾರಿಸಿ ನಗರಸಭೆಗೆ ಅರ್ಪಿಸಿದ್ದುಂಟು.

ರಾಷ್ಟ್ರೀಯ ಅಂತಾರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ಸಂಕಿರಣಗಳು ನಡೆದಿವೆ. ಆರ್ಥಿಕ ವಿಷಯ, ವಿಜ್ಞಾನದ ವಿಷಯ, ರಾಜಕೀಯ, ಶಿಕ್ಷಣ, ಶಾಸನಗಳು, ಸಾರ್ವಜನಿಕ ಸೌಕರ್ಯಗಳು—ಮೊದಲಾದ ವಿಷಯಗಳ ಅಧ್ಯಯನಕ್ಕಾಗಿಯೆ ಪ್ರತ್ಯೇಕ ಸಮಿತಿಗಳು ರಚನೆಯಾಗಿ ವಿಷಯ ವಿಮರ್ಶೆ ನಡೆದಿದೆ. 1960ರಲ್ಲಿ ಸಂಸ್ಥೆ ಪೌರ ಕಾರ್ಯಕರ್ತರ ಒಂದು ಸಮ್ಮೇಳನವನ್ನೇ ನಡೆಸಿತು. ದಿವಾನ್ ಎನ್. ಮಾಧವರಾಯರ ಅಧ್ಯಕ್ಷತೆಯಲ್ಲಿ ಹಲವಾರು ಪ್ರಮುಖ ಪೌರ ಸಮಸ್ಯೆಗಳನ್ನು ಸಮ್ಮೇಳನ ಪರಿಶೀಲಿಸಿತು. ಅವುಗಳನ್ನು ಪುಸ್ತಕವಾಗಿಯೂ ಪ್ರಕಟಿಸಿತು.

ಗೋಖಲೆ ಸಂಸ್ಥೆಯ ಪುಸ್ತಕ ಭಂಡಾರ, ಬೆಂಗಳೂರಿನ ಒಂದು ಪ್ರಮುಖವೂ, ವಿಶಿಷ್ಟವೂ ಆದ ಜ್ಞಾನ ಭಂಡಾರಗಳಲ್ಲಿ ಒಂದು. ವಿಶ್ವೇಶ್ವರಯ್ಯ, ದಿವಾನ್ ಬಹದ್ದೂರ್ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್, ವಿದ್ವಾನ್ ಛಪ್ಪಲ್ಲಿ ವಿಶ್ವೇಶ್ವರ ಶಾಸ್ತ್ರಿ, ಕೆ. ರಂಗಯ್ಯಂಗಾರ್, ಕೆ.ಆರ್. ಕಾರಂತ ಮೊದಲಾದ ಅನೇಕ ಮಹನೀಯರ ಅಮೂಲ್ಯ ಗ್ರಂಥ ಸಂಗ್ರಹಗಳು ಇಲ್ಲಿಗೆ ಸೇರ್ಪಡೆಯಾಗಿವೆ. 'ಹಿಂದೂ' ಮುಂತಾದ ಹಲವು ಪತ್ರಿಕೆಗಳ ಹಳೆಯ ಸಂಪುಟಗಳು ಇಲ್ಲಿನ ಅಮೂಲ್ಯ ಆಸ್ತಿ. ಸಂಶೋಧಕರಿಗೆ ಸುಗ್ಗಿ. ಅಧ್ಯಯನಗಳಿಗೆ ಆಕರ.

'ಸಾರ್ವಜನಿಕ' ಮಾಸಪತ್ರಿಕೆ ಸಂಸ್ಥೆಯ ಮುಖಪತ್ರ ಮಾತ್ರವಲ್ಲ, ವರದಿ ಮಾತ್ರವಲ್ಲ, ಅನೇಕ ಉನ್ನತಮಟ್ಟದ ಲೇಖನಗಳನ್ನು ಒಳಗೊಂಡ ಜ್ಞಾನವಾಹಿನಿಯೂ ಆಗಿದೆ. ಸಂಸ್ಥೆಯಲ್ಲಿ ನಡೆಯುವ ಉಪನ್ಯಾಸಾದಿಗಳು, ಚರ್ಚೆಗಳು, ಗೋಷ್ಠಿಗಳು, ಸಾಹಿತ್ಯ–ಸಂಗೀತ ಕಾರ್ಯಕ್ರಮಗಳು ವೈವಿಧ್ಯಪೂರ್ಣ, ವಿಚಾರ ಪರಿಷ್ಕೃತ. ಮನೋವಿಕಾಸ, ಮನರಂಜನೆ ಎರಡನ್ನೂ ಸಾಧಿಸುವಂಥವು. ಸಂಸ್ಥೆಯ ಹಲವಾರು ಪ್ರಕಟಣೆಗಳು ಸಂಗ್ರಹಯೋಗ್ಯ.

ಪ್ರಜಾಪ್ರಭುತ್ವ ಬಂದಿದೆ. ಅದನ್ನು ನಿರ್ವಹಿಸಲು ನಮ್ಮ ಜನ ಸಜ್ಜಾಗಬೇಕು, ಅದಕ್ಕಾಗಿ ಅವರ ಮನಸ್ಸು ಹೃದಯ ಹದಗೊಳ್ಳಬೇಕು. ಈ ಕೆಲಸ ಮಾಡಲು ಇಂಥ ಸಂಸ್ಥೆ ಇರಬೇಕು. ಡಿವಿಜಿಯವರ ಈ ಹಂಬಲ ಗೋಖಲೆ ಸಂಸ್ಥೆಯಲ್ಲಿ ಈಡೇರುತ್ತಿದೆ.

"ಸಾರ್ವಜನಿಕ ವಿಷಯಗಳ ಬಗ್ಗೆ ನಾಡಿನಲ್ಲಿ ವಿಚಾರಪ್ರಕ್ರಿಯೆಯನ್ನು ಉತ್ತೇಜಿಸುವುದು, ಪರೀಕ್ಷಿಸುವುದು ಹಾಗೂ ಪರಿಶುದ್ಧಗೊಳಿಸುವುದು – ಇದೇ ಈ ಸಂಸ್ಥೆಯ ಸೇವೆ" ಎಂದು 1930ರಲ್ಲೆ ಕಲ್ಪಿಸಿಕೊಂಡಿದ್ದರು ಡಿವಿಜಿ ಹಾಗೂ ಅವರ ಮಿತ್ರವೃಂದ. ಗೋಖಲೆ ಸಂಸ್ಥೆಯ ಬೆಳವಣಿಗೆ, ಸಾಧನೆ ಈ ಕಲ್ಪನೆ ಸಾರ್ಥಕಗೊಂಡಿರುವುದನ್ನು ಶಿಲಾಶಾಸನದಂತೆ ಸಾರುತ್ತದೆ. ಈಗ ಮಲ್ಲೇಶ್ವರದಲ್ಲೂ ಸಂಸ್ಥೆಯ ಶಾಖೆ ರೂಪುಗೊಂಡಿದೆ.

ಗೋಖಲೆ ಸಂಸ್ಥೆಯ ಜೀವ–ಜೀವಾಳ ಎರಡೂ ಡಿವಿಜಿ ಅವರೇ. ಸಂಸ್ಥೆಯ ಆರಂಭದ ದಿನದಿಂದ ಹಿಡಿದು ತಮ್ಮ ಉಸಿರು ಇರುವವರೆಗೂ ಅವರೇ ಅದರ ಗೌರವ ಕಾರ್ಯದರ್ಶಿ. ಗೋಖಲೆ ಸಂಸ್ಥೆಯೆ ಡಿವಿಜಿಯವರ ಎರಡನೆಯ ಮನೆ. ಹೆಚ್ಚು ಕಡಿಮೆ ದಿನವೂ ಅಲ್ಲಿಗೆ ಹಾಜರು. ಪ್ರತಿ ಸಭೆಗೂ ಹಾಜರು. ಪ್ರತಿ ವ್ಯಾಸಂಗ ಗೋಷ್ಠಿಯಲ್ಲೂ ವಿದ್ಯಾರ್ಥಿಯಂತೆಯೆ ಹಾಜರು. ತರುಣರ ಜೊತೆಯಲ್ಲಿ ತಾವೂ ತರುಣರಾಗಿ ಗ್ರಂಥಾಭ್ಯಾಸ, ವಿಷಯಾವಲೋಕನದಲ್ಲಿ ಮಗ್ನರಾಗುವರು.

ವಾರ ವಾರವೂ ಗೋಷ್ಠಿಗಳಲ್ಲಿ ಜಗತ್ತಿನ ಮಹಾಕೃತಿಗಳ ಬಗ್ಗೆ ಪಾಠ ಹೇಳುವರು. ಎಡ್ಮಂಡ್ ಬರ್ಕ್‌ರ ಕೃತಿಯೊ, ಕಾಳಿದಾಸನ ಶಾಕುಂತಲವೊ, ವ್ಯಾಸ ವಾಲ್ಮೀಕಿಗಳ ಕಾವ್ಯವೊ, ಮಿಲ್‌ನ ರಾಜ್ಯಶಾಸ್ತ್ರವೊ, ಪ್ಲೇಟೋನ ತತ್ತ್ವಜ್ಞಾನವೊ, ಬರ್ನಾಡ್ ಷಾ ನಾಟಕವೊ, ರಸ್ಕಿನ್ನನ ಪ್ರಬಂಧವೊ, ಅರಿಸ್ಟಾಟಲನ ಮೀಮಾಂಸೆಯೊ, ಭರ್ತೃ ಹರಿಯ ಶತಕಗಳೊ, ಮನುಧರ್ಮಶಾಸ್ತ್ರವೊ, ಉಪನಿಷತ್ತುಗಳೊ, ಭವಭೂತಿಯ ನಾಟಕಗಳೊ—ಎಲ್ಲದರ ಅಭ್ಯಾಸವನ್ನು ಡಿವಿಜಿ ಅವರೇ ಮಾಡುವರು, ತರುಣ ಮಿತ್ರರಿಗೆ ಮಾಡಿಸುವರು. ಬೇಸರವಿಲ್ಲ, ಶ್ರಮದ ಪರಿವೆಯಿಲ್ಲ, ಸಮಯದ ಪರಿಗಣನೆಯಿಲ್ಲ—ವ್ರತನಿಷ್ಠೆ, ತದೇಕಚಿತ್ತದ ತಲ್ಲೀನತೆ. ಆ ಗೋಷ್ಠಿಗಳ ಸವಿಯನ್ನು ನೆನೆಸಿಕೊಂಡು ಮೆಲುಕಾಡಿ ಮುದಗೊಳ್ಳುವ ಮಿತ್ರವೃಂದವನ್ನು ಇನ್ನೂ ಕಾಣಬಹುದು. ಗೋಷ್ಠಿಗಳ ಮಹತ್ಫಲವೆಂದರೆ ಡಿವಿಜಿ ಭಗವದ್ಗೀತೆಯನ್ನು ಕುರಿತು ಮಾಡಿದ ಪ್ರವಚನಮಾಲೆ. ಅದು ಧ್ವನಿಮುದ್ರಿತವಾಯಿತು. ಲಿಖಿತರೂಪ ಪಡೆದು 'ಪ್ರಜಾಮತ' ಪತ್ರಿಕೆಯಲ್ಲಿ ಮಾಲೆಯಾಗಿ ಪ್ರಕಟಗೊಂಡಿತು. ಮತ್ತಷ್ಟು ಪರಿಷ್ಕೃತವಾಗಿ "ಜೀವನ ಧರ್ಮಯೋಗ" ಎಂಬ ಹೆಬ್ಬೊತ್ತಿಗೆಯಾಗಿ ಪ್ರಕಟಗೊಂಡಿತು. ವಿಶ್ವಮಾನ್ಯವಾಯಿತು. ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರವನ್ನು ತಂದುಕೊಟ್ಟಿತು.

ತಮ್ಮ ಬದುಕಿನಲ್ಲಿ ಅಮೂಲ್ಯವಾದುದು ಏನಿತ್ತೊ ಆ ಸಮಯ, ಚಿಂತನ, ಚೈತನ್ಯ ಎಲ್ಲವನ್ನೂ ಡಿವಿಜಿ ಗೋಖಲೆ ಸಂಸ್ಥೆಗೆ ಮೀಸಲಿಟ್ಟರು. ಮಾತ್ರವಲ್ಲ, ತಮ್ಮ ಅಪರೂಪದ ಗ್ರಂಥರಾಶಿಯನ್ನು ಕೊಟ್ಟರು. ತಮ್ಮ ಬರೆಹಗಳ ಹಕ್ಕನ್ನೆಲ್ಲ ಸಂಸ್ಥೆಗೆ ವಹಿಸಿಬಿಟ್ಟರು. ಅವರ 81ನೆಯ ಹುಟ್ಟಿದ ಹಬ್ಬದ ಸಂದರ್ಭದಲ್ಲಿ ದೊಡ್ಡ ಸಾರ್ವಜನಿಕ ಸನ್ಮಾನದಲ್ಲಿ ಅವರಿಗೆ ಕೊಡಲಾದ ಹೆಚ್ಚು ಕಡಿಮೆ ಒಂದು ಲಕ್ಷ ರೂಪಾಯಿಗಳ ನಿಧಿಯನ್ನೂ ಸಂಸ್ಥೆಗೆ ಕೊಟ್ಟುಬಿಟ್ಟರು. ಗೀತಾಭಾಷ್ಯಕ್ಕೆ ಅಕಾಡೆಮಿ ಪ್ರಶಸ್ತಿಯಾಗಿ 5000 ರೂ ಬಂತು. ಅದನ್ನು ಪಡೆಯಲು ಡಿವಿಜಿ ಒಪ್ಪಲೇ ಇಲ್ಲ. ಕೊನೆಗೆ ಗೆಳೆಯರ ಒತ್ತಾಯಕ್ಕೆ ಮಣಿದು ಒಪ್ಪಿಕೊಂಡರು. ಅದೂ ಒಂದು ಷರತ್ತಿನ ಮೇಲೆ. ಆ ಹಣ ಗೋಖಲೆ ಸಂಸ್ಥೆಗೇ ಸೇರಬೇಕು ಎಂದು. ಅಕಾಡೆಮಿ ಅವರು ಇದ್ದಲ್ಲಿಗೇ ಬಂದು ಅರ್ಪಿಸದ ಆ ಪುರಸ್ಕಾರದ ಹಣವನ್ನು ಡಿವಿಜಿ ಒಂದು ನಿಮಿಷವೂ ತಮ್ಮಲ್ಲಿ ಇಟ್ಟುಕೊಳ್ಳಲಿಲ್ಲ. ಗೋಖಲೆ ಸಂಸ್ಥೆಗೆ ಒಪ್ಪಿಸಿಬಿಟ್ಟರು. ಗೋಖಲೆಯವರ "ಸ್ವಾರ್ಥರಾಹಿತ್ಯ"ವನ್ನು ಡಿವಿಜಿ ಬಾಳಿದರು.

ಡಿವಿಜಿಯವರ ಪತ್ರಿಕಾ ವ್ಯವಸಾಯ ಹಿಂದೆಯೆ ನಿಂತುಹೋದುದನ್ನು ನೋಡಿದೆವು. ಗೋಖಲೆ ಸಂಸ್ಥೆ 1949ರಲ್ಲಿ "ಪಬ್ಲಿಕ್ ಅಫೇರ್ಸ್" (ಸಾರ್ವಜನಿಕ)

ಎಂಬ ಮುಖಪತ್ರವನ್ನು ಆರಂಭಿಸಿತು. ಅದಕ್ಕೆ ಡಿವಿಜಿಯವರೇ ಸಂಪಾದಕರು. ತಿಂಗಳು ತಿಂಗಳೂ ಅವರು ಬರೆಯುತ್ತಿದ್ದ ಟಿಪ್ಪಣಿಗಳು ಸಾರ್ವಜನಿಕ ವಿಷಯಗಳ ಬಗ್ಗೆ ಅವರಿಗೆ ಇದ್ದ ಕಾಳಜಿ, ವಿಷಯ ವಿಮರ್ಶೆಯಲ್ಲಿನ ಸಮತೂಕ ಹಾಗೂ ಸಮನ್ವಯ ಬುದ್ಧಿಗಳನ್ನು ಬಿಂಬಿಸುತ್ತವೆ.

ಅವರ ಕೊನೆಯ ಒಂದೆರಡು ವರ್ಷಗಳಲ್ಲಿ ಹಾಸಿಗೆ ಹಿಡಿದು ಮಲಗಿರ ಬೇಕಾಯಿತು. ಆಗ ಮನೆಗೇ ಮಿತ್ರರನ್ನು ಕರಸಿಕೊಂಡು ಟಿಪ್ಪಣಿಗಳನ್ನು ಹೇಳಿ ಬರೆಸುತ್ತಿದ್ದರು. ಪತ್ರಿಕೆಯ ಹಾಗೂ ಸಂಸ್ಥೆಯ ಆಗುಹೋಗುಗಳ ಬಗೆಗೆ ಸೂಚನೆಗಳನ್ನೂ ಸಲಹೆಗಳನ್ನೂ ಕೊಡುತ್ತಿದ್ದರು. ಮಿತ್ರರಿಗೆ "ಅದು ಯಜಮಾನರ ಆಜ್ಞೆ". 1975 ಸೆಪ್ಟೆಂಬರ್‌ವರೆಗೂ ಪತ್ರಿಕೆಗೆ ಡಿವಿಜಿಯವರೇ ಸಂಪಾದಕರು.

ಮೈಸೂರಿನ ಹಿಂದಿನ ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಹೇಳಿದ್ದರು, "ಡಿವಿಜಿ ಎಂದರೆ ಗೋಖಲೆ ಸಂಸ್ಥೆ..... ಗೋಖಲೆ ಸಂಸ್ಥೆ ಎಂದರೆ ಡಿವಿಜಿ."

ಡಿವಿಜಿಯವರ ಆತ್ಮ ಗೋಖಲೆ ಸಂಸ್ಥೆಯಲ್ಲಿ ನೆಲೆಗೊಂಡಿದೆ. ಸ್ಫೂರ್ತಿಯ ಬೆಳಕನ್ನು ಚೆಲ್ಲುತ್ತಿದೆ.

# 11. ಗೌರವ–ಪ್ರಶಸ್ತಿಗಳು

ಲೋಕದಲ್ಲಿ ಗೌರವವನ್ನೂ, ಪ್ರಶಸ್ತಿಗಳನ್ನೂ ಬೆನ್ನಟ್ಟಿ ಹೋಗುವವರನ್ನು ಹೆಚ್ಚು ಕಾಣಬಹುದು ಈಗ. ಗೌರವ ಪ್ರಶಸ್ತಿಗಳೇ ಅರಸಿ ಬರುವಂಥವರು ಅಪರೂಪ. ಎರಡನೆಯ ಗುಂಪಿಗೆ ಸೇರಿದವರು ಡಿವಿಜಿ.

"ಉಪಕಾರಿ ನಾನು, ಎನ್ನುಪಕೃತಿಯು ಜಗಕೆಂಬ
ವಿಪರೀತ ಮತಿಯನುಳಿದು, ಸುಫಲ ಸುಮ
ಭರಿತ ಪಾದಪದಂತೆ ನೈಜಮಾದೊಳ್ಪಿನಿಂ
ಬಾಳ್ವವೊಲು – ವನಸುಮದೊಳೆನ್ನ
ಜೀವನವು ವಿಕಸಿಸುವಂತೆ ಮನವನನುಗೊಳಿಸು
ಗುರುವೇ, ಹೇ ದೇವ''

ಡಿವಿಜಿಯವರ ಪ್ರಸಿದ್ಧಪದ್ಯ ಈ ವನಸುಮ. ಈ ಅನಾಸಕ್ತಯೋಗಭಾವನೆ ಅವರ ಪದ್ಯಗಳಲ್ಲಿ ಮಾತ್ರವಲ್ಲ, ಅವರ ಬದುಕಿನಲ್ಲಿಯೂ ತುಳುಕುತ್ತಿತ್ತು. ತಾವು ಮಾಡಿದ ಸೇವೆಗಾಗಿ ಬರುತ್ತಿದ್ದ ಅನೇಕ ಗೌರವ ಪ್ರಶಸ್ತಿಗಳನ್ನು ಅವರು ಬೇಡ ಎನ್ನುತ್ತಿದ್ದರು.

ಶ್ರೀ ವೈಷ್ಣ ಆಚಾರ್ಯರಲ್ಲಿ ಒಬ್ಬರು ಶ್ರೀ ವೇದಾಂತ ದೇಶಿಕರು. ಜ್ಞಾನವೈರಾಗ್ಯ ಭೂಷಣರು ! ಕಡು ಬಡವರು. ಅವರನ್ನು ವಿಜಯನಗರ ಸಾಮ್ರಾಜ್ಯದ ಮಂತ್ರಿಯಾಗಿ ಮಾಡಿಕೊಂಡು ಅವರ ಜ್ಞಾನದ ಫಲವನ್ನು ರಾಜ್ಯನಿರ್ವಹಣೆಗೆ ತೊಡಗಿಸಬೇಕು ಎನ್ನುವುದು ಶ್ರೀ ವಿದ್ಯಾರಣ್ಯರ ಇಚ್ಛೆ. ಆಹ್ವಾನ ದೇಶಿಕರ ಗುಡಿಸಿಲಿಗೇ ಹೋಯಿತು, ರಾಜಮರ್ಯಾದೆ ಖಿಲ್ಲತ್ತು ಸಮೇತ. ದೇಶಿಕರು 'ವೈರಾಗ್ಯ ಪಂಚಕ' ಎಂಬ ಐದು ಪದ್ಯಗಳನ್ನು ರಚಿಸಿ ಕೊಟ್ಟು, ಎಲ್ಲ ಮರ್ಯಾದೆಯನ್ನೂ ಹಿಂದಕ್ಕೆ ಕಳಿಸಿಬಿಟ್ಟರು.

ಸಂಗೀತ ಸಾಮ್ರಾಟರಾದ ಶ್ರೀ ತ್ಯಾಗರಾಜರ ಮನೆ ಬಾಗಿಲಿಗೆ ತಂಜಾವೂರು ದೊರೆ ವಸ್ತ್ರಭೂಷಣ ಉಡುಗೊರೆಗಳನ್ನು ಕಳಿಸಿ ಆಹ್ವಾನಿಸಿದ. ತ್ಯಾಗರಾಜರು 'ಇದೆಲ್ಲ ನನಗೇಕೆ, ಒಲ್ಲೆ' ಎಂದರು. 'ಈ ನಿಧಿ ಸುಖವೇ, ರಾಮನ ಸನ್ನಿಧಿ ಸೇವೆ

ಸುಖವೇ' ಎಂದು ಹಾಡಿದರು. ಮೌರ್ಯಸಾಮ್ರಾಜ್ಯವನ್ನು ಸ್ಥಾಪಿಸಿದ ಚಾಣಕ್ಯ ಇದ್ದುದು ಗುಡಿಸಲಿನಲ್ಲಿ. ಅಮಾತ್ಯರಾಕ್ಷಸನಿಗೆ ರಾಜ್ಯ ಒಪ್ಪಿಸಿ ತಮ್ಮ ತಪಸ್ಸಿಗೆ ನಡೆದುಬಿಟ್ಟರು. ವಿಜಯನಗರ ಸಾಮ್ರಾಜ್ಯ ಪ್ರತಿಷ್ಠಾಪನಾಚಾರ್ಯ1 ಮಾಡಿದ್ದೂ ಅದೇ. ಸ್ವತಂತ್ರ ಭಾರತದ ತಂದೆ ಎನಿಸಿಕೊಂಡ ಗಾಂಧೀಜಿ, ಸ್ವಾತಂತ್ರ್ಯ ಬಂದ ದಿನ ಯಾವ ಸಂತೋಷದ ಸಮಾರಂಭದಲ್ಲೂ ಇರಲಿಲ್ಲ. ಸಮಸ್ತ ಅಧಿಕಾರ ಪ್ರಾಪ್ತವಾಗುವ ಸಂಭವ ಇದ್ದರೂ, ಯಾವುದರ ಹತ್ತಿರಕ್ಕೂ ಹೋಗಲಿಲ್ಲ. ದೂರದ ಹಳ್ಳಿಗಾಡಿನಲ್ಲಿ ನೊಂದ ಜನರ ಕಣ್ಣೀರನ್ನು ಒರೆಸುತ್ತ ಒಂಟಿಯಾಗಿ ಅಲೆಯುತ್ತಿದ್ದರು.

ಭಾರತದ ಪರಂಪರೆಯಲ್ಲಿ ಇಂಥ ತ್ಯಾಗದ ಪ್ರಸಂಗ ಹಲವಾರು. ಅನಾಸಕ್ತ ಕರ್ಮಯೋಗ ಇಲ್ಲಿ ಜೀವಂತ ಮೌಲ್ಯವಾಗಿ ಬಂದಿದೆ. ಭೋಗಕ್ಕಿಂತ ತ್ಯಾಗಕ್ಕೆ ಮಹತ್ವ ಕೊಡುವುದು ನಮ್ಮ ಸಂಸ್ಕೃತಿಯ ವೈಶಿಷ್ಟ್ಯ.

ಡಿವಿಜಿ ಇದೇ ಮೌಲ್ಯವನ್ನು ನಂಬಿದ್ದರು, ಬಾಳಿದರು.

ಅವರ ದೀರ್ಘ ಸೇವೆ ಸಾಧನೆಗಳ ದೆಸೆಯಿಂದ ಅವರಿಗೆ ಅನೇಕ ಗೌರವ ಪ್ರಶಸ್ತಿಗಳು, ಸ್ಥಾನಮಾನದ ಆಹ್ವಾನಗಳು, ಮನೆಯ ಬಾಗಿಲಿಗೇ ಬರುತ್ತಿದ್ದವು. ಡಿವಿಜಿ ಅವಕ್ಕೆಲ್ಲ ಒಲಿಯಲೇ ಇಲ್ಲ. ಕೆಲವನ್ನು ಒಪ್ಪಿಕೊಳ್ಳಬೇಕಾದುದು ಒತ್ತಾಯದಿಂದಲೇ.

ದಿವಾನ್ ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಅವರು ಡಿವಿಜಿಯವರ ಬಗ್ಗೆ ತಳೆದಿದ್ದ ಗೌರವ ವಿಶ್ವಾಸಗಳನ್ನು ನೋಡಿಯಾಗಿದೆ. ಆ ಕಾಲದಲ್ಲಿ ಡಿವಿಜಿ ಏನು ಬಯಸಿದ್ದರೂ ಸಿಗುತ್ತಿತ್ತು. ಬಯಸುವುದೂ ಬೇಡ, ತಾನಾಗಿಯೆ ಬಂದುದನ್ನು ಒಪ್ಪಿಕೊಂಡಿದ್ದರೂ ಆಗುತ್ತಿತ್ತು. ಒಪ್ಪಿದ್ದರೆ ಆ ದಿವಾನರುಗಳ ಕಾಲದಲ್ಲಿ ಸರ್ಕಾರದಲ್ಲಿ ಉನ್ನತ ಸ್ಥಾನ, ಲಾಭದಾಯಕ ಸ್ಥಾನಮಾನ ಕಟ್ಟಿಟ್ಟ ಬುತ್ತಿ ಆಗಿತ್ತು. ಸಲಹೆಗಾರರ ಸ್ಥಾನ ಬಾಗಿಲಿಗೆ ಬಂದಿತ್ತು. ಡಿವಿಜಿ ಮನಸೋಲಲಿಲ್ಲ. ತಾಪೇದಾರಿಗೆ ಒಪ್ಪಲಿಲ್ಲ.

ಆದರೆ ಅವರಿಂದ ದೀರ್ಘವಾದ ಅನರ್ಘ್ಯವಾದ ಸೇವೆಯನ್ನು ಪಡೆದ ಸಮಾಜ ಸುಮ್ಮನಿರುವುದು ಸಾಧ್ಯವೇ? ಕೃತಜ್ಞತೆಯನ್ನು ತೋರಿಸಲೇಬೇಕಲ್ಲ! ಡಿವಿಜಿ ಎಷ್ಟೇ ಬೇಡ ಎಂದರೂ ಬಿಡದೆ ಸಮಾಜ ತನ್ನ ಕೃತಜ್ಞತಾಪೂರ್ವಕ ಗೌರವವನ್ನು ಸಮರ್ಪಿಸಿಯೆ ಸಮರ್ಪಿಸಿತು.

ಬೆಂಗಳೂರು ನಗರಸಭೆ, ಪಠ್ಯಪುಸ್ತಕ ಸಮಿತಿ, ಮೈಸೂರು ನ್ಯಾಯ ವಿಧಾಯಕ ಸಭೆ, ಮೈಸೂರು ವಿಶ್ವವಿದ್ಯಾನಿಲಯದ ಕೌನ್ಸಿಲ್ ಹಾಗೂ ಸೆನೆಟ್ ಸಭೆ ಇವುಗಳ ಸದಸ್ಯತ್ವ; ಕರ್ನಾಟಕ ಪತ್ರಕರ್ತರ ಸಮ್ಮೇಳನ, ಮೈಸೂರು ರಾಜ್ಯ

ಪತ್ರಕರ್ತರ ಸಂಘ, ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಸಮ್ಮೇಳನ ಇವುಗಳ ಅಧ್ಯಕ್ಷತೆ; ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷತೆ–ಮೊದಲಾದ ಸ್ಥಾನಗಳಲ್ಲಿ ಡಿವಿಜಿ ಕೆಲಸ ಮಾಡಿದುದನ್ನೂ ಗೌರವ ಪಡೆದುದನ್ನೂ ಈ ಮೊದಲೇ ಪ್ರಸ್ತಾಪಿಸಲಾಗಿದೆ. ಪತ್ರಿಕಾ ಲೋಕದಲ್ಲಿ ಪತ್ರಕರ್ತರ ಸಮ್ಮೇಳನಾಧ್ಯಕ್ಷತೆ ದೊಡ್ಡ ಗೌರವದ ಸ್ಥಾನ. ಅಂತೆಯೇ ಸಾಹಿತ್ಯ ಲೋಕದಲ್ಲಿ ಸಮ್ಮೇಳನದ ಅಧ್ಯಕ್ಷತೆ. ಎರಡೂ ಕ್ಷೇತ್ರಗಳಲ್ಲಿ ಬೆಟ್ಟದಷ್ಟು ಕೆಲಸ ಮಾಡಿದ ಡಿವಿಜಿಯವರಿಗೆ ಈ ಎರಡೂ ಗೌರವ ಸ್ಥಾನ ದೊರೆತುದು ತೀರಾ ಉಚಿತ. ಆ ಸ್ಥಾನಗಳಿಗೇ ಭೂಷಣ.

ಡಿವಿಜಿ ಯಾವ ಕಾಲೇಜಿನ ಮೆಟ್ಟಲನ್ನೂ ತುಳಿಯಲಿಲ್ಲ. ಅವರ ಗ್ರಂಥಗಳು ಮಾತ್ರ ಕಾಲೇಜುಗಳಲ್ಲಿ ವಿಶ್ವವಿದ್ಯಾನಿಲಯದ ಉನ್ನತ ಅಧ್ಯಯನ ಪೀಠಗಳಲ್ಲಿ ರಾರಾಜಿಸಿದವು. ವಿದ್ವಾಂಸರ ಮನ್ನಣೆಗೆ ಗೌರವಕ್ಕೆ ಪಾತ್ರವಾದವು. ಅಷ್ಟೇ ಅಲ್ಲ, ವಿಶ್ವವಿದ್ಯಾನಿಲಯವೇ ಈ 'ನಪಾಸು' ವ್ಯಕ್ತಿಯನ್ನು ಕರೆಸಿಕೊಂಡು, ತನ್ನ ಅತ್ಯುನ್ನತ ಪ್ರಶಸ್ತಿಯಿಂದ ಗೌರವಿಸಿತು. 1961ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಡಿವಿಜಿ ಅವರಿಗೆ ಗೌರವ ಡಿ ಲಿಟ್ ಪದವಿಯನ್ನು ಸಮರ್ಪಿಸಿದ್ದು ಆ ಸಂದರ್ಭ.

'ಶ್ರೀಮದ್ಭಗವದ್ಗೀತಾ ತಾತ್ಪರ್ಯ' ಅಥವಾ 'ಜೀವನ ಧರ್ಮ ಯೋಗ' ಡಿವಿಜಿಯವರ ಮಹಾ ಕೃತಿ. ಅವರ ಚಿಂತನ ಅನುಭವಗಳ ಸಾರ ಸರ್ವಸ್ವ. ಕನ್ನಡ ವಿಚಾರಲೋಕಕ್ಕೆ ಉನ್ನತ ಕೊಡುಗೆ. ಆ ಗ್ರಂಥ ಕೇಂದ್ರ ಸಾಹಿತ್ಯ ಅಕಾಡೆಮಿಯ ಮನ್ನಣೆ ಪಡೆಯಿತು. 1967ರಲ್ಲಿ ಕನ್ನಡದ ಅತ್ಯುತ್ತಮ ಕೃತಿ ಎಂದು ಅದಕ್ಕೆ ಪ್ರಶಸ್ತಿ ನೀಡಲಾಯಿತು. ಗೆಳೆಯರ ಒತ್ತಾಯಕ್ಕೆ ಮಣಿದು, ಅಕಾಡೆಮಿಯ ಕಾರ್ಯದರ್ಶಿ ಶ್ರೀ ಕೃಷ್ಣ ಕೃಪಲಾನಿಯವರ ವಿಶ್ವಾಸದ ಆಗ್ರಹವನ್ನು ಮನ್ನಿಸಿ ಡಿವಿಜಿ ಆ ಪ್ರಶಸ್ತಿಯನ್ನು ಸ್ವೀಕರಿಸಿದರು. ಈ ಕನ್ನಡ ಸಾರಸ್ವತ ಭೀಷ್ಮರನ್ನು ಗೌರವಿಸಲು ಅಕಾಡೆಮಿಯೆ ಅವರ ಮನೆಯ ಬಾಗಿಲಿಗೆ ಬಂದಿತ್ತು.

18–1–1970ರಲ್ಲಿ ಅವರ ಜನ್ಮದಿನ. ಅವರನ್ನು ಸನ್ಮಾನಿಸಲು ದೊಡ್ಡ ಸಮಿತಿಯೆ ಏರ್ಪಾಟಾಗಿತ್ತು. ಬೆಂಗಳೂರು ಪುರಭವನದಲ್ಲಿ ಭಾರಿ ಸಭೆ. ಮುಖ್ಯಮಂತ್ರಿ ವೀರೇಂದ್ರ ಪಾಟೀಲರ ಅಧ್ಯಕ್ಷತೆಯಲ್ಲಿ ಸನ್ಮಾನ. ಶ್ರೀಮತಿ ಎಂ.ಎಸ್. ಸುಬ್ಬುಲಕ್ಷ್ಮಿಯವರ ಸ್ಮರಣೀಯ ಗಾಯನ. ಒಂದು ಲಕ್ಷ ರೂಗಳ ನಿಧಿ ಸಮರ್ಪಣೆ. ಗಾನ ಡಿವಿಜಿಯ ಹೃದಯವನ್ನು ಸೇರಿತು, ವಿಶ್ವಾಸ ಅವರ ಮನವನ್ನು ಮುಟ್ಟಿತು. ನಿಧಿ ಗೋಖಲೆ ಸಂಸ್ಥೆಯನ್ನು ಸೇರಿತು. ಆ ಷರತ್ತಿನ ಮೇಲೆಯೆ ಡಿವಿಜಿ

"ಸನ್ಮಾನಕ್ಕೆ ತಲೆ ಕೊಟ್ಟದ್ದು."

ಕರ್ನಾಟಕ ರಾಜ್ಯ ಸರ್ಕಾರ ಅವರನ್ನು ಕುರಿತ ಒಂದು ಸಾಕ್ಷ್ಯ ಚಲನಚಿತ್ರವನ್ನು ತಯಾರಿಸಿತು. 1974ರಲ್ಲಿ ಕೇಂದ್ರ ಸರ್ಕಾರ ಅವರಿಗೆ 'ಪದ್ಮಭೂಷಣ' ಬಿರುದನ್ನು ಅರ್ಪಿಸಿತು. ಅದೂ ಮನೆ ಬಾಗಿಲಿಗೇ ಬಂತು. ಅದೇ ವರ್ಷ ಕರ್ನಾಟಕ ಸರ್ಕಾರ ಅವರಿಗೆ 500 ರೂ.ಗಳ ಗೌರವವೇತನವನ್ನು ನೀಡಿತು. ಡಿವಿಜಿ ಒಪ್ಪಿಕೊಳ್ಳಲಿಲ್ಲ, "ಸರ್ಕಾರ ಇಂಥ ಖರ್ಚನ್ನೆಲ್ಲ ಮಾಡತಕ್ಕದ್ದಲ್ಲ" ಎಂದುಬಿಟ್ಟರು!

ಲೌಕಿಕವಾಗಿ ಅವರಿಗೆ ನೆರವು ನೀಡಲು, ಗೌರವ ಸಲ್ಲಿಸಲು ನಡೆದ ಪ್ರಯತ್ನ ಹಲವಾರು. ದಿವಾನರುಗಳಿಂದ ಹಿಡಿದು ಮಿತ್ರರವರೆಗೆ ಶಿಷ್ಯರವರೆಗೆ ಅವರಿಗೆ ಗೌರವ ಸಲ್ಲಿಸಲು ಹಾತೊರೆಯುತ್ತಿದ್ದರು. ಮಹಾರಾಜರೇ ಒಮ್ಮೆ ಅವರ ಮನೆಗೆ ಹಾರ ತುರಾಯಿ ಖಿಲ್ಲತ್ತು ಕಾಣಿಕೆಗಳನ್ನು ಕಳಿಸಿದ್ದರು. ಡಿವಿಜಿ "ನನಗೇಕೆ ಇದೆಲ್ಲ?" ಎಂದು ವಾಪಸು ಕಳಿಸಿಬಿಟ್ಟರು. ಮಹಾರಾಜರಿಗೆ ವಿನಯಪೂರ್ವಕವಾಗಿ ವಂದನೆ ಸಲ್ಲಿಸಿಬಿಟ್ಟರು.

ಅನ್ನದಾತುರಕಿಂತ ಚಿನ್ನದಾತುರ ತೀಕ್ಷ್ಣ
ಚನ್ನದಾತುರಕಿಂತ ಹೆಣ್ಣುಗಂಡೊಲವು
ಮನ್ನಣೆಯದಾಹವೀಯೆಲ್ಲಕಂ ತೀಕ್ಷ್ಣತಮ
ತಿನ್ನುವುದದಾತ್ಮವನ—ಮಂಕುತಿಮ್ಮ.

ಮನ್ನಣೆಯ ದಾಹಕ್ಕೆ ಡಿವಿಜಿಯವರ ಆತ್ಮ ಅನ್ನವಾಗಲಿಲ್ಲ.

# 12. ಮರಳಿ ಮನೆಗೆ

ಬದುಕಿನ ಹೋರಾಟ ಡಿವಿಜಿಯವರಿಗೆ ಒಂದು ಲೀಲೆ. ಕಷ್ಟ ಎಷ್ಟೇ ಬರಲಿ ನುಂಗಿಕೊಳ್ಳುವುದು ಅವರ ಸ್ವಭಾವ. ವಿನಾ ದೈನ್ಯೇನ ಜೀವನಂ ಅವರಿಗೆ ಸಿದ್ಧಿಸಿತ್ತು. ಯಾರಿಗೂ ಎಂದೂ ತಲೆಬಾಗದೆ ಬದುಕಿದ್ದರು. ಅವರು ತಲೆಬಾಗಿದ್ದು ಮಹಾವ್ಯಕ್ತಿಗಳಿಗೆ, ಚೈತನ್ಯಗಳಿಗೆ. ಸ್ವ ಇಚ್ಛೆಯಿಂದ ಹಾಗೂ ಯಾವುದೇ ಲೌಕಿಕ ಸ್ವಾರ್ಥ ಲಾಭದ ಆಸೆ ಕಿಂಚಿತ್ತೂ ಇಲ್ಲದೆ.

ಪತ್ರಿಕೆಯ ಕೆಲಸವಾಗಲಿ, ಸಂಘ ಸಂಸ್ಥೆಗಳ ಕೆಲಸವಾಗಲಿ, ಸಾಹಿತ್ಯ ಪರಿಷತ್ತಿನ ಕೆಲಸವಾಗಲಿ, ರಾಜಕೀಯ ಓಡಾಟವಾಗಲಿ ಎಲ್ಲವೂ ಅವರ ಪಾಲಿಗೆ ಬದುಕಿನ ಕೆಲಸ, ಜೀವನ ಧರ್ಮ, ಕರ್ತವ್ಯ. ದೈವ ತಮ್ಮ ಪಾಲಿಗೆ ನಿಗದಿ ಮಾಡಿದ ಕೆಲಸ, ಹೊಣೆ. ಆ ಕೆಲಸವನ್ನು ಮನಃಪೂರ್ತಿಯಾಗಿ ಶ್ರದ್ಧೆಯಿಂದ ಸಾಮರ್ಥ್ಯದಿಂದ ನಿರ್ವಹಿಸುವುದೇ ಅವರ ಜೀವನದ ಪರಮ ಗುರಿ.

ಹೀಗೆ 87 ವರ್ಷದ ತುಂಬು ಜೀವನ. ಸುಮಾರು 70 ವರ್ಷ ಸಾರ್ವಜನಿಕ ಜೀವನ ಕ್ರಿಯಾಶೀಲ ಜೀವನ. ನಿರಂತರ ಓಡಾಟ, ಚಿಂತನೆ, ಕೆಲಸ, ಸಂಘಟನೆ, ಬರೆಹ. ಇವುಗಳ ನಡುವೆಯೂ ಅಚ್ಚಳಿಯದ ಜೀವನ ರಸಿಕತೆ. ಸಂಗೀತ, ನಾಟ್ಯ, ಕಲೆ, ಗೆಳೆತನ, ಸುಗ್ರಾಸ ಭೋಜನ, ಹಾಸ್ಯಗಳನ್ನು ಸವಿದು ಸೊಗಪಟ್ಟು ನಲಿಯುವ ಸರಸತೆ. ನಲವನ್ನು ಹಂಚುವ ಉದಾರ ಸಹೃದಯತೆ.

ಸಂಸಾರದಲ್ಲಿ ಅವರು ಪಟ್ಟಿದ್ದು ಸುಖಕ್ಕಿಂತ ಕರ್ತವ್ಯನಿರ್ವಹಣೆಯೆ ಹೆಚ್ಚು. ಎಳೆಯತನದಲ್ಲೇ ಕುಟುಂಬದ ಜವಾಬ್ದಾರಿ ಹೆಗಲಿಗೆ ಬಿದ್ದಿತ್ತು. ಒಟ್ಟು ಕುಟುಂಬ, ದೊಡ್ಡ ಕುಟುಂಬ. ಹಬ್ಬ–ಹುಣ್ಣಿಮೆ ಶಾಸ್ತ್ರ ಸಂಪ್ರದಾಯಗಳ ಭರಾಟೆ. ನಿಗದಿಯಾದ ಸಂಪಾದನೆ ಇಲ್ಲ. ಆದರೆ ಇದು ಡಿವಿಜಿಯವರನ್ನು ಕಾಡಲೇ ಇಲ್ಲ. ನಿರಾಳವಾದ ನಿರಾಯಾಸವಾದ ನಡೆ ಅವರದು. ಅದಕ್ಕೆ ಮುಖ್ಯ ಕಾರಣ ಅವರ ಸರಳಚಿತ್ತತೆ, ಸರಳ ಜೀವನ. ಪಾಲಿಗೆ ಬಂದುದು, ಸಣ್ಣದೋ ದೊಡ್ಡದೂ ಅದನ್ನು ಪೂರ್ಣ ಮನಸ್ಸಿನಿಂದ ಒಪ್ಪಿಕೊಂಡು ಅನುಭವಿಸಿ

ಸಂತೋಷಿಸುವ ಪ್ರವೃತ್ತಿ. ಇದೇ ಅವರ ದೀರ್ಘ ಬಾಳಿನಲ್ಲಿ ಜೊತೆಗೆ ನಿಂತ ಆಸರೆ.

ತಮ್ಮ ವೈಯಕ್ತಿಕ ಸಾಂಸಾರಿಕ ಜೀವನದ ಬಗ್ಗೆ ಡಿವಿಜಿ ಏನನ್ನೂ ಹೇಳಿ ಕೊಳ್ಳುತ್ತಿರಲಿಲ್ಲ. ಎರಡು ಸಾವಿರಕ್ಕೂ ಹೆಚ್ಚು ಪುಟದ ಅವರ ಜ್ಞಾಪಕ ಚಿತ್ರ ಶಾಲೆಯ ಸಂಪುಟಗಳಲ್ಲಿ ಅವರ ತಾವು ಕಂಡ ಇತರ ನೂರಾರು ವ್ಯಕ್ತಿಗಳ ಬಗ್ಗೆ ಹೇಳಿರುವುದೇ ಹೆಚ್ಚು. ಅನಿವಾರ್ಯವಾದಲ್ಲಿ ಮಾತ್ರ ತಮ್ಮ ಬಗ್ಗೆ ಪ್ರಸ್ತಾಪ. ಅದೂ ನಾಚುತ್ತ, ಅಳುಕುತ್ತ, ವಾಚಕರ ಕ್ಷಮೆ ಕೋರುತ್ತ. ತಮಗೆ ಬದುಕಿನಲ್ಲಿ ಒದಗಿದ ಕಷ್ಟನಷ್ಟ ಏನನ್ನೂ ಹೇಳಿಕೊಂಡಿಲ್ಲ, ಬೇಕಾದಷ್ಟನ್ನು ಅನುಭವಿಸಿದ್ದರೂ.

1924ರಷ್ಟು ಹಿಂದೆಯೆ ಅಂದರೆ ಡಿವಿಜಿಯವರ 36–37ನೆಯ ಹರೆಯ ದಲ್ಲಿಯೆ ಅವರ ಪತ್ನಿ ಬೆಂಕಿಯ ಆಕಸ್ಮಿಕದಿಂದ ದಿವಂಗತರಾದರು. ಡಿವಿಜಿ ಅವರಿಗೆ ತುಂಬ ದುಃಖವಾಯಿತು. ಎಳೆಯ ಮೂವರು ಮಕ್ಕಳು—ಒಬ್ಬ ಮಗ, ಇಬ್ಬರು ಹೆಣ್ಣುಮಕ್ಕಳು! ಪತ್ನೀವಿಯೋಗ ಅವರ ಉತ್ಸಾಹವನ್ನು ಕುಗ್ಗಿಸಿತು. ಅವರು ಕೈಗೊಂಡಿದ್ದ ಕರ್ನಾಟಕ ಅರ್ಥಸಾಧಕ ಪತ್ರಿಕೆಯ ಕೆಲಸಕ್ಕೆ ಹಿಂಜರಿತವೂ ಆಯಿತು. ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಆದರೆ ಡಿವಿಜಿ ಆ ನಿರುತ್ಸಾಹದ ಮಂಪರನ್ನು ಕಳೆದುಕೊಂಡರು. ಚಿತ್ತಸ್ವಾಸ್ಥ್ಯವನ್ನು ಸಮತೂಕವನ್ನು ಮರಳಿ ಪಡೆದುಕೊಂಡರು. ಸಾರ್ವಜನಿಕ ಕಾರ್ಯದಲ್ಲಿ ಮುಳುಗಿದರು. ಎರಡನೆಯ ಮದುವೆ ಮಾಡಿಕೊಳ್ಳಿ ಎಂದು ಒತ್ತಾಯ ಬಂತು ಹಲವರಿಂದ. ಹಿರಿಯ ಆಪ್ತಮಿತ್ರ ಟಿ.ಎಸ್. ವೆಂಕಣ್ಣಯ್ಯ ನವರೇ ಹೇಳಿದರು. ಡಿವಿಜಿ ಒಪ್ಪಲಿಲ್ಲ. "ನನ್ನ ಮನೆಯಲ್ಲಿ ತಂಗಿ ನೆಲೆ ತಪ್ಪಿ ಬಂದು ಇದ್ದಾಳೆ. ಆಕೆ ವಿಧವೆ. ಅವಳಿಗೆ ಮರುಮದುವೆಗೆ ಏರ್ಪಾಡು ಮಾಡಿ. ಗಂಡು ಹುಡುಕಿ ಕೊಡಿ. ಆಮೇಲೆ ನನ್ನದು" ಎಂದು ಷರತ್ತು ಹಾಕಿ ಗೆಳೆಯರ ಬಾಯಿ ಮುಚ್ಚಿಸಿದರು. ತಂಗಿಗೆ ಇಲ್ಲದ ಸೌಖ್ಯ ತನಗೇಕೆ ಎಂಬ ವಿಚಾರ. ಜೊತೆಗೇ ವಿಧವಾ ವಿವಾಹ ಆಗಬೇಕು ಎಂಬ ಸುಧಾರಣಾ ಪ್ರೀತಿ. ಆದರೆ ಅದಕ್ಕೆ ಇನ್ನೂ ಕಾಲ ಪಕ್ವವಾಗಿರಲಿಲ್ಲ. ಅಂತೂ ಡಿವಿಜಿ ಅಲ್ಲಿಂದಾಚೆಗೆ ಒಂಟಿಯಾಗಿ ಉಳಿದರು. ಆದರೆ ಮನೆಯ ಬಂಧು ಬಳಗದವರಿಂದ, ಹೊರಗಿನ ಅಪಾರ ಮಿತ್ರವರ್ಗದವರಿಂದ, ಶಿಷ್ಯರಿಂದಾಗಿ ಒಂಟಿತನದ ಕೆಲುಬು ಉಂಟಾಗಲಿಲ್ಲ.

ಮಕ್ಕಳ ಮದುವೆ ಇತ್ಯಾದಿ ಎಲ್ಲ ನಡೆದವು. ಮಗ ಬಿ.ಜಿ.ಎಲ್. ಸ್ವಾಮಿ ಸಸ್ಯಶಾಸ್ತ್ರ ಓದಿ ಪಾರಂಗತರಾದರು. ಖ್ಯಾತ ವಿಜ್ಞಾನಿ ಆದರು. ಅಮೆರಿಕಾದಲ್ಲಿ ಸಂಶೋಧನೆ ಮಾಡಿದರು. ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸಸ್ಯಶಾಸ್ತ್ರ ಪ್ರಾಧ್ಯಾಪಕರಾದರು. ತಂದೆಯ ಸಾಹಿತ್ಯಾಸಕ್ತಿ, ಸಾಮರ್ಥ್ಯ ಅವರಲ್ಲಿ ಒಡ

ಮೂಡಿತ್ತು. ಜೊತೆಗೆ ವಿಜ್ಞಾನದ ದೃಷ್ಟಿವೈಶಾಲ್ಯ. ಅವರ ಬರೆವಣಿಗೆ ಬೆಳೆಯುವ ವೇಳೆಗೆ ಡಿವಿಜಿಗೆ ಇಳಿವಯಸ್ಸು. ಮಹಾಸಾಹಿತಿ ತಂದೆಯ ಎದುರಿಗೆ ತಮ್ಮ ಬರಹವನ್ನು ತೋರಿಸಿಕೊಳ್ಳಲು ನಾಚಿಕೆಯೇನೋ! ಡಿವಿಜಿಯ ಕಾಲಾನಂತರ ಸ್ವಾಮಿಯವರ ಲೇಖನಿ ಚುರುಕುಗೊಂಡಿತು. ಅನೇಕ ಕೃತಿಗಳನ್ನು ರಚಿಸಿದರು. ಅವರ 'ಹಸಿರು ಹೊನ್ನು' ಗ್ರಂಥ ಉತ್ಕೃಷ್ಟವಾದುದು. ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆಯಿತು. ಸಸ್ಯಶಾಸ್ತ್ರ ವಿಜ್ಞಾನ ಅದರ ವಿಷಯ. ಆದರೆ ಅದು ಪ್ರವಾಸ ಸಾಹಿತ್ಯಕ್ಕೆ, ನವಿರು ಹಾಸ್ಯಕ್ಕೆ, ಕಾವ್ಯದ ಉಲ್ಲೇಖಗಳಿಗೆ ಹೃದ್ಯವಾದ ಗದ್ಯಕ್ಕೆ ಸೊಗಸಾದ ಉದಾಹರಣೆ! ಶಾಸ್ತ್ರದ ಹೊರೆ ಕಾಣಿಸುವುದೇ ಇಲ್ಲ. ಎಳೆಯರಿಂದ ಹಿರಿಯರವರೆಗೂ ರಂಜಿಸಬಲ್ಲದು. 'ತಮಿಳು ತಲೆಗಳ ನಡುವೆ', 'ನಮ್ಮ ಹೊಟ್ಟೆಯಲ್ಲಿ ಅಮೆರಿಕಾ'. 'ಕಾಲೇಜು ರಂಗ', 'ಕಾಲೇಜು ತರಂಗ' ಇತ್ಯಾದಿ ಕೃತಿಗಳೆಲ್ಲ ತುಂಬಾ ಆಕರ್ಷಕವಾದವು. ರಂಜನೀಯವಾದವು. ಹಾಗೆಯೆ ವಿಚಾರ ಭರಿತ. ತಂದೆ–ಮಗ ಇಬ್ಬರೂ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರು. ಇಂಥ ಜೋಡಿ ಇನ್ನೊಂದಿಲ್ಲ. ಈಚೆಗೆ ಕುವೆಂಪು ಅವರ ಮಗ ಪೂರ್ಣಚಂದ್ರ ತೇಜಸ್ವಿ ಅವರೂ ಅಕಾಡೆಮಿ ಪ್ರಶಸ್ತಿಗೆ ಭಾಜನರಾಗಿ, ಎರಡನೆಯ ಜೋಡಿ ಆಗಿದೆ. ಡಿವಿಜಿ ತಮ್ಮ ಈ ಪ್ರತಿಭಾವಂತ ಪುತ್ರನ ವಿಚಾರ ಏನೂ ಹೇಳಿಕೊಂಡಿಲ್ಲ. ಶ್ರೀ ಸ್ವಾಮಿಯವರು 1980ರಲ್ಲೆ ನಿಧನರಾದರು. ಹಿಂದೆಯೆ ಅವರ ಪತ್ನಿಯೂ ತೆರಳಿದರು. ತರುವಾಯ ಡಿವಿಜಿಯವರ ಹಿರಿಯ ಮಗಳು ಕಾಲವಶರಾದರು.

ಡಿವಿಜಿ ವಾಸ ಮಾಡಿದ್ದು ಬೆಂಗಳೂರಿನ ಶಂಕರಪುರ, ಚಾಮರಾಜಪೇಟೆಗಳಲ್ಲಿ. ಕೊನೆಗೆ ನೆಲೆಸಿದ್ದು ಬಸವನಗುಡಿಯ ನಾಗಸಂದ್ರ ರಸ್ತೆಯಲ್ಲಿ. ತಮ್ಮ ರಾಮರಾಯರ ಸಂಸಾರವೂ ಅಲ್ಲೆ. ಅವರೇ ಕೊನೆಯವರೆಗೂ ಡಿವಿಜಿಯವರನ್ನು ನೋಡಿಕೊಂಡಿದ್ದು. ಡಿವಿಜಿಯವರ ಅಧ್ಯಯನ, ಅಭ್ಯಾಸ, ಬರೆವಣಿಗೆ, ಗೆಳೆಯರ ಭೇಟಿ, ಚರ್ಚೆ ಎಲ್ಲ ಅಲ್ಲಿ. ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್, ರಾಜಾಜಿ ಮೊದಲಾದ ವಿಶ್ವವಿಖ್ಯಾತರೂ ಅಲ್ಲಿಗೇ ಬರುತ್ತಿದ್ದರು. ಋಷಿಮುನಿಗಳ ಕುಟೀರಕ್ಕೆ ರಾಜಮಹಾರಾಜರೆಲ್ಲ ಹೋಗುತ್ತಿದ್ದರೆಂದು ಇತಿಹಾಸದ ಕತೆಗಳಲ್ಲಿ ಕೇಳಿದ್ದೇವೆ. ಜ್ಞಾನಿ ಕೂತಲ್ಲೆ ಜಗತ್ತನ್ನು ಆಡಿಸುತ್ತಾನೆ, ಆಕರ್ಷಿಸುತ್ತಾನೆ.

ಸ್ಥೂಲ ಶರೀರದಿಂದಾಗಿ ಕೊನೆಕೊನೆಗೆ ಓಡಾಟ ಕಷ್ಟವಾಗುತ್ತಿತ್ತು. ಆದರೆ ಗೋಖಲೆ ಸಂಸ್ಥೆಗೆ ಹೋಗುವುದು ತಪ್ಪುತ್ತಿರಲಿಲ್ಲ. ದೇಹಕ್ಕೆ ಎಷ್ಟೆ ಆಯಾಸವಾಗಲಿ, ತೊಂದರೆ ಆಗಲಿ, ಹೇಗಾದರೂ ಸರಿಯೆ ಹೋಗಿಯೆ ಹೋಗುತ್ತಿದ್ದರು. ಗೋಷ್ಠಿಗಳನ್ನು ನಡೆಸುತ್ತಿದ್ದರು. ವ್ಯವಹಾರವನ್ನು ಗಮನಿಸುತ್ತಿದ್ದರು.

1972ರಿಂದ ಅವರ ದೇಹಾರೋಗ್ಯ ಇಳಿಮುಖವಾಯಿತು. ಓಡಾಟ ಅಸಾಧ್ಯವಾಯಿತು. ಆಪ್ತರೂ ವಿಶ್ವಾಸಿಗಳೂ ಆದ ವೈದ್ಯರ ನೆರವು, ಮನೆಯಲ್ಲಿ ಅಕ್ಕರೆಯ ಉಪಚಾರ, ಇಷ್ಟಮಿತ್ರರ ಸತ್ಸಹವಾಸ, ತಮ್ಮ ಮಾನಸಿಕ ಸ್ಥೈರ್ಯ, ನಿರ್ಲಿಪ್ತ ಮನೋಭಾವ–ಡಿವಿಜಿಯವರ ಜೀವಿತದ ಕೊನೆಯ ಮೂರು ವರ್ಷಗಳ ಕಾಯಿಲೆಯ ದಿನಗಳನ್ನು ಸಹ್ಯವಾಗಿಸಿದ್ದವು.

ದೇಹ ನರಳುತ್ತಿತ್ತು. ಮನಸ್ಸು ಅರಳಿಯೆ ಇತ್ತು. ಮೊದಲಿನದೇ ಉತ್ಸಾಹ, ಉತ್ಸುಕತೆ, ಆಸಕ್ತಿ, ಸರಸತೆ. ನೋಡಲು ಹೋದವರನ್ನು ನಗಿಸಿಯೇ ಕಳಿಸುತ್ತಿದ್ದರು. ನರ್ಸಿಂಗ್ ಹೋಂನಲ್ಲಿ ಇದ್ದ ಒಂದು ಸಂದರ್ಭ. ಪ್ರಿಯ ಮಿತ್ರ ಜಿ.ಪಿ. ರಾಜರತ್ನಂ ನೋಡಲು ಹೋದರು. ಕೋಣೆಯ ಬಾಗಿಲಲ್ಲಿ ಇದ್ದ ಮಗ ಶ್ರೀ ಸ್ವಾಮಿಯವರನ್ನು ವಿಚಾರಿಸಿದರು. ಯಾರನ್ನೂ ಒಳಕ್ಕೆ ಬಿಡಬಾರದು ಎಂದು ವೈದ್ಯರ ಕಟ್ಟಪ್ಪಣೆ. ರಾಜರತ್ನಂ ಹೊರಗೇ ನಿಂತರು. ಅವರ ಕಂಚಿನ ಕಂಠ ಡಿವಿಜಿಗೆ ಕೇಳಿಸಿತ್ತು. ಒಳಕ್ಕೆ ಬರಹೇಳಿದರು. ರಾಜರತ್ನಂರನ್ನು ಆತ್ಮೀಯವಾಗಿ ಮಾತಾಡಿಸಿದರು. ''ಈಗೇನು ಬರೆಯುತ್ತಿದ್ದೀರಿ?'' ಎಂದು ಕೇಳಿದರು. ರಾಜರತ್ನಂ ''ವೇದಾಂತ ದೇಶಿಕರ ವೈರಾಗ್ಯ ಪಂಚಕವನ್ನು ಅರ್ಥಸಹಿತ ಸಿದ್ಧಗೊಳಿಸುತ್ತಿದ್ದೇನೆ'' ಎಂದರು. ಕೂಡಲೇ ಡಿವಿಜಿ ಅವರ ಕಣ್ಣು ಮುಚ್ಚಿತು. ಹನಿಗೂಡಿತು. ಕೈಗಳೆರಡೂ ಎದೆಯ ಮೇಲೆ ಒಂದುಗೂಡಿದವು. ಮೆಲ್ಲನೆ ಮಾತು ಹೊರಟಿತು. ''ವೇದಾಂತ ದೇಶಿಕರು ಮಹಾನುಭಾವರು, ವಿದ್ಯಾರಣ್ಯರ ವಿಷಯ ಇನ್ನೂ ಏನೇನೋ ಮಾಡಬೇಕೆಂದಿದ್ದೆ. ದೇಶಿಕರನ್ನು ಇನ್ನೂ ಅಧ್ಯಯನ ಮಾಡಬೇಕಾಗಿದೆ. ಆದರೆ ಆಗುತ್ತಿಲ್ಲ'' ಎಂದರು. ದೇಶಿಕರ 'ಅಭೀತಿಸ್ತವ' ಸ್ತೋತ್ರದ ಒಂದೆರಡು ಶ್ಲೋಕಗಳನ್ನು ಗುಣುಗುಣಿಸಿದರು. ಆಯಾಸ ಹೆಚ್ಚೀತು ಎಂದು ರಾಜರತ್ನಂ ಅವರೇ ಭೇಟಿ ಮುಗಿಸಿ ಹೊರಹೊರಟರು. ರಾಜರತ್ನಂ ಆಗಾಗ ಇದನ್ನು ನೆನೆಸಿಕೊಳ್ಳುತ್ತಿದ್ದರು.

ದೇಹಸ್ಥಿತಿ ಕೊಂಚ ಸುಧಾರಿಸಿತು. ಮನೆಗೆ ಮರಳಿದರು. ಕೆಲವು ತಿಂಗಳು ಕಳೆದವು. ದೇಹ ಹಣ್ಣಾಗಿತ್ತು. 7–10–1975ರಂದು ಮುಂಜಾನೆ 5–50. ಡಿವಿಜಿ ಆ ಜೀರ್ಣಕಳೇಬರವನ್ನು ತ್ಯಜಿಸಿದರು. ಅಕ್ಟೋಬರ್ 2ನೇ ತಾ|| ನವರೆಗೂ ಅವರು ಗೋಖಲೆ ಸಂಸ್ಥೆಯ ಕೆಲಸದಲ್ಲಿ ಮಗ್ನರಾಗಿಯೆ ಇದ್ದರು.

ಅಂದಿನ ಸರ್ಕಾರದ ಮುಖ್ಯಸ್ಥರಾದಿಯಾಗಿ, ಅನೇಕ ಗಣ್ಯರು, ಸಾಹಿತಿಗಳು, ಪತ್ರಕರ್ತರು, ಸಾರ್ವಜನಿಕ ಮುಖಂಡರು, ಅಧಿಕಾರಿಗಳು, ವಕೀಲರು, ವಿದ್ಯಾರ್ಥಿಗಳು, ಮಿತ್ರರು ತಂಡೋಪತಂಡವಾಗಿ ಬಂದು ಅಂತಿಮ ದರ್ಶನ ಪಡೆದರು. ಗೋಖಲೆ ಸಂಸ್ಥೆಯ ಪರವಾಗಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಮಾಲೆ

ಅರ್ಪಿಸಿ ಬೀಳ್ಕೊಟ್ಟರು. ಡಿ.ವಿ. ಗುಂಡಪ್ಪನವರ ದೇಹ ಅಗ್ನಿಮುಖೇನ ಪಂಚ ಭೂತಗಳಲ್ಲಿ ಲೀನವಾಯಿತು. ಆ ಹಿರಿಯ ಸತ್ವ ತನ್ನ ಮನೆಗೆ ತೆರಳಿತು.

19–10–1975ರಲ್ಲಿ ಗೋಖಲೆ ಸಂಸ್ಥೆಯಲ್ಲಿ ಶೋಕಸಭೆ ಸೇರಿತು. ನಗರ ಸಭೆಯ ಆಡಳಿತಾಧಿಕಾರಿಯಾಗಿದ್ದ ಎನ್. ಲಕ್ಷ್ಮಣರಾಯರ ಅಧ್ಯಕ್ಷತೆ.

ತೆರೆಯಾಗು ವಿಶ್ವಜೀವನದ ದಿವ್ಯಾಬ್ಧಿಯಲಿ
ಕರಗಿಸದರಲಿ ನಿನ್ನ ಬೇರೆತನದರಿವ
ಮರುತನುರುಬನು ತಾಳುತೇಳುತೋಲಾಡುತ್ತ
ವಿರಮಿಸಾಲೀಲೆಯಲಿ ಮಂಕುತಿಮ್ಮ.

# 13. ಜನ್ಮ ಶತಮಾನೋತ್ಸವ

1987–88 ಡಿವಿಜಿ ಅವರ ಜನ್ಮಶತಮಾನೋತ್ಸವ ವರ್ಷ. ತನ್ನ ಆ ಸುಪುತ್ರನಿಂದ ತಾನು ಪಡೆದ ಕೀರ್ತಿಗೆ ಕನ್ನಡನಾಡು ಕೃತಜ್ಞತೆಯಿಂದ ತಲೆಬಾಗಿತು. ಈ ವಿಶೇಷ ಸಂದರ್ಭವನ್ನು ಆಚರಿಸಲೆಂದೇ ಗೋಖಲೆ ಸಂಸ್ಥೆ, ನಾಡಿನ ಗಣ್ಯ ವ್ಯಕ್ತಿಗಳೂ, ವಿದ್ವಾಂಸರೂ ಕೂಡಿದ ಉತ್ಸವ ಸಮಿತಿಯನ್ನು ರಚಿಸಿತು. ಅದಕ್ಕೆ ನ್ಯಾಯ ಮೂರ್ತಿ ನಿಟ್ಟೂರು ಶ್ರೀನಿವಾಸರಾಯರು (ಡಿವಿಜಿ ಅವರ ನಿಕಟವರ್ತಿಗಳು) ಅಧ್ಯಕ್ಷರು ಹಾಗೂ ಶ್ರೀ ಜಿ. ನಾರಾಯಣ (ಪ್ರಸ್ತುತ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು) ಕಾರ್ಯಾಧ್ಯಕ್ಷರು. ಸಮಿತಿ ಉತ್ಸವದ ಅಂಗವಾಗಿ ಕರ್ನಾಟಕ ರಾಜ್ಯ ಸರ್ಕಾರದ ನೆರವಿನಿಂದ ಹಲವಾರು ಯೋಜನೆಗಳನ್ನು ರೂಪಿಸಿತ್ತು. ಡಿವಿಜಿಯ ಜನ್ಮದಿನ 17–3–1987. ಅಂದೇ ಜನ್ಮ ಶತಮಾನೋತ್ಸವದ ಉದ್ಘಾಟನೆ. ಹುಟ್ಟಿದ ಊರು ಮುಳುಬಾಗಿಲಿನಲ್ಲಿ. ಅಲ್ಲಿಂದ ವರ್ಷ ಪೂರಾ ಕರ್ನಾಟಕದಲ್ಲಿ ನಾನಾ ಕಡೆಗಳಲ್ಲಿ, ಭಾರತದ ಹಲವು ನಗರಗಳಲ್ಲಿ ಡಿವಿಜಿ ಬಗೆಗೆ ಕಾರ್ಯಕ್ರಮ ನಡೆದವು. ಉಪನ್ಯಾಸ, ವಿಚಾರಗೋಷ್ಠಿ, ಸಾಹಿತ್ಯ ಪ್ರಕಟಣೆ, ವಸ್ತು ಪ್ರದರ್ಶನ ಇತ್ಯಾದಿಗಳು ನಡೆದವು. ವಿದೇಶಗಳಲ್ಲೂ ಹಲವು ಕಡೆ ಡಿವಿಜಿ ಸ್ಮರಣೆ ನಡೆಯಿತು.

*ಬಾಳಿಗೊಂದು ನಂಬಿಕೆ, ಸಂಸ್ಕೃತಿ, ಮಂಕುತಿಮ್ಮನ ಕಗ್ಗ* ಮುಂತಾದ ಕೃತಿಗಳ ಕಡಿಮೆ ಬೆಲೆಯ ಆವೃತ್ತಿಗಳನ್ನು ಸಮಿತಿ ಪ್ರಕಟಿಸಿತು. ವನಸುಮ ಎಂಬ ವಿಶೇಷ ಸ್ಮರಣ ಸಂಚಿಕೆಯನ್ನು ಹೊರತಂದಿತು. ಪ್ರೊ|| ವಿ. ಸೀತಾರಾಮಯ್ಯ ಅವರ ಸಂಪಾದಕತ್ವದಲ್ಲಿ, ಡಿವಿಜಿ ಕುರಿತಂತೆ "ಧೀಮಂತ" ಎನ್ನುವ ಬೃಹತ್ ಸಂಸ್ಮರಣ ಗ್ರಂಥವೂ ಪ್ರಕಟವಾಯಿತು. ಅದು ಡಿವಿಜಿ ಅವರ ಬಹುಮುಖ ವ್ಯಕ್ತಿತ್ವ ಪ್ರತಿಭೆಗಳ ಪರಿಚಯ ಗ್ರಂಥ, ಅವರ ಸಾಹಿತ್ಯ ಕೃತಿಗಳ ಅವಲೋಕನ ಗ್ರಂಥ. ಡಿವಿಜಿ ಅವರ ಅಂತರಂಗದ ಶಿಷ್ಯರಾದ ಶ್ರೀ ಡಿ.ಆರ್. ವೆಂಕಟರಮಣನ್ ಅವರು ಅಪಾರ ವ್ಯಾಸಂಗದಿಂದ ರಚಿಸಿದ ಕೃತಿ "*ವಿರಕ್ತ ರಾಷ್ಟ್ರಕ ಡಿವಿಜಿ*" ಪ್ರಕಟವಾಯಿತು.

ಡಿವಿಜಿ ಅವರ ವ್ಯಕ್ತಿತ್ವ – ವಿಚಾರ – ಸಾಧನೆಗಳ ವಿಸ್ತಾರವೂ ಅತ್ಯಂತ ಆಧಾರಭೂತವೂ ಆದ ಶ್ರೇಷ್ಠ ಜೀವನಚರಿತ್ರೆ ಅದು. ಕರ್ನಾಟಕ ರಾಜ್ಯ ಸರ್ಕಾರವೇ ಡಿವಿಜಿಯವರ ಸಮಗ್ರ ಕೃತಿಗಳ ಪ್ರಕಟಣೆಯನ್ನು ಕೈಗೊಂಡಿತು. ಖ್ಯಾತ ಸಾಹಿತಿ ಡಾ॥ ಹಾ.ಮಾ. ನಾಯಕರ ಸಂಪಾದಕತ್ವದಲ್ಲಿ ಹನ್ನೆರಡು ಸಂಪುಟಗಳಲ್ಲಿ ಡಿವಿಜಿ ಅವರ ಎಲ್ಲ ಕನ್ನಡ ಬರೆಹಗಳನ್ನು ಪ್ರಕಟಿಸಲು ಯೋಜಿಸಲಾಯಿತು. ಈವರೆಗೆ (1994) *ವಿಚಾರ–ವಿಮರ್ಶೆ, ಜೀವನ ಧರ್ಮಯೋಗ, ನಾಟಕ–ಶಿಶುಸಾಹಿತ್ಯ* ಈ ಮೂರು ಸಂಪುಟಗಳು ಹೊರಬಂದಿವೆ.

ರಾಷ್ಟ್ರಮಟ್ಟದಲ್ಲಿ ಸಹ ಡಿವಿಜಿಯವರ ಬಗೆಗೆ ಕಾರ್ಯಕ್ರಮ ನಡೆದವು. ಕೇಂದ್ರ ಸಾಹಿತ್ಯ ಅಕಾಡೆಮಿ ಡಿವಿಜಿ ಅವರ ಗೌರವಾರ್ಥ ಬೆಂಗಳೂರಿನಲ್ಲಿ ಒಂದು ವಿಶೇಷ ವಿಚಾರ ಸಂಕಿರಣವನ್ನು ಏರ್ಪಡಿಸಿತು. ಭಾರತೀಯ ಅಂಚೆ ಇಲಾಖೆ ಡಿವಿಜಿ ಗೌರವಾರ್ಥ ವಿಶೇಷ ಅಂಚೆಚೀಟಿಯನ್ನು ಹೊರತಂದಿತು. ಅದು ಸಮಗ್ರ ರಾಷ್ಟ್ರದ ಪರವಾಗಿ ಸಲ್ಲಿಸಲಾದ ನಮನ.

ಶತಮಾನೋತ್ಸವದಲ್ಲಿ ಮಾತ್ರವೇಕೆ, ಶತಶತಮಾನಗಳವರೆಗೂ ನಾಡಿನ ನಭೋಮಂಡಲದಲ್ಲಿ ಬೆಳಗುವ ಧ್ರುವತಾರೆ ಡಿವಿಜಿ.

# 14. ವಾಙ್ಮಯ ವಾರಿಧಿ

ಸಾಹಿತ್ಯ ಡಿವಿಜಿಯವರ ಬಾಳಿನ ಒಂದು ಮುಖ. ಆದರೆ ಡಿವಿಜಿ ಸಾಹಿತಿ ಎಂದೇ ಲೋಕಪ್ರಸಿದ್ಧರು. ಇದರಿಂದ ಅವರ ಇತರ ಸಾರ್ವಜನಿಕ ಸಾಧನೆ ಅರ್ಹವಾದಷ್ಟು ಗಮನವನ್ನು ಸೆಳೆಯದೆ ಹೋಗುವ ಸಂಭವ ಉಂಟು. ಆದರೆ ಡಿವಿಜಿಯವರ ಸಾಹಿತ್ಯ ಸಾಧನೆಯ ವ್ಯಾಪ್ತಿ, ಗಾತ್ರ, ಹಿರಿಮೆ, ಗರಿಮೆ, ಮಹಿಮೆಗಳನ್ನು ನೋಡಿದರೆ, ಅವರನ್ನು ಮಹಾಸಾಹಿತಿ ಎನ್ನುವುದು ಲೇಶವೂ ಅನುಚಿತವಲ್ಲ. ಬರವಣಿಗೆಯ ಬೃಹತ್ತಿನಲ್ಲಿ, ವಿಷಯ ವೈವಿಧ್ಯದಲ್ಲಿ, ವಿಚಾರ ವೈಶಾಲ್ಯದಲ್ಲಿ, ಅನುಭವದ ಆಳದಲ್ಲಿ, ಶೈಲಿ ಛಂದಸ್ಸುಗಳ ಪ್ರಯೋಗ ಶೀಲತೆಯಲ್ಲಿ, ಗದ್ಯ, ಪದ್ಯ, ನಾಟಕಗಳ ಬಗೆಬಗೆಗಳಲ್ಲಿ ಡಿವಿಜಿ ಈ ಶತಮಾನದ ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಧಾನ ಸ್ಥಾನಪಾತ್ರರು ಎನ್ನುವುದು ಹಗಲಿನಷ್ಟು ಸ್ಪಷ್ಟ.

ಡಿವಿಜಿ ಇಂಗ್ಲಿಷ್–ಕನ್ನಡ ಎರಡರಲ್ಲೂ ಹೇರಳವಾಗಿ ಬರೆದಿದ್ದಾರೆ. ಇಂಗ್ಲಿಷ್ ಬರೆಹಗಳು ಬಹುತೇಕ ರಾಜಕೀಯಕ್ಕೆ ಸಂಬಂಧಿಸಿದವು. ದೇಶೀಯ ಸಂಸ್ಥಾನಗಳ ಸಮಸ್ಯೆ, ಭಾರತದ ರಾಜ್ಯಾಂಗ ಸುಧಾರಣೆಯ ಕ್ರಮಗಳ ವಿಮರ್ಶೆಗಳು, ನಾನಾ ನಿಯೋಗಗಳಿಗೆ ಸಲ್ಲಿಸಿದ ಮನವಿಗಳು, ಕ್ಯಾಬಿನೆಟ್ ನಿಯೋಗದ ವರದಿಯ ಸಮೀಕ್ಷೆ, ಭಾರತದ ಸ್ವಾತಂತ್ರ್ಯ ಮಸೂದೆಯ ವಿಮರ್ಶೆ, ರಾಜ್ಯಾಂಗ ರಚನಾ ಸಭೆಯ ಕಲಾಪ ವಿಮರ್ಶೆ, ಭಾಷಾ ಸಮಸ್ಯೆ, ಭಾಷಾವಾರು ಪ್ರಾಂತ್ಯ ರಚನೆ ವಿಮರ್ಶೆ ಇತ್ಯಾದಿ.

ಹಿಂದೆಯೆ ನಾವು ನೋಡಿದಂತೆ, ಲಿಬರಲಿಸಂ ಅಥವಾ ಸೌಮ್ಯವಾದ (ಮಿತವಾದ) ಡಿವಿಜಿಯವರ ರಾಜಕೀಯ, ಏಕೆ ಅವರ ಇಡೀ ಬಾಳಿನ ಸಿದ್ಧಾಂತ. ಅಂತೆಯೆ ಆ ವಿಷಯವನ್ನು ಕುರಿತು ಅವರು ಹಲವುಲೇಖನಗಳನ್ನು ಬರೆದಿದ್ದಾರೆ. *Lectures on Morley's Essay on Compromise* ಮತ್ತು *Gokhale for Today; LiberalismRestated* ಈ ತೆರನ ಕೃತಿಗಳು. ಸೌಮ್ಯವಾದದ ಸ್ವರೂಪ, ತಾತ್ತ್ವಿಕ ಹಿನ್ನೆಲೆ, ಜೀವನ ದರ್ಶನ, ಬೆಳವಣಿಗೆ, ಇಂಗ್ಲೆಂಡಿನಲ್ಲಿ ಮಾರ್ಲೆ,

ಭಾರತದಲ್ಲಿ ಗೋಖಲೆಯವರು ಈ ನಿಟ್ಟಿನಲ್ಲಿ ಮಾಡಿದ ಕೆಲಸ, ಸಮನ್ವಯ ಸಂವಾದಗಳ ಮಾರ್ಗ—ಇವುಗಳ ಪರಿಚಯ ಪರಾಮರ್ಶೆ ಈ ಪುಸ್ತಿಕೆಗಳ ವಸ್ತು.

ಡಿವಿಜಿ ಯಾವ ವ್ಯಕ್ತಿಗಳನ್ನು ಮೆಚ್ಚಿಕೊಂಡಿದ್ದರೊ, ಅಂಥವರ ಪೈಕಿ ಕೆಲವರನ್ನು ಕುರಿತಂತೆ ಇಂಗ್ಲಿಷ್ ಪುಸ್ತಿಕೆಗಳನ್ನು ಬರೆದಿದಾರೆ. ದಿವಾನ್ ರಂಗಾ ಚಾರ್ಲು, ಸರ್ ಕೆ. ಶೇಷಾದ್ರಿ ಅಯ್ಯರ್, ಶೃಂಗೇರಿಯ ಶ್ರೀ ಸಚ್ಚಿದಾನಂದ ಶಿವಾನುಭವ ನೃಸಿಂಹ ಭಾರತೀ ಸ್ವಾಮಿಗಳು, ಟಾಲ್‌ಸ್ಟಾಯ್, ಸರ್.ಎಸ್. ಸುಬ್ರಹ್ಮಣ್ಯ ಅಯ್ಯರ್, ಶ್ರೀ ಕೃಷ್ಣರಾಜ ಒಡೆಯರು, ಇವು ಈ ತೆರನ ವ್ಯಕ್ತಿಚಿತ್ರಗಳು. ಗುಣಗ್ರಾಹಕತೆ ಇಲ್ಲಿ ಪ್ರಧಾನ. ಆಯಾ ಮಹನೀಯರ ಜೀವನ–ಸಾಧನೆಗಳನ್ನು ತೆರೆದ ಮನಸ್ಸಿನಿಂದ ಸಹೃದಯ ಗೌರವದಿಂದ ನೋಡುವ ಪರಿ. ಇದಕ್ಕೆ ನಿದರ್ಶನವಾಗಿ ಟಾಲ್‌ಸ್ಟಾಯ್ ಕುರಿತ ಪುಸ್ತಿಕೆಯನ್ನು ನೋಡಬಹುದು. ರಷ್ಯಾದ ಆ ಮಹಾವಿಭೂತಿ ಪುರುಷನ ಜೀವನ ಚಿತ್ರ, ಆತನ ಜೀವನ ದರ್ಶನದ ವಿವರಣೆ ಅಡಕವಾಗಿ ಬಂದಿದೆ.

*Towards a New Social Order, Vedanta and Nationalism, Beauty and Truth, Man and the Infinite*—ಇವು ತತ್ತ್ವಜಿಜ್ಞಾಸೆ, ಭವಿಷ್ಯದ ಚಿಂತನೆ, ರಾಷ್ಟ್ರೀಯತೆಯ ತಾತ್ತ್ವಿಕ ಆಧಾರ, ಅದಕ್ಕಿರಬೇಕಾದ ಪರಿಮಿತಿ, ಸೌಂದರ್ಯ ಜಿಜ್ಞಾಸೆ, ಸತ್ಯದೃಷ್ಟಿ ಇತ್ಯಾದಿ ವಿಷಯಗಳನ್ನು ಒಳಗೊಂಡ ಲೇಖನಗಳು. *From Idealogy to Common Sense* ಎಂಬ ಲೇಖನದಲ್ಲಿ ಭಾರತಕ್ಕೆ ಕಮ್ಯೂನಿಸ್ಟ್ ಮಾರ್ಗ ಸೂಕ್ತವಲ್ಲ, ಪ್ರಜಾಪ್ರಭುತ್ವವೇ ಸರಿ ಎಂದು ಪ್ರತಿಪಾದಿಸಿದಾರೆ.

ಡಿವಿಜಿಯವರು ಓದಿದ್ದು ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ. ಅವರ ಇಂಗ್ಲಿಷ್ ಬರೆಹಗಳನ್ನು ನೋಡಿದರೆ ಇದನ್ನು ನಂಬುವುದೇ ಕಷ್ಟವಾದೀತು. ಕನ್ನಡವನ್ನು ಹೇಗೊ ಇಂಗ್ಲಿಷನ್ನು ಹಾಗೆಯೆ ಸಲೀಸಾಗಿ, ಸಮರ್ಥವಾಗಿ ಪಳಗಿಸಿಕೊಂಡಿರುವುದನ್ನು ನಾವು ಕಾಣಬಹುದು. ಭಾಷೆಯ ಪ್ರೌಢಿಮೆ, ಪದಪ್ರಯೋಗ, ಇಂಗ್ಲಿಷಿನ ಮಹಾಮಹಾ ಸಾಹಿತಿಗಳ ಕೃತಿಗಳ ಆಳವಾದ ಅರಿವು ಎದ್ದು ಕಾಣುತ್ತವೆ. ಶೈಲಿ ಸ್ವಲ್ಪ ಪೆಡಸು, ವಾಕ್ಯರಚನೆ ಗಡಸು ಎಂದು ತೋರುವುದಾದರೂ ವಿಷಯ ಪ್ರತಿಪಾದನೆಯ ದೃಷ್ಟಿಯಿಂದ ಅಸಹಜವೆನಿಸುವುದಿಲ್ಲ. ಮೇಲಾಗಿ ಡಿವಿಜಿ ಪ್ರಧಾನವಾಗಿ ಪ್ರೌಢ–classical–ಎನ್ನಬಹುದಾದ ಮನೋಪ್ರವೃತ್ತಿಯವರು. ಅವರ ಲೇಖನಗಳಲ್ಲಿ ಇದನ್ನೇ ಕಾಣುವುದು ಸಹಜ. ಕನ್ನಡ ಬರೆಹಗಳಲ್ಲೂ

ಹಾಗೆಯೆ. ಒಂದು ವಿಷಯ ಸ್ಪಷ್ಟ ಡಿವಿಜಿ ಬರೆದದ್ದು ಪಾಂಡಿತ್ಯ ಪ್ರದರ್ಶನಕ್ಕಾಗಿ ಯೇನೂ ಅಲ್ಲ. ವಿಷಯ ಪ್ರತಿಪಾದನೆ ಮಾತ್ರ ಅವರ ಗುರಿ. ಅದಕ್ಕೆ ಯಾವ ಶೈಲಿ ಸೂಕ್ತ ಎಂದು ಅವರಿಗೆ ತೋರಿದೆಯೊ ಅದನ್ನೇ ಸಹಜವಾಗಿ ಬಳಸಿಕೊಂಡಿದ್ದಾರೆ.

ರಾಜಕೀಯ, ತಾತ್ತ್ವಿಕ ಮುಂತಾದ ವಿಷಯ ಪ್ರತಿಪಾದನೆಗೆ ಡಿವಿಜಿ ಇಂಗ್ಲಿಷನ್ನು ಬಳಸಿದರು. ಆದರೆ ಸ್ವಂತಿಕೆಯ ಸಾಹಿತ್ಯ ರಚನೆಗೆ ಕನ್ನಡವನ್ನೇ ಹಿಡಿದರು. ಮನೆಯಲ್ಲಿ, ಶಾಲೆಯಲ್ಲಿ, ಗೆಳೆಯರ ಬಳಗದಲ್ಲಿ, ಪಂಡಿತರ ಸಹವಾಸದಲ್ಲಿ ಇದ್ದ ಕನ್ನಡ ವಾತಾವರಣ, ಡಿವಿಜಿ ಅವರಿಗೆ ಕನ್ನಡವನ್ನೇ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಕೊಟ್ಟಿತ್ತು.

ಡಿವಿಜಿ ಕನ್ನಡ ಬರೆಹ ಆರಂಭಿಸಿದ್ದು ಜೀವನ ಚರಿತ್ರೆ–ವ್ಯಕ್ತಿಚಿತ್ರಗಳಿಂದ. 1911ರಲ್ಲಿ ಹೊರ ಬಂದ 'ದಿವಾನ್ ರಂಗಾಚಾರ್ಲು' ಮೊದಲ ಕೃತಿ. ರಂಗಾಚಾರ್ಲು ಮದರಾಸಿನವರು. ಮೈಸೂರಿನ ಒಂದು ಪರ್ವಕಾಲದಲ್ಲಿ ಬಂದು ರಾಜ್ಯದ ಮುಖ್ಯಾಧಿಕಾರಿಯಾಗಿದ್ದು, ಎಳೆಯ ಮಹಾರಾಜ ಚಾಮರಾಜ ಒಡೆಯರಿಗೆ ಸೂಕ್ತ ಮಾರ್ಗದರ್ಶನ ನೀಡಿದರು. ಅಲ್ಲಿಯವರೆಗೆ ಪಾಳೆಯಗಾರ ಪ್ರಭುತ್ವದಂತೆಯೆ ಇದ್ದ ಮೈಸೂರನ್ನು ಆಧುನಿಕ ಆಡಳಿತ ವ್ಯವಸ್ಥೆಗೆ ಸಜ್ಜುಗೊಳಿಸಿದರು. ಮೇಲಾಗಿ ಅಂದಿನ ಸರ್ವಾಧಿಕಾರದ ಅರಸೊತ್ತಿಗೆಯ ಕಗ್ಗಾಡಿನಲ್ಲಿಯೂ ಪ್ರಜಾಪ್ರಭುತ್ವದ ಬೀಜ ಬಿತ್ತಿ ಸಸಿ ಮಾಡಿದವರು. ಇಡೀ ಭಾರತದಲ್ಲೆ ಮೊಟ್ಟಮೊದಲನೆಯದಾಗಿ 'ಪ್ರಜಾಪ್ರತಿನಿಧಿ ಸಭೆ'ಯನ್ನು ಮೈಸೂರಿನಲ್ಲಿ ಏರ್ಪಡಿಸಿದರು. ನಮ್ಮ ಹಿಂದಿನ ಶಾಸ್ತ್ರಾದಿಗಳು ರಾಜ್ಯಾಡಳಿತದ ಬಗ್ಗೆ ಯಾವ ಕಲ್ಪನೆಯನ್ನು ಮೂಡಿಸಿದ್ದವೊ, ನಡುಕಲ ಕಾಲದಲ್ಲಿ ಶ್ರೀ ವಿದ್ಯಾರಣ್ಯರು ಯಾವ ರಾಜಕಾರಣ ಸ್ವರೂಪವನ್ನು ನಿರ್ದೇಶಿಸಿದ್ದರೋ, ಅಂಥ ನಿಃಸ್ವಾರ್ಥವೂ, ಧರ್ಮ ಆಧಾರಿತವೂ, ಪ್ರಾಜ್ಞವೂ ಆದ ರಾಜಕಾರಣಕ್ಕೆ ಜೀವಂತ ನಿದರ್ಶನವನ್ನು ದಿವಾನ್ ರಂಗಾಚಾರ್ಲು ಅವರಲ್ಲಿ ಡಿವಿಜಿ ಕಂಡರು. ಅಂತೆಯೆ ಅವರ ಜೀವನ ಚರಿತ್ರೆಯನ್ನು ಬರೆದರು. ಆ ಪುಸ್ತಕವೇ ಅನೇಕ ಹಿರಿಯರ ಗಮನ ಸೆಳೆದು ಡಿವಿಜಿಯವರಿಗೆ ಖ್ಯಾತಿಯನ್ನು ತಂದುಕೊಟ್ಟದ್ದನ್ನು ಕಂಡಾಗಿದೆ. ಅದು ಈವರೆಗೆ ಐದು ಮುದ್ರಣಗಳನ್ನು ಕಂಡಿದೆ.

ಭಾರತದ ಪುನರುತ್ಥಾನದ ಆದ್ಯ ಪುರುಷರಾದ ರಾಜಾರಾಮ ಮೋಹನ ರಾಯರನ್ನು ಕುರಿತು ಡಿವಿಜಿ ಅವರು ಒಂದು ಸಣ್ಣ ಪುಸ್ತಿಕೆ ರಚಿಸಿದರು. 'ಸುಮತಿ' ಗ್ರಂಥಮಾಲೆಯಲ್ಲಿ ಬಂದ ಈ ಪುಸ್ತಕದ ಬೆಲೆ ಒಂದೇ ಆಣೆ! ಅದೇ ರೀತಿಯ ಇನ್ನೊಂದು ಅಂಗೈ ಅಗಲದ ಪುಸ್ತಕ 'ದಾದಾಭಾಯಿ ನವರೋಜಿ' ಅವರ ಜೀವನ

ಚಿತ್ರ. ನವರೋಜಿ ಅವರನ್ನು ಡಿವಿಜಿ 'ಭಾರತೀಯ ಮಹಾಕುಲವೃದ್ಧ' ಎಂದು ಕರೆದಿದ್ದಾರೆ. 34 ಪುಟಗಳಲ್ಲಿ ಡಿವಿಜಿ ಆ ಮಹಾಪುರುಷನ ಜೀವಿತವನ್ನು ಅಡಕಗೊಳಿಸಿದ್ದಾರೆ. ನವರೋಜಿಯವರ ಮುಖ್ಯ ಭಾಷಣಗಳ ಸೂಚಿ, ಅವರ ಗುಣಪ್ರಶಂಸೆಯ ಪದ್ಯಾವಳಿ—ಹಳೆಯ ವೃತ್ತ ಷಟ್ಪದಿಗಳಲ್ಲಿ—ಈ ಪುಸ್ತಿಕೆಯಲ್ಲಿವೆ. ಮಹದ್ವಿಷಯವನ್ನು ಚಿಕ್ಕದಾಗಿ ಚೊಕ್ಕವಾಗಿ ಹೇಳುವ ಕೃತಿ ಇದು.

ನವರೋಜಿಯ ಶಿಷ್ಯರು ಗೋಪಾಲಕೃಷ್ಣ ಗೋಖಲೆ. ಮಿತವಾದಿ ಪಕ್ಷದ ಮುಂದಾಳು. ಡಿವಿಜಿಯವರ ಪರಮ ಗುರು. ಅವರನ್ನು ಕುರಿತು ಬರೆದಿರುವ ಪುಸ್ತಕ *'ಗೋಪಾಲಕೃಷ್ಣ ಗೋಖಲೆ'*. ಪ್ರಸಿದ್ಧ ಕೃತಿ. "ಪರಹಿತದೊಳೆ ತನ್ನ ಹಿತವ ಕಂಡವನೀತಂ ! ಗುರುವೀತಂ ನಮಗೆ" "ನಮ್ಮ ದೇಶಪ್ರೀತಿ ಸತ್ಯವಾದದ್ದಾದರೆ, ನಮ್ಮ ಸ್ವರಾಜ್ಯ ಉಳಿದು ಸಫಲವಾಗಬೇಕಾದರೆ, ನಮ್ಮ ನಮ್ಮ ಬುದ್ಧಿಗಳನ್ನು ನಾವು ಯಾರಿಗೂ ಅಡವು ಹಾಕದೆ ನಮ್ಮ ಅಂತಸ್ಸಾಕ್ಷಿಗಳಿಗೆ ಯಾವ ಬಣ್ಣದ ಮುಸುಕನ್ನೂ ಕವಿಸದೆ ನಿರ್ಮಲವೂ ಸ್ವತಂತ್ರವೂ ಆದ ಸತ್ಯ ಹಿತದೃಷ್ಟಿಯಿಂದ ಸಾರ್ವಜನಿಕ ವಿಚಾರಗಳನ್ನು ನೋಡಿ ನಡೆಸಬೇಕು. ಇದು ಎಲ್ಲ ಕಾಲಕ್ಕೂ ಅನ್ವಯಿಸುವ ರಾಷ್ಟ್ರಕ ಧರ್ಮ. ಆ ಶ್ರೇಷ್ಠ ಧರ್ಮಕ್ಕೆ ಆದರ್ಶಪ್ರಾಯವಾದುದು ಗೋಖಲೆಯವರ ಜೀವನ." ಈ ಜೀವನ ಚರಿತ್ರೆ 1915ರಲ್ಲಿ ಮೊದಲು ಪ್ರಕಟಗೊಂಡಿತು. ಎಂಟು ಮುದ್ರಣಗಳನ್ನು ಕಂಡಿದೆ. ಶಾಲೆಗಳಿಗೆ ಪಠ್ಯಪುಸ್ತಕ ವಾಗಿದೆ. ಗೋಖಲೆ ಅವರನ್ನು ಕುರಿತಂತೆ ಆಧಾರಭೂತವಾದ, ನಿಷ್ಠವಾದ ಕೃತಿ. ಇಲ್ಲಿನ ಗದ್ಯ ಗಂಭೀರ. ಆದರೆ ಹೃದ್ಯ. ಸಂಕ್ಷಿಪ್ತತೆ–ಸಮಗ್ರತೆ ಈ ಜೀವನ ಚರಿತ್ರೆಗಳ ಪ್ರಧಾನ ಬಾಹ್ಯಗುಣಗಳು. ಆಂತರಿಕವಾಗಿ ಅವುಗಳಲ್ಲಿನ ವಿಷಯ ನಿಷ್ಠೆ, ವ್ಯಕ್ತಿಗೌರವ, ಆಯಾ ವ್ಯಕ್ತಿಗಳ ಅಂತಸ್ಸತ್ವದ ದರ್ಶನ.

ರಂಗಾಚಾರ್ಲು, ಹಾಗೂ ಗೋಖಲೆ ಜೀವನ ಚರಿತ್ರೆಗಳನ್ನು ಕುರಿತು ಖ್ಯಾತ ಸಾಹಿತಿ ವಿ.ಸೀ. ಹೀಗೆ ಹೇಳುತ್ತಾರೆ–"ಈ ಎರಡೂ ಜೀವನ ಚರಿತ್ರೆಗಳು ಆ ಪ್ರಕಾರದಲ್ಲಿ ಮಾದರಿ ಆದವು. ಆ ಮಹಾಪುರುಷರ ಜೀವಿತ, ಕಾಲಗಳನ್ನು ಆವಾಹಿಸುತ್ತವೆ. ಅವುಗಳ ಗದ್ಯ ಸ್ಪಷ್ಟ, ಬಿಗಿ, ಗಂಭೀರ. ಅಂಥ ಕೆಲಸಕ್ಕೆ ಉತ್ಕೃಷ್ಟ ಎನಿಸಬಲ್ಲ ಶೈಲಿ." (D.V.G. P-59).

ರಾಷ್ಟ್ರಕ ಧರ್ಮ ಎಂದು ಯಾವುದನ್ನು ಡಿವಿಜಿ ಭಾವಿಸಿಕೊಂಡಿದ್ದರೊ, ತಮ್ಮ ರಾಜ್ಯಶಾಸ್ತ್ರಾದಿ ಗ್ರಂಥಗಳಲ್ಲಿ ವಿವರಿಸಿದ್ದರೊ, ಅಂಥ ಧರ್ಮವನ್ನು ಬಾಳಿನಲ್ಲಿ ನಡೆಸಿದವರು ಮೇಲೆ ಹೇಳಿದ ರಂಗಾಚಾರ್ಲು, ಗೋಖಲೆ, ನವರೋಜಿ ಮಹನೀಯರು. ಅಂತೆಯೆ ಡಿವಿಜಿ ಈ ಮೂವರ ಜೀವನ ಚರಿತ್ರೆಗಳನ್ನು

ಬರೆದರು. ಈ ರೀತಿಯಲ್ಲಿ ಈ ಕೃತಿಗಳು ಡಿವಿಜಿ ಅವರ ರಾಷ್ಟ್ರಕ ಧರ್ಮ ಪ್ರತಿಪಾದನೆಗೆ ಪೂರಕವಾಗಿ ಉದಾಹರಣೆಯಾಗಿ ನಿಲ್ಲುವ ಕೃತಿಗಳು.

ಜೀವನ ಚರಿತ್ರೆ ಎಂಬ ಪ್ರಕಾರ ಕನ್ನಡಕ್ಕೆ ಹೊಸದಾಗಿದ್ದ ಕಾಲದಲ್ಲಿ ಬಂದವು (ಈಗಲೂ ಈ ಪ್ರಕಾರ ಸಮೃದ್ಧವಾಗಿಯೇನಿಲ್ಲ). ಆಗ ಇಂಥ ನಡಗೆ ಮಾದರಿ ಇರಲಿಲ್ಲ. ಭಾಷೆ ಇರಲಿಲ್ಲ. ಅದನ್ನೂ ಡಿವಿಜಿ ತಾವೇ ರೂಪಿಸಿಕೊಳ್ಳಬೇಕಾಯಿತು. ವ್ಯಕ್ತಿಯ ಬಗ್ಗೆ ಗೌರವ, ಗುಣಗ್ರಾಹಕತೆ, ದೋಷಗಳ ಬಗ್ಗೆ ಎಚ್ಚರ, ಅಗತ್ಯ ವಿಚಾರ ಸಂಗ್ರಹಣೆ, ಆಧಾರ ಭೂಯಿಷ್ಠತೆ, ಮೇಲಾಗಿ ಹೃದ್ಯವೆನಿಸುವ ಗದ್ಯ ಶೈಲಿ–ಇವೆಲ್ಲ ಇದ್ದರೇನೇ ಜೀವನ ಚರಿತ್ರೆ ಸಾರ್ಥಕವೆನಿಸೀತು. ಈ ನಿಟ್ಟಿನಿಂದ ನೋಡಿದರೆ ಡಿವಿಜಿಯವರ ಈ ಕೃತಿಗಳ ಮಹತ್ವ ಎದ್ದು ಕಾಣುತ್ತದೆ.

ಇನ್ನೊಂದು ಮಹತ್ವದ ಜೀವನ ಚರಿತ್ರೆಯ ಪ್ರಯತ್ನ ಶ್ರೀ ವಿದ್ಯಾರಣ್ಯ ಸ್ವಾಮಿಗಳನ್ನು ಕುರಿತದ್ದು. ವಿದ್ಯಾರಣ್ಯರು ಡಿವಿಜಿ ಅವರ ಮನಸ್ಸನ್ನು ತುಂಬಿಕೊಂಡ ಮಹಾಪುರುಷರಲ್ಲಿ ಒಬ್ಬರು. ಚಿಕ್ಕಂದಿನಿಂದಲೇ ಅವರನ್ನು ಕುರಿತಂತೆ ಅಭ್ಯಾಸ, ಆಲೋಚನೆಗಳನ್ನು ಮಾಡಿದ್ದರು ಡಿವಿಜಿ. ತತ್ಫಲವಾಗಿ ರಚಿತವಾದದ್ದು ಮೊದಲು *'ವಿದ್ಯಾರಣ್ಯ ವಿಜಯ'* ಎಂಬ ನಾಟಕ, 1917ರಲ್ಲಿ. ಅನಂತರ ಬಂದವು *'ವಿದ್ಯಾರಣ್ಯರ ಸಮಕಾಲೀನರು'*, *'ವಿದ್ಯಾರಣ್ಯರು ಮತ್ತು ಅವರ ಕಾಲ'* ಹಾಗೂ *'ವಿದ್ಯಾರಣ್ಯರ ವೃತ್ತಾಂತ'*. ಈ ಮೂರು ಕೃತಿಗಳೂ ಜೀವನ ಚರಿತ್ರೆಯ ಪರಿಧಿಯಲ್ಲೆ ಬರುತ್ತವೆ. ಡಿವಿಜಿಯವರ ವಿದ್ಯಾರಣ್ಯ ವಾಙ್ಮಯ ಪ್ರತ್ಯೇಕವಾಗಿ ಗಮನಿಸಬೇಕಾದ ಒಂದು ಗುಚ್ಛ.

ತಮ್ಮ *'ರಾಜ್ಯಶಾಸ್ತ್ರ'* ಗ್ರಂಥದಲ್ಲಿ ಡಿವಿಜಿಯವರು ವಿದ್ಯಾರಣ್ಯರ ರಾಜಕೀಯ–ಧಾರ್ಮಿಕ ನೆಲೆಗಟ್ಟನ್ನು ಗುರುತಿಸಿ ಪ್ರತಿಪಾದಿಸಿದ್ದಾರೆ. ವಿದ್ಯಾರಣ್ಯರ 'ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ' ಎಂಬು ವಾಕ್ಯವನ್ನು, ತಮ್ಮ ಜೀವಿತದ, ತಮ್ಮ ಪತ್ರಿಕೆಯ, ತಮ್ಮ ಸಂಸ್ಥೆಯ ಧ್ಯೇಯವಾಗಿಯೆ ಇಟ್ಟುಕೊಂಡಿದ್ದರು. ಪ್ರಾಚೀನ ಭಾರತೀಯ ತತ್ತ್ವಶಾಸ್ತ್ರದ ಮೌಲ್ಯಗಳ ಪುನರ್‌ಪ್ರತಿಪಾದನೆ, ಆ ಮೌಲ್ಯಗಳ ಅಥವಾ ಧರ್ಮದ ಉಳಿವಿಗಾಗಿ ಬೆಳವಣಿಗೆಗಾಗಿ ಅಗತ್ಯವಾದ ರಾಜ್ಯಸ್ಥಾಪನೆ—ಇದು ವಿದ್ಯಾರಣ್ಯರ ಜೀವಿತಾದರ್ಶ, ಸಿದ್ಧಿ. ವಿದ್ಯಾರಣ್ಯರು ಧಾರ್ಮಿಕ ವ್ಯಕ್ತಿ, ವೇದಾಂತಪರರು, ವಿದ್ವಾಂಸರು. ಅಧ್ಯಯನ–ಅಧ್ಯಾಪನ ಅವರ ಸ್ವಧರ್ಮ–ಸ್ವಕರ್ಮ. ಆದರೆ ಅವರ ಕಾಲದಲ್ಲಿ ನಾಡಿಗೆ ಕವಿದಿದ್ದ ಕತ್ತಲೆ ಅವರನ್ನು ಲೌಕಿಕಕ್ಕೆ ಸೆಳೆಯಿತು. ತಮ್ಮ ನಿತ್ಯಧರ್ಮವಾದ ಆಧ್ಯಾತ್ಮವನ್ನು ಬದಿಗಿಟ್ಟು ಆಪದ್ಧರ್ಮವಾದ ರಾಜಕಾರಣಕ್ಕೆ ಬಂದರು. ವಿಜಯನಗರ ಸಾಮ್ರಾಜ್ಯವನ್ನು

ಸ್ಥಾಪಿಸಿದರು. ಧರ್ಮಾಧಾರಿತ ರಾಜಕೀಯ ವ್ಯವಸ್ಥೆಗೆ ಬುನಾದಿ ಹಾಕಿದರು. ಆಪದ್ಧರ್ಮ ಮುಗಿದೊಡನೆಯೆ ಅವರು ತಮ್ಮ ನಿತ್ಯಧರ್ಮವಾದ ಆಧ್ಯಾತ್ಮಕ್ಕೆ ಮರಳಿದರು. ಶೃಂಗೇರಿ ಪೀಠದ ಆಚಾರ್ಯರಾದರು. ಈ ಅನಾಸಕ್ತ ಕರ್ಮನಿಷ್ಠೆ ಡಿವಿಜಿಯವರಿಗೆ ವಿಶೇಷವಾಗಿ ಹಿಡಿಸಿತು. ಅಂತೆಯೆ ಅವರು ವಿದ್ಯಾರಣ್ಯರ ಜೀವನ, ಕಾರ್ಯ, ಕಾಲ ಇವುಗಳ ಬಗ್ಗೆ ಬೇಕಾದಷ್ಟು ಅಧ್ಯಯನ ಮಾಡಿದ್ದರು. ಆ ಕಾಲದ ಐತಿಹಾಸಿಕ ಸಂಗತಿಗಳು, ವೇದಾಂತ ಗ್ರಂಥಗಳು, ಅಂದು ಇದ್ದ ಇತರ ಸಮಕಾಲೀನ ಮಹಾವ್ಯಕ್ತಿಗಳು ಹಾಗೂ ಅವರ ಜೀವನ, ಶಾಸನಗಳು ಇತ್ಯಾದಿ ಎಲ್ಲ ಮಾಹಿತಿಯನ್ನು ಅವಲೋಕಿಸಿದ್ದರು. ಈ ಕೃತಿಗುಚ್ಛಕ್ಕೆ ಇಂಥ ಭದ್ರವಾದ ಆಧಾರ ಹಿನ್ನೆಲೆ ಉಂಟು.

'*ವಿದ್ಯಾರಣ್ಯ ವಿಜಯ*' ನಾಟಕದ ವಿಷಯ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ. ವಿದ್ಯಾರಣ್ಯರಿಗೆ ಇದ್ದ ಅಂತರ್ಭಾವಗಳು, ಅವರು ಶಿಷ್ಯರಿಗೆ ಮಾಡಿದ ಉಪದೇಶ, ರಾಜಕೀಯ ವ್ಯಕ್ತಿಗಳಾದ ಹರಿಹರ, ಬುಕ್ಕರ ವಿಚಾರಗಳು, ಜನತೆಯ ಆಶೋತ್ತರ ಇವೆಲ್ಲವನ್ನೂ ಸಾಧ್ಯವಾದಷ್ಟು ಸಂಗತಿಗಳಿಂದ ಆಯ್ದುಕೊಂಡು ಕ್ರೋಢೀಕರಿಸಿ ಹೆಣೆದ ನಾಟಕ. ಇದರಲ್ಲಿ ನಾಟಕೀಯಾಂಶಕ್ಕಿಂತ ವಿಚಾರವೇ ಮುಖ್ಯ. ಕಂದ–ವೃತ್ತ–ಪದ್ಯಗಳ ಹಳೆಯ ಶೈಲಿ. ರಂಗಮಂಟಪಕ್ಕೆ ಇದು ಅಸಾಧ್ಯ. ಓದಿ ಮನನ ಮಾಡತಕ್ಕುದು.

'*ವಿದ್ಯಾರಣ್ಯರ ಸಮಕಾಲೀನರು*' ದೊಡ್ಡ ಗ್ರಂಥ. ಆ ಕಾಲದಲ್ಲಿ ಇದ್ದು ವಿದ್ಯಾರಣ್ಯರಿಗೆ ಗುರುಗಳಾಗಿದ್ದವರು ಶ್ರೀಗಳಾದ ವಿದ್ಯಾತೀರ್ಥರು, ಭಾರತೀ ಕೃಷ್ಣತೀರ್ಥರು, ಶಂಕರಾನಂದರು ಹಾಗೂ ಶ್ರೀಕಂಠನಾಥರು. ಸಾಯಣ ಮತ್ತು ಭೋಗನಾಥ ವಿದ್ಯಾರಣ್ಯರ ತಮ್ಮಂದಿರು. ಸಾಯಣರ ವೇದಭಾಷ್ಯ ಲೋಕ ಪ್ರಸಿದ್ಧ. ಭೋಗನಾಥ ಖ್ಯಾತ ಕವಿ. ಈ ಆರು ಮಹನೀಯರ ಜೀವಿತ, ವಿಚಾರಗಳು, ಅವರು ವಿದ್ಯಾರಣ್ಯರ ಮೇಲೆ ಬೀರಿದ ಪ್ರಭಾವ, ನೀಡಿದ ನೆರವು, ಇವರೆಲ್ಲರ ಆಲೋಚನೆ ಸಾಧನೆಗಳ ಒಟ್ಟು ಪರಿಣಾಮ ವಿದ್ಯಾರಣ್ಯರ ಮಹಾಕಾರ್ಯದಲ್ಲಿ ಮಿಳಿತಗೊಂಡ ಬಗೆ—ಇದೆಲ್ಲವನ್ನೂ ಈ ಪುಸ್ತಕ ತಿಳಿಸುತ್ತದೆ. ಚಾರಿತ್ರಿಕ ದಾಖಲೆಗಳು ಇಲ್ಲದಿದ್ದರೂ, ಅಂದಿನ ಕಾಲದ ಶಾಸನ, ಕಾವ್ಯಗಳು, ಭಾಷ್ಯಗಳು ಇತ್ಯಾದಿ ಮಾಹಿತಿಗಳನ್ನೆಲ್ಲ ಸೂಕ್ತವಾಗಿ ಬಳಸಿಕೊಂಡು ಈ ಗ್ರಂಥವನ್ನು ಡಿವಿಜಿ ರಚಿಸಿದಾರೆ. ಇಲ್ಲಿ ವ್ಯಕ್ತಿಜೀವನ ಒಂದು ಅಂಶವಾದರೆ, ಆ ಜೀವನದ ಹಿನ್ನೆಲೆ, ಸಾಧನೆ, ಆಲೋಚನೆಗಳು ಮುಖ್ಯವಾದ ಇನ್ನೊಂದು ಅಂಶ. ಈ ಎರಡು ಮಜಲುಗಳಲ್ಲಿ ಇಲ್ಲಿ ಆರು ಜನ ಮಹಾಪುರುಷರು ಚರಿತ್ರಗೊಂಡಿದಾರೆ.

'ವಿದ್ಯಾರಣ್ಯ ವೃತ್ತಾಂತ' ಮತ್ತು 'ವಿದ್ಯಾರಣ್ಯರು ಮತ್ತು ಅವರ ಕಾಲ' ಇವು ವಿದ್ಯಾರಣ್ಯರನ್ನು ಕುರಿತ ಇನ್ನೆರಡುಲೇಖನಗಳು. ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (ಜುಲೈ 20, ಏಪ್ರಿಲ್ 22) ಪ್ರಕಟಗೊಂಡವು. ವಿದ್ಯಾರಣ್ಯರ ಕಾಲ ಎಷ್ಟು ವಿಷಮವಾಗಿತ್ತು, ಆಗ ಪಾಶ್ಚಾತ್ಯರ ಸ್ಥಿತಿಗತಿ ಹೇಗಿತ್ತು, ಭಾರತದಲ್ಲಿ ವೇದ ಧರ್ಮ ಪುನರುತ್ಥಾನ ಎಷ್ಟು ಅವಶ್ಯವಾಗಿತ್ತು, ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪ್ರಚೋದನ ಶಕ್ತಿಯನ್ನು ನೀಡಿ, ಅದಕ್ಕಾಗಿ ತಮ್ಮ ಆಧ್ಯಾತ್ಮಿಕ ತಪಸ್ಸನ್ನೆಲ್ಲ ಧಾರೆಯೆರೆದು ಹೇಗೆ ನಮ್ಮ ಸನಾತನ ಸಂಸ್ಕೃತಿಯನ್ನು ಗಂಡಾಂತರದಿಂದ ಪಾರು ಮಾಡಿ ಮತ್ತೆ ನೆಲೆಗೊಳಿಸಿದರು—ಈ ವಿಷಯ ಇಲ್ಲಿ ಪ್ರತಿಪಾದಿತವಾಗಿದೆ.

ಡಿವಿಜಿಯವರು ವಿದ್ಯಾರಣ್ಯರೆಂದು ಹೇಳಲಾದ ಕೃತಿಗಳ ಸಮಗ್ರ ಪರಿಚಯ ಮಾಡಿಕೊಡುವ ಉದ್ದೇಶವನ್ನು ಹೊಂದಿದ್ದರು. ಮೇಲ್ಕಂಡ ಕೃತಿಗಳಲ್ಲಿ 'ವ್ಯವ ಹಾರ ಮಾಧವೀಯ' ಎಂಬುದರ ಪರಿಚಯವಿದೆ. ವಿದ್ಯಾರಣ್ಯರು ಪ್ರತಿಪಾದಿ ಸಿದ ರಾಜ್ಯಕ್ರಮ, ರಾಜನೀತಿ, ವ್ಯವಹಾರ ನ್ಯಾಯನಿರ್ಣಯ ಇವುಗಳ ವಿವರಣೆ ಇದೆ. ಈ ನೀತಿಯನ್ನು ಪಾಶ್ಚಾತ್ಯ ರಾಜನೀತಿಯೊಂದಿಗೆ ತೂಗಿ ನೋಡಿರುವುದು ವಿಶೇಷ ಆಸಕ್ತಿಯ ಅಂಶ. ಲೌಕಿಕ–ವೈದಿಕಗಳಲ್ಲಿ ಧಾರ್ಮಿಕ–ರಾಜಕೀಯಗಳಲ್ಲಿ ಅನ್ಯೋನ್ಯ ಸಂಬಂಧವನ್ನು ವಿದ್ಯಾರಣ್ಯರು ಪ್ರತಿಪಾದಿಸಿದರು. ಧರ್ಮಕ್ಕೆ ಗುರು ಪೀಠ ಅಂತರಂಗ, ರಾಜ್ಯ ಬಹಿರಂಗ ಎಂದು ಹೇಳಿದರು. ದೇಶಕ್ಕೆ ಹಾನಿ ಆದರೆ ಧರ್ಮಕ್ಕೂ ಗ್ಲಾನಿ. ಆಗ ಜ್ಞಾನಿ ಧರ್ಮದ ಸಲುವಾಗಿ ರಾಜ್ಯವ್ಯವಸ್ಥೆಯನ್ನು ಕಾಪಾಡಲು ಮುಂದಾಗಬೇಕು. ಧರ್ಮದ ಬೆಂಬಲ ಇರುವ ಅಧಿಕಾರ ದೊಡ್ಡ ಸಾಧನೆಗಳನ್ನು ಮಾಡಬಲ್ಲದು. ಜನನಿಷ್ಠೆಯುಳ್ಳ ರಾಜ್ಯವ್ಯವಸ್ಥೆ ಉನ್ನತಿಗೆ ಏರ ಬಲ್ಲದು. ಇದು ವಿದ್ಯಾರಣ್ಯ ವೃತ್ತಾಂತದಿಂದ ಮಥಿತವಾಗುವ ವಿಚಾರ.

ಡಿವಿಜಿ ಇಷ್ಟರಿಂದಲೇ ತೃಪ್ತರಾಗಿರಲಿಲ್ಲ. ವಿದ್ಯಾರಣ್ಯರ ಇತಿಹಾಸದ ಬಗ್ಗೆ ಇನ್ನೂ ವಿಸ್ತಾರವಾಗಿ ಸಂಪೂರ್ಣವಾಗಿ ಅಧ್ಯಯನ ಮಾಡಿ ಕೃತಿರಚನೆ ಮಾಡಬೇಕೆಂದಿದ್ದರು. ಅದಕ್ಕಾಗಿ ಕೊನೆಗಾಲದವರೆಗೂ ಅನೇಕ ಆಕರಗಳನ್ನು ಮಾಹಿತಿಗಳನ್ನು ಸಂಗ್ರಹಿಸಿಕೊಂಡಿದ್ದರು. ಆದರೆ ಆ ಉದ್ದೇಶ ಪೂರೈಸಲಿಲ್ಲ. ಪೂರೈಸಿದ್ದಿದ್ದರೆ, ಪ್ರಾಯಶಃ ವಿದ್ಯಾರಣ್ಯರ ಸಮಗ್ರ ಜೀವನ ಚರಿತ್ರೆ ಕನ್ನಡಕ್ಕೆ ಒಂದು ಅಸದೃಶ ಕೊಡುಗೆ ಆಗುತ್ತಿತ್ತು !

1911ರಲ್ಲಿ ಬಂದ 'ಕನಕಾಲುಕಾ' ಮೊದಲನೆಯ ನಾಟಕ. ಲಾರ್ಡ್ ಟೆನಿಸನ್ ಕವಿಯ 'ದಿ ಕಪ್' ಎನ್ನುವ ನಾಟಕದ ಕನ್ನಡ ರೂಪ. ಮೂಲ ನಾಟಕದ

ಪಾತ್ರಗಳನ್ನು ಭಾರತೀಕರಿಸಲಾಗಿದೆ. ಗೇಲೇಷಿಯನ್ಸ್ ಕಲಶ[illegible]ವರು ಆಗಿದ್ದಾರೆ–ರೋಮನರು ರೋಮಕರು. ಸೈನೊರಿಕ್ಸ್ ಸುವರ್ಣಾಕ್ಷನಾ[illegible]ದ್ದಾನೆ. ಆಂಟೋನಿಯಸ್ ಅನಂತಸೇನ ಆಗಿದ್ದಾನೆ. ಕಾಮ ಕಮಲಿನಿ ಆಗಿದ್ದಾಳೆ. ಪಾಶ್ಚಾತ್ಯ ನಾಟಕಗಳ ಈ ರೀತಿಯ ಕನ್ನಡ ರೂಪಾಂತರ ಅಂದಿನ ವಾಡಿಕೆ. ಈ ನಾಟಕ ರೂಪಾಂತರದಲ್ಲಿ ಡಿವಿಜಿ ಕೆಲವು ಬದಲಾವಣೆ ಮಾಡಿಕೊಂಡಿದ್ದಾರೆ. ಎರಡು ಹೊಸ ರಂಗ (ಅಂಕ)ಗಳು, ಪ್ರಸ್ತಾವನೆಯ ಪೂರ್ವರಂಗ, ತಾತ್ಪರ್ಯಸೂಚಕ ಉತ್ತರರಂಗ ಹಾಗೂ ಭಾರತೀಯ ಪದ್ಧತಿಯಂತೆ ಸೂತ್ರಧಾರ, ಭರತವಾಕ್ಯಗಳೂ ಸೇರಿವೆ. ರಾಜ್ಯಭ್ರಷ್ಟನಾದ ಸಾಮಂತರಾಜ ಸುವರ್ಣಾಕ್ಷ ಚಿನ್ನದ ಬಟ್ಟಲಿನಿಂದ ವಿಷ ಕುಡಿದು ಸಾಯುವುದು ಇಲ್ಲಿನ ಕತೆ. ನಾಟಕದ ಶೈಲಿ ಗ್ರಂಥಸ್ಥ. ನಾಟಕ ಪ್ರಯೋಗಕ್ಕೆ ಕ್ಲಿಷ್ಟ. ಶಾರ್ದೂಲ ವಿಕ್ರೀಡಿತ, ವಾರ್ಧಕ ಷಟ್ಪದಿ ಕಂದ ಸೀಸಪದ್ಯ ಚೌಪದಿ ಮೊದಲಾದ ಪರಿಚಿತ ಛಂದಸ್ಸಿನ ಪದ್ಯಗಳ ಜೊತೆಗೆ, ಇಂದ್ರವಂಶ, ಉತ್ಸಾಹ, ಅಕ್ಕರಿಕೆ, ನೀತಿಕಾ, ಮಲ್ಲಿಕಾಮಾಲೆ, ಅಶ್ವಧಾಟಿ, ತೋಟಕ ಮೊದಲಾದ ಅಪರೂಪದ ಛಂದಸ್ಸುಗಳ ಪ್ರಯೋಗವನ್ನು ಇಲ್ಲಿ ಕಾಣಬಹುದು.

ಇದೇ ರೀತಿಯ ಇನ್ನೆರಡು ಅನುವಾದಗಳು, ಷೇಕ್ಸ್‌ಪಿಯರ್ ಮಹಾ[illegible]ವಿಯ 'ಮ್ಯಾಕ್‌ಬೆತ್' ಹಾಗೂ 'ಜಾಕ್[illegible]ಡ್'. ಇಲ್ಲಿ ಡಿವಿಜಿ ರೂಪಾಂತರ ಮಾಡಲು ಹೋಗಿಲ್ಲ. ಮೂಲದ ರೀತಿ ನೀತಿ, ಅಚ್ಚುಕಟ್ಟು, ಹೆಸರುಗಳನ್ನೇ ಉಳಿಸಿಕೊಂಡಿದ್ದಾರೆ. ಷೇಕ್ಸ್‌ಪಿಯರ್‌ನ ಹಲವು ಕೃತಿಗಳು ಆಗಲೇ 'ಹಿಂದೂ ಅವತಾರ' ತಾಳಿ ಬಂದಿದ್ದವು. ಶೂರಸೇನ ಚರಿತೆ, ರಾಮವರ್ಮ–ಲೀಲಾವತಿ ಇತ್ಯಾದಿ. "ಈ ಪರಿಯ ಕೆಲಸದಿಂದ ಉಪಯೋಗವಿಲ್ಲವೆಂದು ನಾನು ಹೇಳತಕ್ಕವನಲ್ಲ. ನಾನೂ ಅಂಥ ಕೆಲಸವನ್ನು ಸ್ವಲ್ಪ ಮಾಡಿದ್ದೇನೆ. ಆದರೆ ಹಾಗೆ ವೇಷಾಂತರ ಆಗುವುದು ಅಷ್ಟು ಪ್ರಯೋಜನಕರವಾಗಲಾರದು'' ಎಂದಿದ್ದಾರೆ ಡಿವಿಜಿ. "ಷೇಕ್ಸ್‌ಪಿಯರನ ಜಗತ್ತನ್ನು ಕೂಡಿದ ಮಟ್ಟಿಗೂ ಯಥಾವತ್ತಾಗಿ—ಇರುವುದು ಇರುವಂತೆಯೆ ತೋರಿಸಬೇಕು'' ಎಂಬುದು ಅವರ ಸಂಕಲ್ಪ. "ಆತನ ಲೋಕದ ಪ್ರತಿಬಿಂಬವನ್ನು, ಸಾಧ್ಯವಿರುವ ಮಟ್ಟಿಗೂ ಇಲ್ಲಿ ಇಳಿಸಬೇಕು'' ಎಂಬುದು ಅವರ ಪ್ರಯತ್ನ—ಈ ಸಂಕಲ್ಪ, ಪ್ರಯತ್ನ ಎರಡೂ ಮ್ಯಾಕ್‌ಬೆತ್‌ನಲ್ಲಿ ಬಹುಮಟ್ಟಿಗೆ ಈಡೇರಿರುವುದನ್ನು ನಾವು ಕಾಣಬಹುದು. ಷೇಕ್ಸ್‌ಪಿಯರ್‌ನ ಮುಖ್ಯ ನಾಟಕಗಳಲ್ಲಿ ಕೆಲವನ್ನಾದರೂ ಕನ್ನಡಿಸುವುದು ಡಿವಿಜಿಯವರ ಅಪೇಕ್ಷೆ. ಮ್ಯಾಕ್‌ಬೆತ್ ಅಂಥ ಪ್ರಸಿದ್ಧ ಕೃತಿ. ಗಾತ್ರದಲ್ಲಿ ಚಿಕ್ಕದು. ಇದರಿಂದ ಪ್ರಾರಂಭಿಸಿದರು. ಆದರೆ ಈ ಯೋಜನೆ ಮುಂದುವರಿಯಲಿಲ್ಲ.

'ಮ್ಯಾಕ್‌ಬೆತ್' ಷೇಕ್ಸ್‌ಪಿಯರನ ದುಃಖಾಂತ ನಾಟಕಗಳಲ್ಲಿ ಒಂದು. ರುದ್ರರಮಣೀಯ ಕಥಾನಕ, ಮಾನವ ಹೃದಯದ ದುಷ್ಟತನದ ಕರಾಳ ಮುಖದ ಚಿತ್ರಣ. ಆಸೆಗೆ ಒಳಗಾದ ಒಂದು ಚೇತನ ಪಡುವ ಪಾಡು! ಈ ರುದ್ರನಾಟಕವನ್ನು ಡಿವಿಜಿ ಸಮರ್ಥವಾಗಿ ಅನುವಾದಿಸಿದಾರೆ. ಅನುವಾದದಲ್ಲಿ ಗಾತ್ರ ಸ್ವಲ್ಪ ಹಿಗ್ಗಿದೆ. ಸರಳ ರಗಳೆಯ ಛಂದಸ್ಸು. ಅಲ್ಲಲ್ಲಿ ಸರಳ ಗದ್ಯ. "ಹಳೆಗನ್ನಡ, ನಡುಗನ್ನಡ, ಹೊಸಗನ್ನಡ, ಗ್ರಂಥದ ಕನ್ನಡ, ಬೀದಿಯ ಕನ್ನಡ—ಇವೆಲ್ಲವನ್ನು ಬೆರೆಸಿಬಿಟ್ಟಿದ್ದೇನೆ" ಎಂದಿದ್ದಾರೆ. ಸಂಧಿ, ವಿಸಂಧಿಗಳಲ್ಲಿ, ಪದಪ್ರಯೋಗಗಳಲ್ಲಿ, ಸಮಾಸಗಳಲ್ಲಿ, ಸಾಂಪ್ರದಾಯಿಕ ವ್ಯಾಕರಣದ ಕಟ್ಟುಪಾಡುಗಳನ್ನು ಅಲ್ಲಲ್ಲಿ ಕೊಂಚ ವ್ಯತ್ಯಾಸ ಮಾಡಿಕೊಂಡಿದಾರೆ. ವ್ಯಾಕರಣ ಶುದ್ಧಿಯ ಬಗ್ಗೆ ನಿಷ್ಠರಾದ ಡಿವಿಜಿ ತಾವು ವಹಿಸಿದ ಈ ಸ್ವಾತಂತ್ರ್ಯಕ್ಕಾಗಿ ವೈಯಾಕರಣಿಗಳ ಕ್ಷಮೆಯನ್ನು ಕೋರಿದ್ದಾರೆ ! ಅನುವಾದದ ಶ್ರೇಷ್ಠತೆ ಒಂದು ತೂಕವಾದರೆ, ಅದಕ್ಕೆ ಡಿವಿಜಿ ಬರೆದಿರುವ ಮುನ್ನುಡಿಯ ಮಹತ್ವ ಇನ್ನೊಂದು ತೂಕ. ಷೇಕ್ಸ್‌ಪಿಯರ್‌ನ ಮನೋಗತವನ್ನೆಲ್ಲ ಸಂಗ್ರಹಿಸಿಕೊಟ್ಟಿದ್ದಾರೆ. ರುದ್ರನಾಟಕದ ಸ್ವರೂಪ, ವೈಶಿಷ್ಟ್ಯ, ಮ್ಯಾಕ್‌ಬೆತ್ ನಾಟಕದ ಸ್ವಾರಸ್ಯ, ಇಲ್ಲಿನ ಜೀವನ ದೃಷ್ಟಿಯ ಪರಾಮರ್ಶೆ, ಭಾರತೀಯ ಚಿಂತನೆಗೆ ಹೋಲಿಕೆ, ಛಂದಸ್ಸಿನ ರೀತಿ, ಪದಪ್ರಯೋಗಗಳು ಇತ್ಯಾದಿ ಅನೇಕ ವಿಷಯಗಳನ್ನು ಕುರಿತ ಸಾರವತ್ತಾದ ನಿರೂಪಣೆ. ಹಿರಿಯ ವಿದ್ವಾಂಸರಾದ ಪ್ರೊ|| ಎ.ಎನ್. ಮೂರ್ತಿರಾಯರು ಹೇಳಿರುವ "Dr. D.V. Gundappa's Macbeth is scholarly and dignified" (ಡಾ|| ಡಿ.ವಿ. ಗುಂಡಪ್ಪನವರ ಮ್ಯಾಕ್‌ಬೆತ್ ಪಾಂಡಿತ್ಯಪೂರ್ಣ ಹಾಗೂ ಗಂಭೀರವಾಗಿದೆ") ಈ ಒಂದೇ ಮಾತು ಕೃತಿಯ ಕೀರ್ತಿಧ್ವಜ. ನಾಟಕ ಪ್ರಯೋಗವಾದುದುಂಟು. ಆದರೂ ಇಂದು ಇದು ನಾಟಕ ಪ್ರಯೋಗ ತಂಡದವರ ಗಮನಕ್ಕೆ ಬಂದಿಲ್ಲ. ಖೇದಕರ. ಏನೇ ಇರಲಿ ಈ ಕೃತಿ ಷೇಕ್ಸ್‌ಪಿಯರನ ಮಹಾಪ್ರತಿಭೆಯ ಹೊಳಹನ್ನು ನಮಗೆ ತೋರಿಕೊಡುತ್ತದೆ. ಡಿವಿಜಿಯವರ ಅನುವಾದ ಕೌಶಲವನ್ನು ಮೆರೆಯಿಸುತ್ತದೆ.

ಷೇಕ್ಸ್‌ಪಿಯರ್ ಅಧ್ಯಯನದ ಎರಡನೆಯ ಫಲ 'ಜಾಕ್ ಕೇಡ್' ಎಂಬ ಪ್ರಹಸನ. ಆರನೆ ಹೆನ್ರಿ ನಾಟಕದ ಎರಡನೆಯ ಭಾಗ ಕೇಡ್ ಪ್ರಕರಣ. ಹೆನ್ರಿ ದೊರೆಯ ಕಾಲದಲ್ಲಿ ಜಾಕ್‌ಕೇಡ್ ಎಂಬ ದೊಂಬಿ ನಾಯಕನೊಬ್ಬ ಜನರನ್ನು ಬೆದರಿಸುತ್ತ ಎತ್ತಿಕಟ್ಟುತ್ತ ಸಾಹಸದ ಆಟಗಳನ್ನು ತೋರುತ್ತ ಮೆರೆಯುತ್ತಾನೆ. ಸಿಕ್ಕವರ ಮೇಲೆಲ್ಲ ಏರಿಹೋಗುತ್ತಾನೆ. ಕೊನೆಗೆ ಕಾದಾಟದಲ್ಲಿ ಸಾಯುತ್ತಾನೆ. ಪ್ರಜಾರಾಜ್ಯದಲ್ಲಿ ಇಂಥ ಪುಂಡು ನಾಯಕರು ತಲೆಯೆತ್ತಿ ಮೆರೆಯುವುದು ಈಗ

ಅಪರೂಪವೇನೂ ಅಲ್ಲ. ಪ್ರಭುತ್ವದ ಸಡಿಲತೆಯನ್ನೂ ಜನರ ಮೌಢ್ಯ ಅಂಜಿಕೆಗಳನ್ನೂ ದುರುಪಯೋಗ ಮಾಡಿಕೊಂಡು, ನಡುವೆ ತಮ್ಮ ಬೇಳೆ ಬೇಯಿಸಿಕೊಳ್ಳಲು ಎಳಸುವ ಹೀನ ಜನ ಎಲ್ಲ ದೇಶದಲ್ಲೂ ಇರುವವರೇ, ಎಲ್ಲ ಕಾಲದಲ್ಲೂ ಇರುವವರೇ. ಇಂಗ್ಲೆಂಡಿನಂಥ ಸುವ್ಯವಸ್ಥಿತ ರಾಜಕಾರಣದಲ್ಲೂ ಇಂಥ ಪ್ರಸಂಗ ನಡೆಯಿತು. ಎಲ್ಲಿಯಾದರೂ ನಡೆದೀತು. ನಮ್ಮ ರಾಜಕೀಯದ ಈ ದೋಷ ದೌರ್ಬಲ್ಯಗಳನ್ನು ಪ್ರತಿಫಲಿಸಿ ತೋರಿಸುತ್ತದೆ ಈ ನಾಟಕ.

ಪ್ರಜಾಪ್ರಭುತ್ವದಲ್ಲಿ ಅಪಾರ ನಂಬಿಕೆಯಿಟ್ಟು ಅದಕ್ಕಾಗಿ ಬೇಕಾದಷ್ಟು ದುಡಿದವರು ಡಿವಿಜಿ. ಅಂಥ ಪ್ರಜಾರಾಜ್ಯ ನೆಲೆಗೊಂಡ ಮೇಲೆ ಅಲ್ಲಿ ಇಂಥ ವಿಕೃತಿಗಳು ತಲೆಯೆತ್ತುವುದು ಅಸಂಭವ ಅಲ್ಲ. ಡಿವಿಜಿ ಅವರ ಕಣ್ಣ ಮುಂದೆಯೆ ನಡೆದದ್ದೂ ಇಲ್ಲದಿಲ್ಲ. ಹಾಗಾಗಿ ಈ ನಾಟಕ ಪ್ರಕರಣ ನಮಗೆ ಒಂದು ಎಚ್ಚರ ನೀಡೀತು ಎನ್ನುವುದು ಅವರ ಉದ್ದೇಶ್ಯ. ಅದಕ್ಕಾಗಿ ಈ ಪ್ರಕರಣವನ್ನು ಆರಿಸಿಕೊಂಡು ನಮಗೆ ಕೊಟ್ಟಿದ್ದಾರೆ. ಇದು ಉಚಿತ ಎನ್ನುವುದು ಸ್ಪಷ್ಟ. ನಾಟಕ ಕೇವಲ 30 ಪುಟದ್ದು. ಎಂಟು ದೃಶ್ಯಗಳು. ಶೈಲಿ ಆಡುಮಾತಿನ ಗದ್ಯ. ದೃಶ್ಯಗಳು ಚಿಕ್ಕಚಿಕ್ಕವು. ಆರಂಭದಲ್ಲಿ ಸೂತ್ರಧಾರನ ಪೀಠಿಕಾಗೀತೆ, ಅಂತ್ಯದಲ್ಲಿ ಭರತಗೀತೆಗಳು ಇರುವುದು, ಒಂದು ರೀತಿಯ ವಿಚಿತ್ರ ಬೆರಕೆ ಆಗಿದೆ. ಪ್ರೇಕ್ಷಕರನ್ನು ನಗಿಸುವ ಪ್ರಹಸನ ಇದು ಎಂದು ಪೀಠಿಕಾಗೀತೆ ಸಭಿಕರನ್ನು ಸ್ವಾಗತಿಸುತ್ತದೆ. ಭರತ ಗೀತೆಯಾದರೊ, ಪ್ರಜಾರಾಜ್ಯದಲ್ಲಿ ಇಂಥ ಕೇಡರ ಹಾವಳಿ ಸಹಜ, ಎಚ್ಚರಿರಿ, ಎಚ್ಚರಿರಿ ಎನ್ನುತ್ತದೆ. "ಇದು ವನಮೃಗದ ಮೈತಬ್ಬು, ಫಣಿಯೊಡನೆ ಸರಸ....., ನಿಚ್ಚತೊಳೆಯದ ಮೈಯ ಕಜ್ಜಿ ಹಿಡಿದೀತು, ಎಚ್ಚರಿರಿ''. ಸತತ ಜಾಗೃತಿ ಪ್ರಜಾಪ್ರಭುತ್ವಕ್ಕೆ ಅತ್ಯಾವಶ್ಯಕ ಎಂಬ ಪಾಠವನ್ನು ಡಿವಿಜಿ ನಮಗೆ ಇಲ್ಲಿ ನೆನಪು ಮಾಡಿಕೊಟ್ಟಿದ್ದಾರೆ.

*'ತಿಲೋತ್ತಮೆ', 'ಪರಶುರಾಮ'*– ಎಂಬವು ಡಿವಿಜಿ ಅವರ ಸ್ವಂತ ರಚನೆಗಳು. ಎರಡೂ ನಮ್ಮ ಪುರಾಣ ಕತೆಗಳನ್ನು ಆಧರಿಸಿದವು. *'ತಿಲೋತ್ತಮೆ'* ಪ್ರಕಟವಾದದ್ದು 1921ರಲ್ಲಿ. ಬೆಳ್ಳಾವೆ ವೆಂಕಟನಾರಣಪ್ಪ, ತೋಗೆರೆ ನಂಜುಂಡಶಾಸ್ತ್ರಿ, ಕಡಬದ ನಂಜುಂಡಶಾಸ್ತ್ರಿ ಮುಂತಾದ ಹಿರಿಯ ಪಂಡಿತರು ಇದನ್ನು ಒಪ್ಪಿಕೊಂಡಿದ್ದರು. ಜೊತೆಗೇ ಕನ್ನಡದ ಹೊಸ ನಾಟಕದ ಅಧ್ವರ್ಯು ಎನಿಸಿಕೊಂಡ ಟಿ.ಪಿ. ಕೈಲಾಸಂ ಸಹ ಇದರಲ್ಲಿ ಸ್ವಾರಸ್ಯವನ್ನು ಕಂಡುಕೊಂಡಿದ್ದರು ಎಂದು ಡಿವಿಜಿ ಹೇಳಿದ್ದಾರೆ (ಮುನ್ನುಡಿ). ನಾಟಕದ ವಸ್ತು ಸುಂದೋಪಸುಂದರ ಪ್ರಕರಣ. ಹಿರಣ್ಯಕಶಿಪುವಿನ ವಂಶದಲ್ಲಿ ಹುಟ್ಟಿದ ಸುಂದರೋಪಸುಂದರೆಂಬ ರಾಕ್ಷಸರ ಲೋಕಕಂಟಕತನ, ಯಥಾಪ್ರಕಾರ ಬ್ರಹ್ಮನಲ್ಲಿ ದೇವತೆಗಳ ಅಹವಾಲು. ಈ ದುಷ್ಟರ

ಸ್ವಭಾವವಾದ ಕಾಮ ಕ್ರೋಧಗಳೇ ಅವರ ನಾಶಕ್ಕೆ ಹೇತುವಾಗುತ್ತವೆ ಎಂದು ಲೋಕಪಿತನ ಆಶ್ವಾಸನೆ. ಇದಕ್ಕೆ ಅಪ್ಸರೆಯಾದ ಸುರಸುಂದರಿ ತಿಲೋತ್ತಮೆಯ ನೆರವು. ಅವಳ ಚೆಲುವಿಗೆ ಮರುಳಾದ ಸುಂದರೋಪಸುಂದರು ಈವರೆಗೆ ಇದ್ದ ತಮ್ಮ ಒಗ್ಗಟ್ಟನ್ನು ಅಭೇದ್ಯ ವಿಶ್ವಾಸವನ್ನು ಮರೆತು, ಅವಳಿಗಾಗಿ ತಾವು ಪರಸ್ಪರ ಕಾದಾಡಿ ಸಾಯುವುದು. ಲೋಕ ಕಂಕಟಕ ನಿವಾರಣೆ—ಇದು ಕಥೆ. 'ಜಗಜ್ಜನಕನ ಕೈಗೊಂಬೆ ತಾನು' ಎಂಬ ಅರಿವು ವಿನಯ ತಿಲೋತ್ತಮೆಗೆ. ಅದರಿಂದಾಗಿಯೆ ಅವಳ ಸೌಂದರ್ಯ ಉಪಭೋಗವಸ್ತುವಾಗದೆ ಲೋಕ ಕಂಟಕನನ್ನು ಸುಡುವ ದಿವ್ಯ ಜ್ವಾಲೆಯಾಗುತ್ತದೆ—ಇದು ಮಥಿತಾರ್ಥ. ನಾಟಕದ ಗದ್ಯ ಶೈಲಿ ಸರಳ, ಆದರೆ ಗಂಭೀರ. ನಡುವೆ ಅಲ್ಲಲ್ಲಿ ಕೆಲವು ವೃತ್ತಕಂದಗಳು. ಈ ವೃತ್ತಗಳ ಬಳಕೆಯೂ ಡಿವಿಜಿಯವರ ಪ್ರಯೋಗ ಪ್ರವೃತ್ತಿಯನ್ನು ತೋರಿಸುತ್ತವೆ.

'ಪರಶುರಾಮ'ನ ಕ್ಷಾತ್ರ ಚಿರಪರಿಚಿತ. ಜಿ.ಪಿ. ರಾಜರತ್ನಂ ಅವರ ಲೋಕ ವಿಖ್ಯಾತ ನಾಟಕ '*ಗಂಡುಗೊಡಲಿ*'ಯಲ್ಲಿ ಈ ಪ್ರಕರಣ ರಾಷ್ಟ್ರೀಯ ಆಕಾಂಕ್ಷೆಯ ಪ್ರತೀಕವಾಗುವುದನ್ನು ನಾವು ಕಾಣುತ್ತೇವೆ. ಡಿವಿಜಿಯವರ ನಾಟಕದಲ್ಲಿ ಆ ಕೊಡಲಿರಾಮನ ಕ್ರೂರ ವ್ಯಕ್ತಿತ್ವದ ಇನ್ನೊಂದು ಮುಖವಾದ ಮಾನವೀಯ, ಸೂಕ್ಷ್ಮವೇದಿಯಾದ ಧೀರಹೃದಯ ಚಿತ್ರಣಗೊಂಡಿದೆ. ಕಾರ್ತವೀರ್ಯನು ಜಮ ದಗ್ನಿಯಿಂದ ಸುರಧೇನುವನ್ನು ಸೆಳೆದೊಯ್ಯುವುದರಿಂದ ನಾಟಕದ ಆರಂಭ ಕಾರ್ತವೀರ್ಯನ ವಧೆ, ತಾಯಿ ರೇಣುಕೆಯ ಶಿರಚ್ಛೇದನ, ಜಮದಗ್ನಿಯ ಕೊಲೆ, ಕ್ರುದ್ಧನಾದ ಭಾರ್ಗವರಾಮನಿಂದ ಕ್ಷತ್ರಿಯ ಸಂಹಾರ, ಭೂಮಂಡಲದ ಸ್ವಾಧೀನ ಹಾಗೂ ವಿಪ್ರರಿಗೆ ದಾನ, ಕೊನೆಗೆ ದಶರಥರಾಮನ ಭೇಟಿ, ಶ್ರೀರಾಮನ ನಯ ವಿನಯ ಪರಶುರಾಮನ ರುದ್ರ ಕ್ಷಾತ್ರದ ಬಿಸಿಯನ್ನು ತಗ್ಗಿಸುವುದು—ನಾಟಕದ ವಸ್ತು. "ಭೃಗುರಾಮ–ರಘುರಾಮ ಯುಗಳದ ಸತ್ತ್ವೈಕ್ಯ ಜಗಕ್ಕೆ ಅಭಿರಾಮವಾಗಲಿ" ಎನ್ನುವುದು ನಾಟಕದ ಆಶಯ. ಸಾಂಪ್ರ ದಾಯಿಕ ಶೈಲಿ, ಗಂಭೀರ ಗದ್ಯ, ಛಂದೋಬದ್ಧವಾದ ಪದ್ಯಗಳಿಂದ ನಾಟಕ ಪ್ರೌಢ. ಕವಿವರ್ಯ ಶ್ರೀ ಪುತಿನ ಈ ಕುರಿತು ಹೀಗೆನ್ನುತ್ತಾರೆ–"ಪರಶುರಾಮ ತುಂಬ ಸ್ವಾರಸ್ಯವಾದ ನಾಟಕ; ಮನಸ್ಸು ನವಯುಗದ್ದು, ನಮ್ಮ ಸನಾತನ ಮೌಲ್ಯಗಳಿಗೊಲಿದದ್ದು. ಮೆಲಕು ಹಾಕುವಂಥ ಕಂದವೃತ್ತಗಳು ಗಾಢಾಲೋಚನೆ ಯಿಂದ ಮೂಡಿದವು, ಧ್ಯಾನದಲ್ಲಿ ಕೆಡವುವಂಥ ವಿಚಾರಲಹರಿ, ಹೃದಯ ಸ್ಪರ್ಶಿಯಾದ ಮನೋಗತಗಳು, ತೀಕ್ಷ್ಣಮತಿಯ ಹರಿತವಾದ ಬುದ್ಧಿಯ ಪಟುಗಳನ್ನು ನಡೆಯಿಸುವ ಗದ್ಯ ಸಂವಾದಗಳು, ಸಮಸ್ಯೆಗಳನ್ನು ಹೊರಳು

ಮಾತುಗಳಿಂದ ಹಾರಿಸದೆ ನಿಟ್ಟಿಸಿನೋಡುವ ದಿಟ್ಟತನ, ಗಂಭೀರವಾದ ಶೈಲಿ.'' ಸಹೃದಯರಿಗೆ ಸ್ವಾದುವಾದ ದೃಶ್ಯರೂಪಕ ಪರಶುರಾಮ.

'*ಪ್ರಹಸನತ್ರಯಿ*' ಸಂಕಲನದಲ್ಲಿ ಬಂದಿರುವ '*ಗರ್ದಭ ವಿಜಯ*' ಎಂಬ ದೃಶ್ಯಾವಳಿ ಡಿವಿಜಿಯವರ ವಿಡಂಬನೆಗೆ ಉದಾರಣೆ. ನಾಂದಿ, ಸೂತ್ರಧಾರ, ಕಂದಪದ್ಯ, ಮಂಗಳ ಇತ್ಯಾದಿ ಪರಿಕರಗಳಿಂದ ಇದು ಸಾಂಪ್ರದಾಯಿಕ ಧಾಟಿಯಲ್ಲೇ ಇದೆ. ಆದರೆ ವಿಷಯ ಪ್ರಸ್ತುತ ರಾಜಕೀಯದ ಹಾಗೂ ಲೋಕದ ನಡಾವಳಿಯ ಲೇವಡಿ. ಕೆಲವು ಸಂಸ್ಕೃತ ಪದ್ಯಗಳನ್ನು ಅನುವಾದ ಮಾಡಿ ನಡುನಡುವೆ ಸೇರಿಸಿಕೊಂಡಿದ್ದಾರೆ. ಕತ್ತೆಗಳ ವ್ಯಾಜದಲ್ಲಿ ನಮ್ಮ ಸಮಾಜದ ಓರೆಕೋರೆ ಅಂಕುಡೊಂಕುಗಳಿಗೆ ಕನ್ನಡಿ ಹಿಡಿಯುತ್ತಾರೆ ಲೇಖಕರು. ಇಲ್ಲಿ ಡಿವಿಜಿ ಅವರ ಹಾಸ್ಯಪ್ರವೃತ್ತಿಯ ಒಂದು ಮಿಂಚು ಹೊಳೆಯುತ್ತದೆ. ಖ್ಯಾತ ವ್ಯಂಗ್ಯ ಚಿತ್ರಕಾರ ಮೂರ್ತಿಯವರ ರೇಖಾಚಿತ್ರಗಳು ನಾಟಕಕ್ಕೆ ಸಿಂಗಾರವಾಗಿವೆ.

ಡಿವಿಜಿಯವರ ನಾಟಕಗಳು ಸಾಮಾನ್ಯವಾಗಿ ರಂಗಪ್ರಯೋಗಕ್ಕಿಂತ ವಾಚನಕ್ಕೇ ತಕ್ಕುದಾದವು. ಕಾರಣ ಇಲ್ಲಿ ಚಿಂತನೆ, ಆಲೋಚನೆಗಳೇ ಮುಖ್ಯ. ಮಾಧ್ಯಮ ಸಂಭಾಷಣೆ! ಆದರೂ ಮ್ಯಾಕ್‌ಬೆತ್, ಕೇಡ್, ಪರಶುರಾಮ, ತಿಲೋತ್ತಮೆ ಇಂಥವು ಪ್ರಯೋಗಾರ್ಥವಾಗಿಯಾದರೂ ನಮ್ಮ ರಂಗಮಂಚವನ್ನು ಕಂಡರೆ ಚೆನ್ನ.

'ವಿದ್ಯಾರಣ್ಯಸ್ತುತಿ', 'ವಾಲ್ಮೀಕಿ–ವ್ಯಾಸವಂದನ', 'ಕುಮಾರ ವ್ಯಾಸ ದರ್ಶನ'– ಪದ್ಯಗಳು ಸಣ್ಣವು. 'ವಿದ್ಯಾರಣ್ಯಸ್ತುತಿ' ವಿದ್ಯಾರಣ್ಯ ವಿಜಯ ನಾಟಕದ ಭಾಗವೇ. ಡಿವಿಜಿ ಬರೆದಿರುವ ಮಹಾಪುರುಷರ ಜೀವನ ಪರಿಚಯಗಳಲ್ಲಿ ಈ ತೆರನ ಸ್ತುತಿಪದ್ಯ ಸಾಮಾನ್ಯ. ವಾಲ್ಮೀಕಿ, ವ್ಯಾಸರು ನಮ್ಮ ನಾಡಿನ 'ಕವಿ ದಿವಾಕರ ಚಂದ್ರಮರು'. ವಾಲ್ಮೀಕಿಯದು ಸೂರ್ಯವಂಶದ ಚರಿತೆ. ವ್ಯಾಸರದು ಚಂದ್ರ ವಂಶದ್ದು. ವಾಲ್ಮೀಕಿಯ ವಿಷಯ 'ಸೋದರ್ಯದೈಕ್ಯಮಾಧುರ್ಯ'. ವ್ಯಾಸರ ಚಿತ್ರಣ 'ಭ್ರಾತ್ರೀಯ ಭೇದ ವಿಷ', ಇಬ್ಬರದೂ 'ಜೀವದೈವಲೀಲಾ' ಸೃಷ್ಟಿ. ಈ ಕವಿಗಳಿಗೆ ಡಿವಿಜಿ ಕೃತಜ್ಞತೆ ಸಲ್ಲಿಸುತ್ತಾರೆ. ಕನ್ನಡದ ವರಕವಿ ಕುಮಾರವ್ಯಾಸನ ಪ್ರಶಂಸೆ 'ಕುಮಾರವ್ಯಾಸ ದರ್ಶನ'.

ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ ಕನ್ನಡ ಸಾರಸ್ವತ ಲೋಕಕ್ಕೆ ಸಲ್ಲಿಸಿದ ಸೇವೆ ಅಮೂಲ್ಯ. ಹೊಸಗನ್ನಡದ ಮೈಲಿಕಲ್ಲುಗಳಾದ ಹಲವಾರು ಕೃತಿಗಳನ್ನು ಅದು ಪ್ರಕಟಿಸಿತು. ತನ್ಮೂಲಕ ಕನ್ನಡ ನವೋದಯದ ಹಲವು ಪ್ರಕಾರಗಳನ್ನು ತೆರೆಯಿತು. ಡಿವಿಜಿಯವರ 'ವಸಂತ ಕುಸುಮಾಂಜಲಿ' ಹಾಗೂ 'ನಿವೇದನ' ಹಾಗೆ ಹೊರಬಂದ ಕೃತಿಗಳು.

'*ವಸಂತ ಕುಸುಮಾಂಜಲಿ*'ಯಲ್ಲಿ ಎರಡು ಭಾಗ. ಮೊದಲನೆಯದರಲ್ಲಿ ನಾಲ್ಕು ಕವಿತೆಗಳಿವೆ. '*ಜೀವಗೀತೆ*', '*ಸರ್ವಮತ ಸಿದ್ಧಾಂತ*', '*ದೇವರೆಲ್ಲಿ*', '*ಆತ್ಮಗೀತೆ*'–ಹೆಸರೇ ಸೂಚಿಸುವಂತೆ ಇವು ತತ್ತ್ವಚಿಂತನಪರ ರಚನೆಗಳು. '*ಜೀವಗೀತೆ*', ಅಮೆರಿಕಾದ ವ್ಹಿಟ್ಟಿಯಲ್ ಕವಿಯ 'My Soul and I' ಕವಿತೆಯ ಅನುವಾದ. ಪ್ರಶ್ನೋತ್ತರ ಧಾಟಿ. ಸೀಸಪದ್ಯ–ವೃತ್ತಗಳ ಛಂದಸ್ಸು. ಭಾಷೆ ಸಾಕಷ್ಟು ಸರಳ. ಧರ್ಮದೃಷ್ಟಿ ಲೋಕಹಿತ ಕಾರ್ಯ, ದೈವಭಕ್ತಿ—ಈ ಭಾವನೆಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ. '*ಆತ್ಮಗೀತೆ*' ಸಹ ಅನುವಾದ, ಖ್ಯಾತ ಆಂಗ್ಲ ಕವಿ ವಾಲ್ಟ್ ವ್ಹಿಟ್‌ಮನ್‌ನ 'Song of Myself' ಕವಿತೆಯ ಅನುವಾದ. ಪರಮಾತ್ಮನ ಸರ್ವ ವ್ಯಾಪಕತೆ, ಸರ್ವಸಮತೆ, ಲೋಕಕ್ಕೆ ಮಾನವನ ಋಣ, ಸಕಲ ಚರಾಚರ ಸೃಷ್ಟಿಯೊಂದಿಗೆ ಇರಬೇಕಾದ ಸಾಮರಸ್ಯ–ಇವು ಇಲ್ಲಿನ ವಿಷಯ. ದ್ವಿಪದಿಯ ನಡೆ. ಗಂಭೀರವಾದ ಶೈಲಿ. ವಿಷಯ ನಮ್ಮ ನಾಡಿನ ಚಿಂತನಕ್ಕೆ ತೀರ ಹತ್ತಿರ. ಶೈಲಿ ರೂಢಿಯದು. ಆದ್ದರಿಂದ ಈ ಅನುವಾದಗಳು ಬಲು ಸಹಜವೆನಿಸುತ್ತವೆ. ಸ್ವಂತ ರಚನೆಗಳೇ ಎನಿಸುತ್ತವೆ. '*ಸರ್ವಮತ ಸಿದ್ಧಾಂತ*' ಮತ ಸಾಮರಸ್ಯವನ್ನು ಹೇಳುವ ಒಂದು ವೃತ್ತ. '*ದೇವರೆಲ್ಲಿ*' ಎಂಬ ಕುಸುಮ ಷಟ್ಪದಿಯ ಪದ್ಯ ದೇವರಲ್ಲೆ ನಾವು ಇದ್ದರೂ, ಆತನನ್ನು ಕಂಡುಕೊಂಡಿಲ್ಲ ಎಂಬ ಭಾವವನ್ನು ಸುಂದರವಾಗಿ ಬಿಂಬಿಸುತ್ತದೆ. ನೀರಿನಲ್ಲೆ ಮೀನು ಇದ್ದರೂ, ಅದಕ್ಕೆ ನೀರಿನ ರಾಶಿಯನ್ನು ಕಾಣುವಾಸೆ, ಆಗಸದಲ್ಲಿ ಹಾರುವ ಹಕ್ಕಿಗೆ ಗಾಳಿಯನ್ನು ಅರಿಯುವಾಸೆ. ಹಾಗೆಯೆ ಮಾನವನಿಗೆ ಪರಮಾತ್ಮನನ್ನು ಹೊರಗೆ ಅರಸುವಾಸೆ! ಈ ಸುಂದರ ಉಪಮಾನಗಳು ಚಿಂತನ ಸಂವಹನಕ್ಕೆ ಸುಲಭವಾದ ಸಾಧನಗಳು. ಡಿವಿಜಿ ಯವರ ಜಿಜ್ಞಾಸು ಮನ ಈ ರಚನೆಗಳಲ್ಲಿ ಆಗಲೇ ಸ್ಪಷ್ಟಗೊಂಡಿರುವುದನ್ನು ಕಾಣುತ್ತೇವೆ.

ಎರಡನೆಯ ಭಾಗ ಬಹುತೇಕ ಮಹಾವ್ಯಕ್ತಿಗಳ ಗುಣಗಾನದ ಪದ್ಯ ಗಳು, ಶ್ರೀ ರಾಮಕೃಷ್ಣ ಪರಮಹಂಸ, ರಾಮಮೋಹನರಾಯ್, ನವರೋಜಿ, ಗೋಖಲೆ, ಸ್ವಾಮಿ ವಿವೇಕಾನಂದ, ತಿಲಕ್, ರವೀಂದ್ರನಾಥ ಠಾಕೂರ್, ಜಗದೀಶ ಚಂದ್ರ ಬೋಸ್, ವಿಶ್ವೇಶ್ವರಯ್ಯ, ಗಾಂಧೀಜಿ, ಕೃಷ್ಣರಾಜ ಒಡೆಯರು—ಇವ ರೆಲ್ಲ ಭಾರತದ ಪುನರುತ್ಥಾನದ ಮಹಾ ವಿಭೂತಿಗಳು. ಇವರ ಬಗ್ಗೆ ಡಿವಿಜಿಗೆ ಅನನ್ಯ ಗೌರವ. ಆ ಗೌರವ, ಕೃತಜ್ಞತಾಭಾವನೆ, ಈ ಕವನಗಳಲ್ಲಿ ಕೆನೆಗಟ್ಟಿ ಬಂದಿವೆ. ಆಯಾ ವ್ಯಕ್ತಿಗಳ ಗುಣವೈಶಿಷ್ಟ್ಯಗಳನ್ನು ಸೂತ್ರಪ್ರಾಯವಾಗಿ ಚಿತ್ರಿ ಸುವ ಈ ಪದ್ಯಗಳು ಮೂರ್ತಿಶಿಲ್ಪಗಳಂತಿವೆ. ಗಾಂಧೀಜಿಯವರನ್ನು ಕುರಿತ

'ಇಂದ್ರಿಯಂಗಳ ಜಯಿಸಿ, ಚಿತ್ತಶುದ್ಧಿಯ ಬಯಸಿ' ಎಂಬ ಪದ್ಯ ಬಲು ಪ್ರಸಿದ್ಧ. ಕನ್ನಡದಲ್ಲಿ ಗಾಂಧೀಜಿಯನ್ನು ಕುರಿತ ಪದ್ಯರಾಶಿಯಲ್ಲಿ ಎದ್ದುಕಾಣುವ ಕವನ. ಗಾಂಧೀಜಿಯವರ ಇಡೀ ವ್ಯಕ್ತಿತ್ವವನ್ನು ಮೂರು ಸೀಸಪದ್ಯಗಳಲ್ಲಿ ಕಡೆದಿಡಲಾಗಿದೆ.

'*ವಸಂತ ಕುಸುಮಾಂಜಲಿ*'ಯ ಮೊದಲನೆಯ ಭಾಗ ಉತ್ತಮ ಜೀವನ ಕ್ರಮದ ಸ್ವರೂಪ, ಲೋಕಸೇವೆಯೆ ಮಾನವನ ಪರಮ ಧರ್ಮ ಎಂಬ ನೀತಿ ಇವುಗಳನ್ನು ಪ್ರತಿಪಾದಿಸುತ್ತದೆ. ಆ ನೀತಿ ಧರ್ಮಗಳನ್ನು ಬಾಳಿದ ಮಹಾ ಪುರುಷರನ್ನು ಎರಡನೆಯ ಭಾಗ ಚಿತ್ರಿಸುತ್ತದೆ.

'*ನಿವೇದನ*' ಡಿವಿಜಿಯವರ ಕವಿತಾ ಪ್ರತಿಭೆಯನ್ನು ಬೆಳಗಿಸಿದ ಪ್ರಖ್ಯಾತ ಕೃತಿ. ಇದರಲ್ಲೂ ಎರಡು ಭಾಗ. ನಿಸರ್ಗ ಸೌಂದರ್ಯ ಪ್ರಧಾನವಾದ ಕವಿತೆಗಳ ಭಾಗ ಮೊದಲನೆಯದು. ಅಲ್ಲಿನ ಹತ್ತು ಕವನಗಳಲ್ಲಿ ಏಳು ಅಂಥವು. ಉಳಿದರಲ್ಲಿ ಎರಡು ದಾನ, ತ್ಯಾಗ—ಇವುಗಳನ್ನು ಮೆರೆದ ಬಲಿ ಚಕ್ರವರ್ತಿ, ಗೋಮಟೇಶ್ವರರನ್ನು ಕುರಿತವು. ಇನ್ನೊಂದು ಸೌಂದರ್ಯ ತತ್ತ್ವಕ್ಕೆ ಸಾಕ್ಷಿಗಳಾಗಿರುವ ಬೇಲೂರಿನ ಶಿಲಾಬಾಲಿಕೆಯನ್ನು ಬಣ್ಣಿಸುವುದು. ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಭಾವ ಸಂಪರ್ಕದ ಮೆರಗು, ನಮ್ಮ ಪ್ರಾಚೀನ ವಿಚಾರದ ನೆರಳು, ಶಾಸ್ತ್ರೀಯ ಛಂದಸ್ಸಿನ ಗಂಭೀರತೆ, ಹೊಸ ಛಂದೋಪ್ರಕಾರಗಳ ಬೆಡಗು, ಪ್ರಯೋಗಶೀಲತೆ, ನಿಸರ್ಗ ಸೌಂದರ್ಯವನ್ನು ನೋಡುವ ಕವಿದೃಷ್ಟಿ, ಜೊತೆಗೇ ಆ ಸೌಂದರ್ಯದ ಹಿಂದಿರುವ ಸೃಷ್ಟಿಶಕ್ತಿಯನ್ನು ಭಾವಿಸಿಕೊಳ್ಳುವ ದರ್ಶನ ದೃಷ್ಟಿ, ಅದ್ಭುತವಾದ ಈ ಸೃಷ್ಟಿಯ ಕರ್ತನಿಗೆ ಮಣಿಯುವ ಕೃತಜ್ಞತಾ ಬುದ್ಧಿ—ಇವು '*ನಿವೇದನ*'ದ ಮುಖ್ಯ ಹೊಳಹುಗಳು. ಮೊದಲನೆಯ ಕವಿತೆ 'ನಿವೇದನ' ಕೃತಿಗೆ ಹೆಸರಿತ್ತಿದೆ. ಕವಿಗೂ ಹೆಸರಿತ್ತಿದೆ. ಸೃಷ್ಟಿಯ ಇಂದಿನ ಸೃಷ್ಟಿಕರ್ತನನ್ನು ಕಾಣುವ ಹಂಬಲ, ಬೆರಗು ಇಲ್ಲಿ ಅತ್ಯಂತ ರಮ್ಯವಾದ ರೀತಿಯಲ್ಲಿ, ಇಂಪಾದ ಪದಗಳ ನಡೆಯಲ್ಲಿ ವ್ಯಕ್ತಗೊಳ್ಳುತ್ತದೆ. ಛಂದಸ್ಸೂ ಅಪರೂಪದ ಖಂಡಭೋಗ ಷಟ್ಪದಿ. ಈ ಆಕಾಶ, ನಕ್ಷತ್ರ, ಕಾಲಮಾನ. ಬೆಟ್ಟಗುಡ್ಡ, ಕಡಲು, ತೊರೆ, ಬನ, ಹೊಲ, ಖಗಮೃಗಗಳು, ಬೆಳಕು, ಹಾಡು, ಪ್ರೀತಿ, ಪಂಚಭೂತಗಳು, ಗುಣಗಳು, ವಸ್ತುಚಯವನ್ನು, ಭಾವಸಮುಚ್ಚಯವನ್ನು ಸೃಷ್ಟಿಸಿರುವ ಮಹಾಶಿಲ್ಪಿ ಯಾರು ಎಂಬ ಕೌತುಕ ಕವಿಗೆ. ಆ ಶಿಲ್ಪಿಯ ಕೃತಿ ನಮಗೆ ಗೋಚರ, ಶಿಲ್ಪಿ ಕಾಣ! ಕಾಣದಿದ್ದರೇನು? ಈ ಕೃತಿಯನ್ನೇ ನೋಡೋಣ. ನಲಿಯೋಣ. ಅದೇ ಸಾಲದೆ? ಎನ್ನುವುದು ಇದಕ್ಕೆ ಉತ್ತರ. 'ದೈವಕೃತಿಯ ಸೊಬಗು', 'ಸರಸ ಭಾವತತಿಯ ಸೊಬಗು', 'ಸುಜನ ಜೀವಕಥೆಯ

ಸೊಬಗು'—ಇವೆಲ್ಲ ಬರಿಯ ಕನಸಲ್ಲ ಎನ್ನುವಲ್ಲಿ ಕವಿಯ ದೈವಭಕ್ತಿ ಹಾಗೂ ಜೀವನ ನಿಷ್ಠೆ ವ್ಯಕ್ತವಾಗಿವೆ.

ಎನ್ನ ಮನೆಯೊಳೆಸೆದ ಬೆಳಕೆ, ಎನ್ನ ಬದುಕಿನೊಂದು ಸಿರಿಯೆ,
ನಿನ್ನನಿನಿಸು ಹರುಷಗೊಳಿಸೆ ಬರೆದ ಬರೆಹವ
ಇನ್ನದೆಂತು ನೋಡಿ ನಗುತಲೊರೆವೆ ಸರಸವ ।

ಈ ಮಾತಿನಲ್ಲಿ ಅದೇ ತಾನೇ ನಂದಿಹೋಗಿದ್ದ ತಮ್ಮ ಮನೆಯ ಬೆಳಕಿನ–ಪತ್ನಿಯ–ನೆನಪು ಮೂಡಿ ಬಂದಿದೆ.

ಪ್ರಕೃತಿ ನಿರ್ಮಿಸಿರುವ ದೃಶ್ಯ ವಿಶೇಷ, ಮಾನವ ಶಕ್ತಿ ನಿರ್ಮಿಸಿರುವ ಕೃತಿ ವಿಶೇಷ—ಇವೆರಡರ ಅನುಭವ ಇತರ ಕವನಗಳ ವಸ್ತು. ಕೊಡಗಿನ ಬೆಡಗು, ಜೋಗದ ಜಲಪಾತ, ಶಿವನ ಸಮುದ್ರ, ಬಾಬಾಬುಡನ್ ಬೆಟ್ಟ—ಈ ಕವನಗಳು ನಿಸರ್ಗನಿರ್ಮಿತಿಯ ದೃಶ್ಯ ವಿಶೇಷಗಳು. ಕೃಷ್ಣರಾಜ ಸಾಗರ, ಚಾಮುಂಡಿಯ ದೀಪಗಳು, ಬೇಲೂರಿನ ಶಿಲಾಬಾಲಿಕೆಯರು, ಗೋಮಟೇಶ್ವರ—ಇವು ಮಾನವ ನಿರ್ಮಿತ ಕೃತಿ ವಿಶೇಷಗಳು. 'ಬಲಿ ಚಕ್ರವರ್ತಿ', 'ಗೋಮಟೇಶ್ವರ' ಇವು ಸುಜನ ಜೀವಕಥೆಯ ಸೊಬಗಿನ ಚಿತ್ರಗಳು. ಎರಡನೆಯ ಭಾಗದ ಗೀತಗಳಲ್ಲಿ "ಸರಸ ಭಾವತತಿಯ ಸೊಬಗು" ಹರಿದು ಬರುತ್ತದೆ. ಒಂದು ಕಡೆ ದೈವ ಸೃಷ್ಟಿಯ ಮಹಿಮೆ, ಇನ್ನೊಂದೆಡೆ ಮಾನವ ಪ್ರತಿಭೆಯ ಗೆಯ್ಮೆ, ಮೂರನೆಯದಾಗಿ ಮಾನವನ ಅಂತರಾಳದ ಭಾವಗಳ ಚೆಲುಮೆ.

"*ಬೇಲೂರಿನ ಶಿಲಾಬಾಲಿಕೆಯರು*" ಇಂಗ್ಲಿಷಿನ ಪ್ರಖ್ಯಾತ ಕವಿ ಕೀಟ್ಸ್‌ನ 'Ode on a Grecian Urn' ಕವನದಿಂದ ಸ್ಫೂರ್ತಿಗೊಂಡದ್ದು. ಬಾಹ್ಯ ಸೌಂದರ್ಯ ಪ್ರಶಂಸೆ, ಜೊತೆಗೆ ಆ ಶಿಲ್ಪಗಳು ಮೂಡಿಸುವ ಭಾವಸೂಕ್ಷ್ಮಗಳ ಸ್ಪರ್ಶ, ತನ್ಮೂಲಕ ಹರಿಯುವ ಸೌಂದರ್ಯತತ್ತ್ವ ಚಿಂತನ—ಇದು ಈ ಕವನದ ವೈಶಿಷ್ಟ್ಯ. ಬೇಲೂರಿನ ಚೆನ್ನಕೇಶವ ದೇಗುಲದ ಹೊರಮೈಯಲ್ಲಿ ಶಿಲ್ಪಿ ಕಡೆದು ನಿಲ್ಲಿಸಿರುವ ಶಿಲಾಬಾಲಿಕಾ ವಿಗ್ರಹಗಳನ್ನು ಕವಿ ಮಾತಾಡಿಸುತ್ತಾರೆ. ಅವು ಚೆಂದದ ಕಲ್ಲುಬೊಂಬೆಗಳಲ್ಲ. ಚೆನ್ನಕೇಶವನ ಅಂತಃಪುರದ ಕನ್ನಿಕೆಯರು. ಸೌಂದರ್ಯ ನಿಧಿಯಾದ ಆ 'ಚೆನ್ನ'ನನ್ನು ಸೇವಿಸಲು, ಅವನಿಗೆ ತಮ್ಮನ್ನು ಸಮರ್ಪಿಸಿಕೊಳ್ಳಲು ಸಿದ್ಧರಾಗಿ ನಿಂತ ಶರಣೆಯರು. ಬಾಹ್ಯಸೌಂದರ್ಯದ ಬೆಡಗನ್ನು, ಅದನ್ನು ಮೀರಿರುವ ಭಾವಸೌಂದರ್ಯದ ಸೊಬಗನ್ನು, ಅದಕ್ಕೂ ಆಚೆಗೆ ಇರುವ ಆತ್ಮಸೌಂದರ್ಯದ ಸತ್ಯತೆಯನ್ನು ಸಾರುವವರು. "ಸೌಂದರ್ಯತತ್ತ್ವ"ದ ಬಗ್ಗೆ ಡಿವಿಜಿ ಆಳವಾಗಿ ಚಿಂತನೆ ಮಾಡಿದವರು. ಆ ತತ್ತ್ವ ನಿರೂಪಣೆ ಅವರ ಹಲವಾರು

ಕೃತಿಗಳಲ್ಲಿ ಪ್ರತಿಪಾದಿತವಾಗಿದೆ. *ಶೃಂಗಾರ ಮಂಗಳಂ, ಅಂತಃಪುರ ಗೀತೆಗಳು, ಉಮರನ ಒಸಗೆ, ಶ್ರೀಕೃಷ್ಣ ಪರೀಕ್ಷಣಂ,* ಈ ಕೃತಿಗಳಲ್ಲಿ ವಿಸ್ತಾರವಾಗಿ, ಗಹನವಾಗಿ ನಡೆದಿವೆ ಆ ಚಿಂತನ. ಅದರ ಬೀಜರೂಪವನ್ನು '*ಬೇಲೂರಿನ ಶಿಲಾಬಾಲಿಕೆಯರು*' ಪದ್ಯದಲ್ಲಿ ಕಾಣಬಹುದು.

'*ಕಾವೇರಿ*', '*ಶಿವನ ಸಮುದ್ರ*', '*ಕೊಡಗಿನ ಅನುಭವ*' ಇವೆಲ್ಲ ನಿಸರ್ಗ ಸೌಂದರ್ಯದ ಕವನಗಳು. ಸುಂದರ ವರ್ಣನೆ, ಬಂಧುರ ಭಾವ, ಅಂದವಾದ ಶೈಲಿ, ಮಾತುಗಳು ಮನಮುಟ್ಟುತ್ತವೆ. 'ದಾನೋದ್ದಾಮಗ್ರಣಿ ಬಲಿ', 'ಮಾನವ ಮಾನದ ಗೋಮಟೇಶ್ವರ' ಇವು ಮಾನವ ಗುಣಗಳ ಔನ್ನತ್ಯವನ್ನು ಸಾರುವ ಕವನಗಳು.

ಎರಡನೆಯ ಭಾಗದ ಭಾವಗೀತಗಳು ನಿಜಕ್ಕೂ ಭಾವದೀಪಗಳು. 'ವನಸುಮ' ಕವನದಲ್ಲಿ ಡಿವಿಜಿಯ ಜೀವನದರ್ಶನವೇ ಅಡಗಿದೆ. ನಿಃಸ್ವಾರ್ಥ ಸೇವೆ, ಅನಾಸಕ್ತ ಕರ್ಮ, ಶರಣಾಗತಭಾವ ಇವನ್ನು ಈ ಕವನ ಚಿತ್ರಿಸುತ್ತದೆ. ಇದು ಕನ್ನಡನಾಡಲ್ಲೆಲ್ಲ ನಲಿಯುತ್ತಿರುವ ಗೀತ. 'ನಿನ್ನ ವಿಲಾಸ', 'ಎನ್ನದು ಯಾವು ದಯ್ಯ', 'ನಿನ್ನ ನಾಟಕ', 'ಸ್ವಾತಂತ್ರ್ಯವೇಕೆ' ಇವು ದೈವಚಿಂತನದ ಹಾಡುಗಳು. 'ದಾರಿಗರ ಹಾಡು' ಮಾನವನ ಜೀವಿತಯಾತ್ರೆಯ ಚಿತ್ರಣ. ಆತ್ಮಯಾತ್ರೆಯ ಚಿತ್ರಣ.

'*ವಸಂತ ಕುಸುಮಾಂಜಲಿ*' '*ನಿವೇದನ*' ಬಂದ ಸುಮಾರು 50 ವರ್ಷದ ನಂತರ ಪ್ರಕಟಗೊಂಡದ್ದು '*ಕೇತಕೀ ವನ*'. ಇದರ ಬಗೆ ಹಿಂದಿನ ಎರಡಕ್ಕಿಂತ ಭಿನ್ನ. ಆ ಎರಡರಲ್ಲಿ ಚಿಂತನದ ಒಮ್ಮುಖತೆ, ಇಲ್ಲಿ ವೈವಿಧ್ಯತೆ. ಚಿಂತನದಲ್ಲಿ— ಭಾವದಲ್ಲಿ ಮಾತ್ರವಲ್ಲ, ರೂಪದಲ್ಲೂ. ಇಲ್ಲಿರುವ 95 ಕವನಗಳಲ್ಲಿ ನಾಲ್ಕೇ ಸಾಲಿನ ಕಂದಪದ್ಯವೂ ಉಂಟು. 132 ಸಾಲಿನ ದೀರ್ಘ ಕವನವೂ ಉಂಟು. ವೃತ್ತ, ಕಂದ, ಸೀಸಪದ್ಯ, ಷಟ್ಪದಿ, ರಗಳೆ ಮೊದಲಾದ ಹಳೆಯ ಛಂದೋರೂಪಗಳು ಉಂಟು. ಭಾವದಲ್ಲೂ ಬಗೆಬಗೆ. ಮಾರುತಿಯ ಸ್ತುತಿ ಇದೆ. ಹಂಪೆಯ ನೆನಪಿದೆ. ತಾಜಮಹಲನ್ನು ಕಟ್ಟಿದ ಷಾಹಜಹಾನನ ಅಂತಿಮ ದಿನಗಳ ಸಂಕಟದ ಚಿತ್ರವಿದೆ. ಅಳುವಿನ ಆಳವಿದೆ, ನಗೆಯ ಹಗುರಿದೆ. ಬದುಕಿನ ಸಾರ್ಥಕತೆ, ವ್ಯರ್ಥತೆ, ರಸಿಕತೆ, ಬರಡುತನ, ಆಸೆನಿರಾಸೆ, ಜೀವಸಾವುಗಳ ಅನನ್ಯತೆ, ಇತಿಹಾಸದ ಚಿತ್ರಗಳ ಭವ್ಯತೆ, ನಾಡ ಬಿಡುಗಡೆಯ ಹೋರಾಟಕ್ಕೆ ಆಹ್ವಾನ, ಪ್ರೇಮ–ಮೋಹಗಳ ಸೆಳೆತ ವಿಲಾಸಗಳು, ವಿಫಲ ಪ್ರೇಮದಿಂದಾಗಿ ಚೆಲುವಿನ ನಿರರ್ಥಕತೆ, ಹೂ, ನದಿ ಮೊದಲಾದ ಪ್ರಕೃತಿ ಮಾತೆಯ ಕೊಡುಗೆಗಳು—ಇವೇ ಮುಂತಾಗಿ

ಬಗೆಬಗೆಯ ಭಾವ ಇಲ್ಲಿ ಥಳಚ್ಚನೆ ಮಿಂಚುತ್ತವೆ. ಅಲೆಯೇಳುವ ವಿಭಿನ್ನ ಭಾವಗಳ ವಿಲಾಸವನ್ನು 'ಕೇತಕೀವನ' ಮೆರೆಸುತ್ತದೆ. ಡಿವಿಜಿಯವರ ಸಾಮಾನ್ಯವಾದ ಜೀವನ ನಿಷ್ಠೆ, ಉತ್ಸಾಹ, ಆಶಾಭಾವನೆಗಳಿಗೆ ವಿರುದ್ಧವಾದ ನಿರಾಸೆ, ದುಃಖ, ಬೇಸರ ಮುಂತಾದ ಭಾವನೆಯ ಕವನಗಳನ್ನೂ ನಾವಿಲ್ಲಿ ಕಾಣುತ್ತೇವೆ. ಆ ದ್ವಂದ್ವಗಳೆರಡೂ ವಿಧಿಲೀಲೆ, ಪರಮಾತ್ಮನ ಕೃಪೆ ಎಂಬ ಸಮಾಧಾನವನ್ನು ಕಾಣಬಹುದು. 'ವೀರ ಗೀತೆ' ಕವನದಲ್ಲಿ ಡಿವಿಜಿಯವರ ನಾಡಪ್ರೇಮ ಚಿಮ್ಮಿದೆ. 'ಪರದೀಪವನಿಳೆಗಿತ್ತವಳ, ಪರಕೆಳೆಯಾರತಿಯೆತ್ತುವಳ'' ಎನ್ನುವಲ್ಲಿ ಭಾರತದ ಆಧ್ಯಾತ್ಮ ಮಹಿಮೆಯ ಸ್ಮರಣೆಯಿದೆ. ''ಕತ್ತಿಯನರಿಯದ, ನೆತ್ತರಸುರಿಯದ ಸಾತ್ತ್ವಿಕ ಶೌರ್ಯದ ಕಾಳಗ'' ಎಂದು ಗಾಂಧೀಜಿಯವರ ಅಹಿಂಸಾತ್ಮಕ ಸತ್ಯಾಗ್ರಹವನ್ನು ನಿರ್ದೇಶಿಸುತ್ತಾರೆ. ಇಂದ್ರಿಯ ನಿಗ್ರಹಕ್ಕೆ ಪ್ರಯತ್ನಿಸಿ, ಸಫಲವಾದೆ ಎಂದುಕೊಂಡ ಒಬ್ಬ ಸಾಧಕ, ತನ್ನ ಮನದಲ್ಲಿ ಎಲ್ಲೊ ಒಂದೆಡೆ, ಮತ್ತೆ ರಾಗ ಮೋಹ ತಲೆಯೆತ್ತುವುದು ಕಂಡು ಉದ್ವಿಗ್ನನಾಗುವ ಚಿತ್ರ '*ಇಂದ್ರಿಯ ಜಯ*' ಎಂಬ ಕವನ. ಬಾಹ್ಯ ಸಂಯಮವನ್ನು ಎಷ್ಟೋ ಭದ್ರವಾಗಿ ಸಾಧಿಸಿರಬಹುದು. ಆದರೆ ಮನಸ್ಸಿನೊಳಗೇ ಹಣ್ಣಿನಲ್ಲಿನ ಹುಳುವಿನಂತೆ ಹುಟ್ಟಿಕೊಳ್ಳುವ ರಾಗ ಮೋಹಕ್ಕೆ ಏನೆನ್ನುವುದು? ಇದು ಸಾಧಕರೆಲ್ಲರ ಅನುಭವ. ಇಂಥ ಕವನಗಳು, ಗೆಳೆಯರ ಅಗಲಿಕೆ, ಪ್ರಿಯೆಯ ಅಗಲಿಕೆಗಳ ಕವನಗಳು ಡಿವಿಜಿಯವರ ಆತ್ಮವೃತ್ತದತ್ತ ಬೊಟ್ಟು ಮಾಡುವಂಥವು. 'ಐವತ್ತೊಂದು' ಎಂಬ ಕವನ ಪ್ರಾಯಶಃ ಡಿವಿಜಿಗೆ ಆ ವಯಸ್ಸು ಆದಾಗ ಬರೆದಿದ್ದೇನೊ. ''ಪುರುಷಾಯುವಿನೊಳರ್ಧವಿಂದೆನಗೆ ಮುಗಿದಿಹುದು, ಇನ್ನು ಹೊಸ ಚಿಗುರಿರದು, ಹೂವಿರದು, ಹಣ್ಣಿರದು, ತಣ್ಣೆಳಲ ಹರವಿರದು, ತೊಗಟಿನಲಿ ಹಸಿರಿರದು''; ''ಸಾಕಿನ್ನು ದೇವ ಎನಗಿಹದ ಮಧುಪಾನ, ಬೇಕಿನ್ನು ವಿಶ್ರಾಂತಿ ಬೇಕೆನಗೆ ಮೌನ''—ಈ ಸಾಲುಗಳು ಡಿವಿಜಿ ಮನೋಧರ್ಮಕ್ಕೆ ತೀರ ವಿರುದ್ಧವಾದವು. ಆಗ ಡಿವಿಜಿಯವರ ಬಾಳಿನಲ್ಲಿ ಏನು ಚಿಂತ ನೋವು ಘಟಿಸಿತ್ತೋ ಏನೊ! ಅದು ಇಲ್ಲಿ ಹಳಕುಗಟ್ಟಿದೆ. ಬಾಳಿನಲ್ಲಿ ಇಂಥ ಝುಂಝಾವಾತ ಬೀಸಿದಾಗ, ಎಂಥ ದೃಢ ನಂಬಿಕೆಯವನಾದರೂ ತಲ್ಲಣಿಸುತ್ತಾನೆ. ಸಂದೇಹಕ್ಕೆ ಒಳಗಾಗುತ್ತಾನೆ. 'ಸಂದೇಹ ಸೂಕ್ತ' ಇಂಥ ಭಾವದ್ದು. ಸೃಷ್ಟಿಯ ಅರ್ಥವೇನು, ಗೂಢತೆ ಏನು, ನೋವು ಸಂಕಟಗಳೇಕೆ, ಆಮಿಷಗಳೇಕೆ, ಮಂತ್ರ ತಂತ್ರ ವ್ರತಾದಿಗಳ ಫಲವೇನು? ಕ್ಷಾಮಯುದ್ಧ ರೋಗರುಜಿನ ಏಕೆ? ಏಕೆ ನಮಗೀ ಶಿಕ್ಷೆ—ಎಂದೆಲ್ಲ ಶಂಕೆ ಮನಸ್ಸಿಗೆ. ಇದು ಒಂದು ರೀತಿಯ ನಿಂದಾಸ್ತುತಿಯೂ ಎನಿಸಬಹುದು. ಜಿಜ್ಞಾಸುವಿನ ಪ್ರಶ್ನಾವಳಿಯೂ ಹೌದು. ಕೇದಿಗೆ—

ತಾಳೆಹೂ–ನೋಡಲು ಚೆನ್ನ. ವಾಸನೆ ಬಣ್ಣ ಆಕರ್ಷಕ. ಆದರೆ ಮಧುವರಸಿ ಹೋದ ದುಂಬಿ ಮುಳ್ಳು ಚುಚ್ಚಿ ನರಳುತ್ತದೆ. ಧೂಳು ಮುಚ್ಚಿ ಸಾಯುತ್ತದೆ. ಬಾಳೂ ತಾಳೆಯ ಹಾಗೆಯೆ ಎನ್ನುತ್ತದೆ ಕವಿಮನ. ಇದರ ಜೊತೆಗೆ 'ಮಾರುತಿ'ಯನ್ನು ಕುರಿತ ಕವನಗಳಲ್ಲಿ ಬೆಟ್ಟದಂತೆ ಅಚಲವಾದ ನಿಷ್ಠೆ, ನಂಬುಗೆಗಳು, ಧೈರ್ಯ ಸ್ಥೈರ್ಯ ಉತ್ಸಾಹಗಳು ಪುಟಿಯುತ್ತವೆ. ಕೀಟ್ಸ್, ಟೆನಿಸನ್, ಬ್ರೌನಿಂಗ್ ಮೊದಲಾದ ಆಂಗ್ಲ ಕವಿಗಳ ಕವನಗಳ ಅನುವಾದ ರೂಪಾಂತರಗಳೂ ಇಲ್ಲಿವೆ.'*ಕೇತಕೀವನ*' ನಮ್ಮನ್ನು ಮುದಗೊಳಿಸುತ್ತದೆ. ಚಿಂತನೆಗೆ ಹಚ್ಚುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಕವಿಚೇತನ ಹೊಮ್ಮಿ ಹರಿಸಿದ್ದು '*ಸ್ವತಂತ್ರ ಭಾರತ ಅಭಿನಂದನ ಸ್ತವ*'. 24 ವೃತ್ತಗಳ ಪದ್ಯಪ್ರಬಂಧ. 1978ರಲ್ಲಿ–ಡಿವಿಜಿ ಕಾಲಾನಂತರ—ಇದು ಮತ್ತೆ '*ಭಾರತ ಭೂವಂದನಂ*' ಎಂಬ ಹೊಸ ಹೆಸರಿನಲ್ಲಿ ಪ್ರಕಟಗೊಂಡಿತು ಜಿ.ಪಿ. ರಾಜರತ್ನಂ ಅವರ ಅರ್ಥ ಟಿಪ್ಪಣಿ ಸಹಿತ. ಭಾರತ ದೇಶದ ಪ್ರಾಚೀನತೆ, ಹಿರಿಮೆ, ಪರಂಪರೆ, ಆಧ್ಯಾತ್ಮಿಕ ಐಕ್ಯತೆ, ರಾಮ, ಭರತ, ಹನುಮಂತರ ಆದರ್ಶ, ಶ್ರೀ ಶಂಕರರ ಮಹಾಯಾತ್ರೆ, ಲೋಕಕ್ಕೆ ಭಾರತ ನೀಡಬೇಕಾದ ಕೊಡುಗೆ, ತೋರಬೇಕಾದ ಬೆಳಕು, ಈ ಕಾರ್ಯದಲ್ಲಿ ಜನ ಮಾಡಬೇಕಾದ ಕರ್ತವ್ಯ, ನಡೆದುಕೊಳ್ಳಬೇಕಾದ ರೀತಿ—ಇವುಗಳನ್ನು ಕವಿ ಸೂತ್ರಪ್ರಾಯವಾದ ಗಂಭೀರವಾದ ಮಾತುಗಳಲ್ಲಿ ತಿಳಿಸುತ್ತಾರೆ. ಈ ವೃತ್ತಗಳಲ್ಲಿ ವ್ಯಕ್ತಗೊಂಡಿರುವ ಉದಾತ್ತ ದೇಶಭಕ್ತಿ, ಪರಂಪರಾ ಪ್ರಿಯತೆ, ಭವಿಷ್ಯದ ಭರವಸೆ, ಮಹಾಕಾಂಕ್ಷೆಯೊಂದು ಕೈಗೂಡಿದ ಹರ್ಷಾಧಿಕ್ಯ, ಕರ್ತವ್ಯದ ಬಗೆಗೆ ಕಾಳಜಿ, ಇವುಗಳ ಹೂರಣದ ಹಾಗೆಯೆ ಈ ವೃತ್ತಗಳ ಸೊಬಗು, ಗಾಂಭೀರ್ಯ, ಪದಸೌರಭಗಳ ಆವರಣವೂ ಮನ ಸೆಳೆಯುವಂಥದು. ಪಂಪ–ರನ್ನರ ನಂತರ ವೃತ್ತ ಛಂದಸ್ಸುಗಳನ್ನು ಇಷ್ಟು ಸುಖವಾಗಿ ಭವ್ಯವಾಗಿ ಪಳಗಿಸಿಕೊಂಡಿದ್ದವರು ಡಿವಿಜಿ.

"ಮಾಂದ್ಯಂ ಪೋಗುಗೆ ಬುದ್ಧಿಯಂತ್ರಗಳಿನ್. ಆಂಧ್ಯಂ ನೀತಿ ನೇತ್ರಂಗಳಿಂ" ಎಂಬ ಕವಿಯ ಹಾರೈಕೆ ಇನ್ನೂ ಕೈಗೂಡದಿರುವುದು ಖೇದಕರ.

ಇದರ ಜೊತೆಗೇ ಭಾವಿಸಿಕೊಳ್ಳಬೇಕಾದುದು 'ಮಹಾತ್ಮ ಗಾಂಧೀ ಜ್ಞಾಪಕ ಪದ್ಯ' ಎಂಬ ಪುಟ್ಟ ಪುಸ್ತಿಕೆ. ಇದು ಮಹಾತ್ಮರ ಮರಣದ ನಂತರ ಅರ್ಪಿಸಿದ ಕವನ ಕುಸುಮಾಂಜಲಿ. 'ಇಂದ್ರಿಯಂಗಳ ಜಯಿಸಿ' ಪದ್ಯದಲ್ಲಿ ಬಂದ ಗಾಂಧೀಜಿಯ ಗುಣವರ್ಣನೆ ಇಲ್ಲಿ ವಿಸ್ತಾರಗೊಂಡಿದೆ. ಗಾಂಧೀಜಿಯವರ ವ್ಯಕ್ತಿತ್ವ, ಸಾಧನೆಗಳು ಗೌರವದಿಂದ ನೆನೆಸಿಕೊಳ್ಳುತ್ತಾರೆ. "ನಿರುಪಮಮಿೀ ಗಾಂಧಿ ಸಾಧು ವಿಜಯಾಖ್ಯಾನಂ , ಗಾಂಧಿ "ನಮ್ಮುಸಿರ ಹೂ, ನಮ್ಮೆಲ್ಲರ ಜೀವ, ಭಾರತದ ಸಾತ್ತ್ವಿಕ ಶಕ್ತಿ,

ಪರಂಪರೆಗಳ ಸಾಕಾರಮೂರ್ತಿ. ಅಂತಸ್ಸತ್ತ್ವೋನ್ನತಿ, ಸಂತತದಾತ್ಮೀಯ ಶುದ್ಧಿ, ಸತ್ಯ, ಶಾಂತಿ ವ್ರತ, ಸೋದರ ಸಾಂತ್ವನ''—ಈ ಐದು ಗುಣಗಳು ಮನುಷ್ಯನಿಗೆ ಸಿದ್ಧಿಪ್ರದಾಯಕ. ಇವು ಗಾಂಧೀಜಿಯಲ್ಲಿ ನೆಲೆಗೊಂಡಿದ್ದವು. ದೇವ 'ನಿತ್ಯಲೀಲಾ ವಿಭವ' ಆದ ಲೋಕದ ಬಾಳನ್ನು ಸೊಗಸುಗೊಳಿಸುವುದೇ ದೇವನನ್ನು ಓಲಗಿಪಂತೆ ಎಂದು, ಜನಸೇವೆ ಮಾಡಿದರು ಗಾಂಧೀಜಿ.

ಹೀಗೆ ತೂಕವಾದ ವಿಷಯಗಳನ್ನು ತೂಕವಾದ ರೀತಿಯಲ್ಲಿ ಕವನಗೊಳಿಸಿದ ಡಿವಿಜಿ 'ಮಹಾ ಚುನಾವಣೆ' ಎಂಬ ಲಾವಣಿಗಳನ್ನೂ ರಚಿಸಿರುವುದು ಸ್ವಾರಸ್ಯಕರ. ಸ್ವತಂತ್ರ ಭಾರತದಲ್ಲಿ ಆಗಿಂದಾಗ್ಗೆ ನಡೆಯುವ ಚುನಾವಣೆಗಳು ಬರುಬರುತ್ತ ಅಣಕು ನಾಟಕಗಳಾಗಿವೆ. ಕಪಟ ಮೋಸ ದುರಾಚಾರ ದುಷ್ಟತನಗಳ ಹೂಟವಾಗಿವೆ. ಇದು ನಮ್ಮೆಲ್ಲರ ಅನುಭವ. ಕವಿ ಇಲ್ಲಿ ಅದನ್ನು ವಿಡಂಬನ ಮಾಡುತ್ತಾರೆ. ನಾನಾ ಪಕ್ಷಗಳು ಜನರ ಮುಂದೆ ನೀಡುವ ನಾನಾ ಭರವಸೆಯ ಚಿತ್ರಗಳು, ಆ ಡೋಂಗಿ ಮಾತಿಗೆ ಮರುಳಾಗಿ ಜನ ಮತ ನೀಡುವುದು, ಅನಂತರ ಅವರಿಗೆ ಆಗುವ ಭ್ರಮನಿರಸನ, ನಿರಾಸೆಗಳನ್ನು ಅಣಕವಾಡುತ್ತಾರೆ. ಇದೆಲ್ಲವನ್ನು ನೋಡಿ ತಾಯಿ ಭಾರತಿ ''ಬಸಿರ ಕಿವಿಚಿಕೊಳುತಿದ್ದಳು''. ವಾಗ್ದೇವಿ ಸರಸ್ವತಿಗೆ ಇದು ಸೆರೆ. ಎಲ್ಲ ರಾಜಕೀಯಸ್ಥರೂ 'ವಾಕ್' ಅನ್ನು ಹಿಗ್ಗಾ ಮುಗ್ಗಾ ಎಳೆದಾಡಿ ಅಪಚಾರ ಮಾಡುತ್ತಿದ್ದಾರೆ.

ಮಾತು ನೂಲನು ನೂತು – ಚೀಡ ಬಲೆಯನು ನೆಯ್ದು
ವೋಟು ನೊಣಗಳ ಪಿಡಿವ – ಹೂಟವ ಹೂಡಿ
ಊಟಕ್ಕೆ ಬಾಯ್ದೆರೆವ – ಮಾಟಗಾರರಿಗೆ ನಾಂ
ಚೇಟಿಯಾಗುವೆನೆ ? – ಈ ಕೋಟಲೆಯ ಹರಿಸೈ.

ಎನ್ನುವುದು ವಾಗ್ದೇವಿಯ ಆರ್ತಸ್ವರದ ಮೊರೆ. ಪ್ರಖ್ಯಾತ ಚಿತ್ರಕಾರ ಆರ್.ಎಸ್. ನಾಯುಡು ಅವರ ರೇಖಾಚಿತ್ರಗಳು ವಿಡಂಬನದ ಗುಡಿಗೆ ತೋರಣಗಳು.

*'ಉಮರನ ಒಸಗೆ'* ಅನುವಾದ ಕಾವ್ಯ. ಉಮರ್ ಖಯಾಮ್ ಪಾರಸೀ ಕವಿ ಶ್ರೇಷ್ಠ. ಆತನ ರುಬೈಯಾತ್ ಪದ್ಯಮಾಲೆ ಲೋಕ ಪ್ರಸಿದ್ಧ. ಆ ಕಾವ್ಯ ವಿಶ್ವದಲ್ಲೆಲ್ಲ ಅನೇಕ ಭಾಷೆಗಳಿಗೆ ಅನುವಾದವಾಗಿದೆ. ಭಾರತದಲ್ಲೂ ಹಾಗೆಯೆ. ಕನ್ನಡದಲ್ಲೆ ಮೂರು ಅನುವಾದ ಬಂದಿವೆ. ಹಿರಿಯ ವಿದ್ವಾಂಸ ಗೋವಿಂದ ಪೈ ಮೂಲ ಪರ್ಷಿಯನ್ ಭಾಷೆಯಿಂದಲೇ ಕನ್ನಡಿಸಿದಾರೆ. ಖ್ಯಾತ ಸಾಹಿತಿ ಅ.ನ.ಕೃ. ಅವರ ಅನುವಾದವೂ ಉಂಟು. ಫಿಟ್ಸ್ ಜೆರಲ್ಡನ ಆಂಗ್ಲ ರೂಪಾಂತರ ಡಿವಿಜಿಯವರಿಗೆ ಮೂಲಾಧಾರ. 1930ರಿಂದ ಐದು ಮುದ್ರಣ ಕಂಡ *'ಉಮರನ ಒಸಗೆ'* ಕನ್ನಡಕ್ಕೆ

ಡಿವಿಜಿ ಕೊಟ್ಟಿರುವ ಅಪೂರ್ವ 'ಒಸಗೆ.' ಪ್ರತಿಯೊಂದು ಹೊಸ ಆವೃತ್ತಿಯಲ್ಲೂ ಡಿವಿಜಿ ಹಿಂದಿನದನ್ನು ಕೈಯಾಡಿಸಿ ತಿದ್ದಿದಾರೆ, ಹೊಸ ವಿಷಯಗಳನ್ನು ಸೇರಿಸಿ ದಾರೆ. ಮುನ್ನುಡಿಯನ್ನು ಬೆಳೆಸಿದಾರೆ. ಡಿವಿಜಿ ರೀತಿಯೆ ಇದು. ನಿರಂತರ ಪರಿಶೋಧನೆ, ಸಂಸ್ಕರಣೆ.

ಅನುವಾದವೇ ಕಷ್ಟ, ಪದ್ಯಾನುವಾದ ಇನ್ನೂ ಕಷ್ಟ, ಮೂಲದ ಪೂರ್ಣ ಪ್ರತಿಸೃಷ್ಟಿ ವಿರಳ. ಏನಿದ್ದರೂ ನೆರಳು ಆದಿತು, ಡಿವಿಜಿ ಇದನ್ನು ಚೆನ್ನಾಗಿ ಬಲ್ಲರು.

'ನವುರಾದ ಮಾತುಗಳು ನವುರಾದ ಭಾವಗಳು....
ತರ್ಜುಮೆಗೆ ಸಿಲುಕುವುವೆ ಬೇರೆ ಭಾಷೆಯಲಿ?'

ಆದರೆ 'ಕುರುಡಿಗಿಂತಲು ಮೆಳ್ಳಗಣ್ಣಿಯುಂ ಮೇಲಂತೆ'. ಉಮರನಲ್ಲಿ ತಾವು ಸವಿದ ಸವಿಯನ್ನು ಕಂಡ ಸೊಬಗನ್ನು ಕನ್ನಡಿಗರಿಗೆ ಕಿಂಚಿತ್ತಾದರೂ ಹಂಚಬೇಕು ಎನ್ನುವ ತವಕ ಡಿವಿಜಿಗೆ.

ಈ ಸಂಕೋಚ ಏನೇ ಇರಲಿ, ಸ್ವಲ್ಪಮಟ್ಟಿಗೆ ಅದು ಸರಿಯೆ ಆಗಲಿ, ಅನು ವಾದ ಮಾತ್ರ ಮೂಲಕೃತಿಗೆ ಅನ್ಯಾಯ ಮಾಡಿಲ್ಲ. ಉಮರನ ದಿವ್ಯ ಸೂಕ್ಷ್ಮಭಾವ ಗಳನ್ನು ಸೊಗಸಾಗಿ ಕನ್ನಡಿಸಿದೆ. ಇಲ್ಲಿನ ಛಂದಸ್ಸೂ ಮೂಲದ ರುಬಾ-ಯಿ ಹಾಗೆಯೆ ನಾಲ್ಕು ಸಾಲಿನದು. ಆದರೆ ಪ್ರಾಸ ಕೆಲವೆಡೆ ಉಂಟು, ಕೆಲವೆಡೆ ಇಲ್ಲ. ಮಾತುಗಳು ಸರಳ. ಲಲಿತಭಾವಕ್ಕೆ ತಕ್ಕಂತೆ ಲಲಿತ ಶಬ್ದಗಳು. ಆದರೆ ರಚನೆಯಲ್ಲಿ ಅಳಕವಿಲ್ಲ. ಲಾವಣ್ಯದ ಜೊತೆಗೇ ಗಾಂಭೀರ್ಯ. ನಮ್ಮದೇ ಇದು ಎನಿಸುವಂಥ ಸಹಜತೆ.

ನೀರಪನಿಯೊಂದತ್ತಣಿನೊ ಬಿತ್ತು ಕಡಲೊಳಕೆ ;
ಧೂಳಕಣವೊಂದು ಸೇರಿತು ಭೂಮಿತಲವ ;
ಜಗಕೆ ನೀಂ ಬರ್ಪುದೇಕೆ? ಇಲ್ಲಿಂದ ಪೋಪುದೇನ್?
ನೊಣವೊಂದು ಹಾರಾಡಿ ಮರಳಿ ಮರೆಯಬಹುದು.

ಈ ಕೃತಿಯ ಬಹು ಮೂಲ್ಯ ಭಾಗ ಸುಮಾರು 85 ಪುಟಗಳ ಮುನ್ನುಡಿ. ಉಮರನ ಜೀವನ ಚಿತ್ರ, ಕಾವ್ಯದ ಇತಿಹಾಸ, ಫಿಟ್ಸ್ ಜೆರಲ್ಡನ ಜೀವಿತ ಚಕ್ರ, ಉಮರನ ಕಾವ್ಯದೃಷ್ಟಿ ತತ್ತ್ವದೃಷ್ಟಿ ಅದಕ್ಕೂ ಲುಕ್ರೇಷಿಯಸ್ ಎಂಬ ಲ್ಯಾಟಿನ್ ಕವಿಯ 'Nature of Things' (ವಸ್ತು ಸ್ವಭಾವ) ಹಾಗೂ ಖ್ಯಾತ ಆಂಗ್ಲ ಕವಿ ಬ್ರೌನಿಂಗನ Rabbi Ben Ezra (ರ್‍ಯಾಬಿಬೆನ್ ಎಜ್ರ) ಕಾವ್ಯಗಳ ಚಿಂತನಕ್ಕೂ ಹೋಲಿಕೆ, ಸೂಫಿ ತತ್ತ್ವಜ್ಞಾನ, ಭಾರತೀಯ ವೇದ ಉಪನಿಷತ್ತು ರಾಮಾಯಣಾದಿ ಕಾವ್ಯ ಪರಂಪರೆಯ ದೃಷ್ಟಿಗೆ ಹೋಲಿಕೆ, ಚಾರ್ವಾಕ ಮತದ ಪ್ರಸ್ತಾಪ, ಉಮರನ ವಿನೋದ ಪ್ರಿಯತೆ.

ದೈವಚಿಂತನೆ—ಇತ್ಯಾದಿ ಎಲ್ಲ ವಿಷಯಗಳ ಸಮಗ್ರಾವಲೋಕನ. ಕಾವ್ಯದೇಗುಲಕ್ಕೆ ಕುಂದಣ ಪ್ರಾಕಾರ. ಗದ್ಯದ ಸುಭಗ ಶೈಲಿ ಆಹ್ಲಾದಕರ, ವಿಷಯ ಪ್ರತಿಪಾದನೆ ಸಹ. ನಲ್ಲಾವ್ಯ, ರೊಟ್ಟಿ ಕುಡಿಕೆ ಮಧು, ಮುಗುದೆಯ ಹಾಡು ಇವುಗಳೇ ಸಗ್ಗ ಸುಖ ಎನ್ನುವ ಉಮರನ ಮಾತು ಆತ ಸುಖಲೋಲುಪ, ಐಹಿಕ ಭೋಗಾಸಕ್ತ, ಪರದ ಬಗ್ಗೆ ವಿಮುಖ, ಚಾರ್ವಾಕ ಇತ್ಯಾದಿಯಾಗಿ ಭಾವಿಸಲು ಎಡೆಯಾಯ ಬಹುದು, ಇತ್ತಿದೆ. ಆದರೆ ಶಬ್ದಾರ್ಥವನ್ನು ದಾಟಿ ಧ್ವನ್ಯಾರ್ಥವನ್ನು ಪರಿಭಾವಿಸಿ ದರೆ, ಈ ಭಾವನೆ ಹಿಂದಾಗುತ್ತದೆ. ಲುಕ್ರೇಷಿಯಸ್, ಬ್ರೌನಿಂಗ್, ಉಮರ್, ವೇದೋಪನಿಷತ್ತು, ರಾಮಾಯಣ, ಭರ್ತೃಹರಿ ಇವುಗಳಲ್ಲೆಲ್ಲ ಸಾಮಂಜಸ್ಯ, ಸಮನ್ವಯ ಗೋಚರಿಸುತ್ತದೆ. ಉಮರ್ ಕೇವಲ ಐಹಿಕ ಭೋಗಾಸಕ್ತ ಅಲ್ಲ. ಸೃಷ್ಟಿಯ ಬಗ್ಗೆ ಆದರ ಉಳ್ಳವ. ದೈವದೂರನಲ್ಲ. ಸೃಷ್ಟಿ ದೈವದ ಗೆಯ್ಮೆ. ಇಲ್ಲೂ ಆ ಪರಮ ಆನಂದದ ಕಣ ಇವೆ. ಈ ಕಣಗಳನ್ನು ನಾವು ಅನುಭವಿಸಿದರೆ— ಇತರರಿಗೆ ಅನ್ಯಾಯವಾಗದಂತೆ ಅನುಭವಿಸಿದರೆ ತಪ್ಪೇನೂ ಅಲ್ಲ. ಇದೂ ಆ ಪರಮ ಆನಂದದ ಅನುಭೂತಿಯೆ. ದೇಹಸುಖವೊಂದೇ ಪರಮ ಅಲ್ಲ. ಹಾಗೆಂದು ದೇಹದ ನಿರಾಕರಣೆಯೂ ಸಲ್ಲ. ಐಹಿಕ ಸುಖದ ದೂಷಣೆಯೂ ಸಲ್ಲ. ಧರ್ಮಕ್ಕೆ ವಿರೋಧವಲ್ಲದ ಕಾಮವನ್ನು ಗೀತೆಯೂ ಸೂಚಿಸುತ್ತದೆ. ಉನ್ನತ ಧ್ಯೇಯ, ಅಲೌಕಿಕ ಚಿಂತನೆ, ಐಹಿಕತೆಯ ನಶ್ವರತೆಯ ಅರಿವು ಎಲ್ಲ ಹೇಗೆ ಅಗತ್ಯವೋ, ಸಾರಭೂತವೋ, ಬದುಕಿನ ಉಲ್ಲಾಸ, ಆಹ್ಲಾದಗಳೂ ಹಾಗೆಯೆ ಅಗತ್ಯ. ಗೋಳಿನ ಬಾಳು ಚೆನ್ನವೇನೂ ಅಲ್ಲ. ಬಾಳು ಕ್ಷಣಿಕ, ದುಃಖಮಯ ಎಂದು ಅಳುವುದು ಬೇಡ. ಗೆಲವಾಗಿ ನಲವಿನಿಂದ ಬಾಳೋಣ ಎನ್ನುವುದು ಉಮರನ ಮತ. "ಲುಕ್ರೇಷಿಯಸ್ಸಿನ ಸಂದೇಶ :—ಅಹಂಕಾರ ಖಂಡನೆ, ಸರಳತಾಭ್ಯಾಸ. ಉಮರನ ಸಂದೇಶ :— ಸೌಂದರ್ಯಾನುಭವ, ಉಲ್ಲಾಸ ಸಂಪಾದನೆ. ಬ್ರೌನಿಂಗನ ಉಪದೇಶ :— ಭಗವದ್ಭಕ್ತಿ ಪ್ರಗತಿ ಪ್ರಯತ್ನ". ಈ ಮೂರೂ ಅಗತ್ಯ ಎನ್ನುತ್ತಾರೆ ಡಿವಿಜಿ. ಅವರ ಜೀವನ ಸಿದ್ಧಾಂತ ಸೌಂದರ್ಯಚಿಂತನೆ ಇಲ್ಲಿ ಸುವ್ಯಕ್ತ.

ನಿವೇದನದ '*ಬೇಲೂರಿನ ಶಿಲಾಬಾಲಿಕೆಯರು*' ಪದ್ಯದಲ್ಲಿದ್ದ ಡಿವಿಜಿ ಅವರ ಸೌಂದರ್ಯ ಮೀಮಾಂಸೆಯ ಬೀಜ '*ಉಮರನ ಒಸಗೆ*'ಯಲ್ಲಿ ಪಲ್ಲವಿಸಿದೆ. ಇದೇ *ಅಂತಃಪುರ ಗೀತೆ*, *ಶ್ರೀಕೃಷ್ಣ ಪರೀಕ್ಷಣಂ*, *ಶೃಂಗಾರ ಮಂಗಳಂ*, *ಜೀವನ ಸೌಂದರ್ಯ ಮತ್ತು ಸಾಹಿತ್ಯ*, ಮುಂತಾದ ಕೃತಿಗಳಲ್ಲಿ ಹೊರವಾಗಿ ಬೆಳೆದಿದೆ. *ಮಂಕುತಿಮ್ಮನ ಕಗ್ಗ*, *ಮರುಳ ಮುನಿಯನ ಕಗ್ಗ*ಗಳ ಹಲವು ಪದ್ಯಗಳಲ್ಲಿ ಹಾಗೂ ಭಗವದ್ಗೀತಾ ವ್ಯಾಖ್ಯಾನದಲ್ಲಿ ಸಹ ಈ ವಿಚಾರದ ಹೊಳಹುಗಳು ಸುಳಿಯುತ್ತವೆ.

'*ಗೀತಶಾಕುಂತಲಮ್*' ಒಂದು ವಿಶಿಷ್ಟವಾದ ಕೃತಿ. ಕಾಳಿದಾಸನ ಶಾಕುಂತಲ ನಾಟಕ ಬಸವಪ್ಪ ಶಾಸ್ತ್ರಿಗಳಿಂದ ಸೊಗಸಾಗಿ ಅನುವಾದಗೊಂಡಿದೆ ಕನ್ನಡಕ್ಕೆ. ಡಿವಿಜಿ ನಾಟಕದ ಅನುವಾದಕ್ಕೆ ಹೋಗಿಲ್ಲ. ಶಾಕುಂತಲದ ಹಲವು ಪದ್ಯಗಳನ್ನು ಆರಿಸಿಕೊಂಡು, ಅವುಗಳನ್ನು ಸರಳ ಕನ್ನಡದ ಹಾಡುಗಳಾಗಿ ಭಾಷಾಂತರಿಸಿದ್ದಾರೆ. ಇಲ್ಲಿ ಮೂಲದ ಛಂದಸ್ಸು ಇಲ್ಲ. ಮೂಲಶ್ಲೋಕದ ಭಾವ, ಸ್ವಾರಸ್ಯ, ಕವಿಮನೋಗತಗಳನ್ನು ಹಿಗ್ಗಿಸಿ ತೋರಿಸುವ ಪ್ರಯತ್ನ. ಒಂದು ಪುಟದಲ್ಲಿ ಕಾಳಿದಾಸನ ಮೂಲ ಶ್ಲೋಕ, ಕೆಳಗೆ ಬಸವಪ್ಪಶಾಸ್ತ್ರಿಗಳ ಅನುವಾದ, ಎದುರು ಪುಟದಲ್ಲಿ ಡಿವಿಜಿಯವರ ಹಾಡು—ಆ ಶ್ಲೋಕದ್ದು—ಇದು ಅಚ್ಚುಕಟ್ಟು ಹಾಡುಗಳಿಗೆ ಆಯಾ ನಾಟಕೀಯ ಸಂದರ್ಭ ಸೂಚನೆಯೂ ಉಂಟು. ಈ 35 ಹಾಡುಗಳು ಕಾಳಿದಾಸನ ಕಾವ್ಯರಸಾನುಭವವನ್ನು ಒದಗಿಸುತ್ತವೆ. ಈ ಕೃತಿಗೆ ಡಿವಿಜಿ ಬರೆದಿರುವ ಮುನ್ನುಡಿಯಂತೂ ಕಾಳಿದಾಸನ ಹೃದಯವನ್ನೇ ತೆರೆದಿಡುತ್ತದೆ. ಕಾಳಿದಾಸ ಭಾರತದ ಕಾವ್ಯ ಹಿಮಾಲಯದ ಉತ್ತುಂಗ ಶಿಖರ. ಮಾನವ ಹೃದಯ ಶ್ರೀಮಂತಿಕೆಯ ಶಿಲ್ಪಿ. ಆತನ ಕಾವ್ಯಪ್ರತಿಭೆ, ರಸ–ರುಚಿ, ದರ್ಶನ ವೈಭವ, ಇವೆಲ್ಲದರ ಅಡಕವಾದ, ಪರಿಪೂರ್ಣವಾದ ಪರಿಚಯ 'ಗೀತಶಾಕುಂತಲ'ದ ಮುನ್ನುಡಿ. ಶಾಕುಂತಲ ಧರ್ಮಕಥೆ ಎಂದು ಡಿವಿಜಿಯವರ ಪ್ರತಿಪಾದನೆ. ವಿದ್ವಾನ್ ರಂಗನಾಥ ಶರ್ಮರು ಹೇಳುವಂತೆ "ಪೂರ್ವಾರ್ಧ (ಮುನ್ನುಡಿ) ಬುದ್ಧಿಗೂ, ಉತ್ತರಾರ್ಧ (ಹಾಡು) ಹೃದಯಕ್ಕೂ ಆಪ್ಯಾಯನವುಂಟುಮಾಡುತ್ತವೆ."

'*ಶ್ರೀ ರಾಮ ಪರೀಕ್ಷಣಂ*', ಹಾಗೂ '*ಶ್ರೀ ಕೃಷ್ಣ ಪರೀಕ್ಷಣಂ*' ಒಂದು ಜೋಡಿ. ರಾಮ ಕೃಷ್ಣರು ನಮ್ಮ ನಾಡಿನ ಪುರುಷೋತ್ತಮರು, ಆರಾಧ್ಯದೈವರು. ಸಾವಿರಾರು ವರ್ಷಗಳಿಂದ ಕೋಟ್ಯಂತರ ಜನರ ಮನಸ್ಸನ್ನು ತುಂಬಿದವರು, ಹೃದಯವನ್ನು ಮೀಟಿದವರು. ನಾನಾ ಭಾಷೆಗಳಲ್ಲಿ, ನಾನಾ ಜನಪದ ಪ್ರಕಾರಗಳಲ್ಲಿ, ಶಿಲ್ಪ ಕಾವ್ಯಗಳಲ್ಲಿ, ಚಿತ್ರ ನಾಟ್ಯಗಳಲ್ಲಿ, ಜಿಜ್ಞಾಸೆ ಚಿಂತನಗಳಲ್ಲಿ, ಭಕ್ತಿರಕ್ತಿಗಳಲ್ಲಿ, ಹಳ್ಳಿ–ಪಟ್ಟಣಗಳಲ್ಲಿ ಎಲ್ಲೆಲ್ಲೂ ಆವರಿಸಿಕೊಂಡಿರುವ ವ್ಯಕ್ತಿ ವಿಶೇಷಗಳು, ಶಕ್ತಿ ವಿಶೇಷಗಳು.

ಶ್ರೀರಾಮ ಶ್ರೀಕೃಷ್ಣರನ್ನು ಕುರಿತ ಡಿವಿಜಿ ಅವರ ಚಿಂತನೆಯ ಫಲ ಈ ಎರಡು ಕೃತಿಗಳು. ಇವು ಕಾವ್ಯಕ್ಕೆ ಕಾವ್ಯ, ವಿಮರ್ಶೆಗೆ ವಿಮರ್ಶೆ, ಜಿಜ್ಞಾಸೆಗೆ ಜಿಜ್ಞಾಸೆ. ಕಾವ್ಯದ ರೂಪದಲ್ಲಿನ ವಿಮರ್ಶೆ, ತತ್ತ್ವಚಿಂತನೆಗಳು, ಕನ್ನಡದಲ್ಲಿ ಅನನ್ಯ.

'*ಶ್ರೀರಾಮ ಪರೀಕ್ಷಣಂ*' ಆಲೋಚನಾಪರವಾದ ಕೃತಿ. ರಾಮಾಯಣದ ಹಲವು ಪ್ರಸಂಗಗಳ ಬಗೆಗೆ ಜನ ಪ್ರಶ್ನಿಸುವುದುಂಟು. ಅಹಲ್ಯೆಯ ಪ್ರಕರಣ,

ವಾಲಿವಧೆ, ಸೀತೆಯ ಅಗ್ನಿಪರೀಕ್ಷೆ, ಸೀತಾ ಪರಿತ್ಯಾಗ ಇಂಥ ಪ್ರಕರಣ ಚರ್ಚೆ–ವಾದಗಳಿಗೆ ವಸ್ತುವಾಗಿವೆ. ಇಲ್ಲೆಲ್ಲ ರಾಮ ಹೇಗೆ ನಡೆದುಕೊಂಡ, ಅದು ಸರಿಯೆ. ಹಾಗೇಕೆ ನಡೆದುಕೊಂಡ—ಈ ಪ್ರಶ್ನೆಗಳನ್ನು ಇಲ್ಲಿ ಡಿವಿಜಿ ವಿಮರ್ಶಿಸಿದ್ದಾರೆ. ಇವೆಲ್ಲ ಶ್ರೀರಾಮನ ಸತ್ತ್ವಪರೀಕ್ಷಣ ಪ್ರಸಂಗಗಳು. ರಾಮನ ನಡತೆ ಮೇಲು ನೋಟಕ್ಕೆ ಕಠಿಣವಾಗಿಯೊ, ಅಸಂಗತವಾಗಿಯೊ ಕಂಡೀತು. ಆದರೆ ಸೂಕ್ಷ್ಮವಾಗಿ ಆಲೋಚಿಸಿದರೆ, ಅದು ಹೇಗೆ ರಾಮನ ಧರ್ಮದೃಷ್ಟಿಗೆ ಅನುಗುಣವಾದುದು ಎನ್ನುವುದು ತಿಳಿಯುತ್ತದೆ. ಆತ್ಮಸಂಸ್ಕರಣ ಮೆಟ್ಟಿಲು ಮೆಟ್ಟಿಲಾಗಿ ಪರಿಪೂರ್ಣತೆಯತ್ತ ಸಾಗುವುದು ಶ್ರೀರಾಮ ಕಥೆ. "ಪಾಪವೃತ್ತಾಂತದಿಂದ ಮನಃಪರಿತಾಪ; ಆತ್ಮತಾಪದಿಂದ ಧರ್ಮವಿಚಾರ ಕುತೂಹಲ. ಈ ವಿಚಾರ ಕುತೂಹಲದಿಂದ ಮಾನವ ಸ್ವಭಾವ ಪರಾಮರ್ಶೆ; ಅದರಿಂದ ಸೃಷ್ಟಿತತ್ತ್ವ ಚಿಂತನೆ, ವಿಶ್ವಸಹಾನುಭೂತಿ, ವಿಶ್ವವ್ಯಾಪಕ ದೃಷ್ಟಿ, ಪರತತ್ತ್ವದರ್ಶನ; ಪರಮ ಶಾಂತಿ—ಇವು ಹೇಗೆ ಕ್ರಮಕ್ರಮವಾಗಿ ಶ್ರೀರಾಮನಲ್ಲಿ ನೆಲೆಗೊಂಡಿವೆ ಎಂಬುದನ್ನು, ಸಂಕ್ಷೋಭೆಯಿಂದ ಸ್ವಸ್ವಭಾವಕ್ಕೆ ಉತ್ತಮ ಜೀವ ಹೇಗೆ ಯಾತ್ರೆ ನಡೆಸಿತೆಂಬುದನ್ನು ಡಿವಿಜಿ ಅವರು ನಮ್ಮ ಮುಂದಿಟ್ಟಿದ್ದಾರೆ.... ರಸಜ್ಞರಿಗೆ ಕಾವ್ಯಾಮೃತ, ಲೌಕಿಕರಿಗೆ ಧರ್ಮಸೂಕ್ಷ್ಮಗಳ ಮತ್ತು ಜೀವನ ರಹಸ್ಯಗಳ ಬೋಧೆ, ಮುಮುಕ್ಷುಗಳಿಗೆ ಆಧ್ಯಾತ್ಮಜ್ಞಾನ ಈ ಮೂರೂ ಈ ಸಣ್ಣ ಕಾವ್ಯದಲ್ಲಿ ದೊರೆಯುತ್ತವೆ"–(ಎಂ.ಆರ್. ಶ್ರೀ. ಅವರ ಮುನ್ನುಡಿ) ಅಹಲ್ಯೆ, ತಾರೆ, ಮಂಡೋದರಿ, ಸೀತೆ, ಲೋಕದ ಜನ, ಲಕ್ಷ್ಮಣ, ಹನುಮಂತ—ಇವರು ಪ್ರಶ್ನೆಗಳನ್ನು ಕೇಳುತ್ತಾರೆ. ತಮಗೆ ಉಂಟಾಗಿರುವ ಧರ್ಮಸಂಕಟವನ್ನು ಹೇಳುತ್ತಾರೆ. ಅವಕ್ಕೆ ರಾಮನ ಪ್ರತಿಕ್ರಿಯೆ ಧರ್ಮಸ್ವರೂಪವನ್ನು ವಿವರಿಸುತ್ತದೆ. 'ಅಹಲ್ಯೆಯ ಪ್ರಶ್ನೆ' ದೀರ್ಘವಾಗಿದೆ. ಅಹಲ್ಯಾ ಶಾಪ ವಿಮೋಚನದ ಕಾವ್ಯವೇ ಆಗಿದೆ. ಅರಿತೂ ಅರಿಯದೆಯೊ ತಪ್ಪು ಆಗಿದೆ. ಅದಕ್ಕಾಗಿ ಸಂಬಂಧಿಸಿದ ಎಲ್ಲರೂ ನೋವಿನಲ್ಲಿ ಬೆಂದಿದಾರೆ. ಪಶ್ಚಾತ್ತಾಪ ಗೌತಮ, ಇಂದ್ರ, ಅಹಲ್ಯೆ ಎಲ್ಲರನ್ನೂ ಮಾಗಿಸಿದೆ. ರಾಮನ ದರ್ಶನದಿಂದ ಅವರಿಗೆ ಮತ್ತೆ ಉದ್ಧಾರದ ಬೆಳಕು. ಸುಕೃತದ ಭರವಸೆ. ಇದು ಇಲ್ಲಿನ ತತ್ತ್ವ ಸಂದೇಶ. ವಾಲಿವಧೆಯ ನ್ಯಾಯಾನ್ಯಾಯದ ಬಗ್ಗೆ ತಾರೆ ಪ್ರಶ್ನಿಸುತ್ತಾಳೆ. ತನ್ನ ಪತಿ ರಾವಣನಿಗೆ ರಾಮ ವಿಧಿಸಿದ ಕ್ರೂರ ಶಿಕ್ಷೆಯನ್ನು ಸಾಧ್ವಿ ಮಂಡೋದರಿ ಪ್ರಶ್ನಿಸುತ್ತಾಳೆ, ಲೋಕಜನ ಸಂತೃಪ್ತಿಯ ನೆವದಲ್ಲಿ ಕೈಹಿಡಿದ ತನ್ನನ್ನೇ ತೊರೆದ ಕಾಠಿನ್ಯದ ಬಗ್ಗೆ ಸೀತೆ ಆಕ್ಷೇಪಿಸುತ್ತಾಳೆ. ಸೀತೆಗಾದ ಸಂಕಟಕ್ಕೆ, ದೊರೆ ರಾಮನಿಗಾದ ಒಂಟಿತನಕ್ಕೆ ಲೋಕಜನ ಮರುಗಿ ಮೊರೆಯಿಡುತ್ತಾರೆ. ಶಂಬೂಕವಧೆಯ ಸಂದರ್ಭದಲ್ಲಿ ಲಕ್ಷ್ಮಣ

ಪ್ರಶ್ನಿಸುತ್ತಾನೆ—ಶೂದ್ರ ಶಂಬೂಕನಿಗೆ ಧರ್ಮ, ತಪಸ್ಸು ಕೂಡದೇ?—ಇವೆಲ್ಲ ರಾಮಕಥಾ ಪ್ರಸಂಗಗಳನ್ನು ಕುರಿತವು. ಆಂಜನೇಯ ಸಮ್ಯಗ್‌ಜ್ಞಾನ ಪಿಪಾಸು. ಜೀವನದ ರಹಸ್ಯವೇನು, ತತ್ತ್ವವೇನು, ಗುರಿಯೇನು, ಸತ್ಯವೇನು, ಶಾಂತಿ ಹೇಗೆ ಲಭ್ಯ, ಇತ್ಯಾದಿ ಧರ್ಮಸೂಕ್ಷ್ಮಗಳನ್ನು ಕೇಳುತ್ತಾನೆ. ಶ್ರೀರಾಮ ಇವರಿಗೆಲ್ಲ ಸೂಕ್ತ ಉತ್ತರವನ್ನು ಹೇಳುತ್ತಾನೆ. ಧರ್ಮರಹಸ್ಯಗಳನ್ನು ವಿವರಿಸುತ್ತಾನೆ. ವ್ಯಕ್ತಿಧರ್ಮ–ರಾಜಧರ್ಮ–ಲೋಕಧರ್ಮ–ಆತ್ಮಧರ್ಮ ಇವುಗಳ ಮಜಲುಗಳನ್ನು ನಿರ್ದೇಶಿಸುತ್ತಾನೆ. ಈ ಧರ್ಮಗಳ ನಡುವೆ ತಿಕ್ಕಾಟ ಸಲ್ಲದು. ಭಿನ್ನತೆ ಬಂದರೆ ಹಿರಿಯದಕ್ಕೆ ಕಿರಿಯದು ಮಣಿಯಬೇಕು ಎನ್ನುವ ಧ್ವನಿಯಲ್ಲಿ 'ಆತ್ಮಾರ್ಥೇ ಪೃಥಿವೀಂ ತ್ಯಜೇತ್' ಎಂಬ ಸಂದೇಶ ನೆನಪಾಗುತ್ತದೆ.

ರಾಮಾಯಣದ ಸೂಕ್ಷ್ಮಗಳನ್ನು ಅರಿತುಕೊಳ್ಳಲು ಇಚ್ಛಿಸುವವರಿಗೆ ಡಿವಿಜಿ ಇಲ್ಲಿ ಸುಗ್ರಾಸವನ್ನು ಒದಗಿಸಿದಾರೆ. ಶೈಲಿ ಧೀರ ಗಂಭೀರ, ಉದಾತ್ತ ವ್ಯಕ್ತಿ ವಿಶೇಷಗಳಿಗೆ ಭೂಷಣಪ್ರಾಯ. ವೃತ್ತ ಕಂದಗಳು ದ್ವಿಪದಿಗಳು ಹಳಗನ್ನಡ ಗದ್ಯ ಇಂದೂ ತನ್ನ ವೈಭವದಿಂದ ಆಕರ್ಷಿಸಬಲ್ಲದು ಎನ್ನುವುದಕ್ಕೆ ಡಿವಿಜಿ ಅವರ ಕಾವ್ಯ ಸಾಕ್ಷಿ. ಮೊದಲು ಬಂದಿರುವ 'ವಾಲ್ಮೀಕಿ ವೇದ' ಆದಿಕವಿಯ ಕಾವ್ಯದ ಮಹತ್ತ್ವವನ್ನೂ, ವಿಶೇಷತೆಗಳನ್ನೂ ಬೊಟ್ಟು ಮಾಡಿ ತೋರಿಸುತ್ತದೆ. ಆ ಮಹಾಕವಿಗೆ ಗುರುವಿಗೆ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಮಾನುಷಹೃತ್ಸೌಂದರ್ಯಂ
ವಾಣೀ ಗಂಭೀರ ರಮ್ಯಗತಿಚಾತುರ್ಯಂ ॥
ಗಾನಸುಧಾ ಮಾಧುರ್ಯಂ
ಜ್ಞಾನಿ ಕವೀಂದ್ರಪ್ರದತ್ತ ಜೀವೈಶ್ವರ್ಯಂ ॥

ಇದು ರಾಮಾಯಣ!

ಈ ಕಾವ್ಯಕ್ಕೆ ಶ್ರೀ ಜಿ.ಪಿ. ರಾಜರತ್ನಂ '*ಶ್ರೀರಾಮಚಂದ್ರಪ್ರಭು*' ಎಂಬ ವಿವರಣಾತ್ಮಕ ಗ್ರಂಥದ ಸಹಾಯವನ್ನು ಒದಗಿಸಿದ್ದಾರೆ.

ರಾಮ ಧರ್ಮವನ್ನು ಎತ್ತಿಹಿಡಿದ ಬಗೆ ಒಂದು. ಕೃಷ್ಣ ಹಿಡಿದದ್ದು ಇನ್ನೊಂದು. ಕಾಲವ್ಯತ್ಯಾಸ ಸನ್ನಿವೇಶವ್ಯತ್ಯಾಸದಿಂದ ಮಾರ್ಗವ್ಯತ್ಯಾಸ. ಕೃಷ್ಣನ ಕಾಲದಲ್ಲಿ ರಾಜಕೀಯ ಗೋಜು. ಧರ್ಮದ ಅವನತಿ. ರಾಗ ದ್ವೇಷಗಳ ವಿಜೃಂಭಣೆ. ಆಗ ಕೃಷ್ಣ ಹೇಗೆ ನಡೆದುಕೊಂಡ, ಧರ್ಮಸಂಸ್ಥಾಪನೆಗೆ ಯಾವ ದಾರಿ ಹಿಡಿದ? ಯಾವ ಬೋಧೆಯನ್ನು ನೀಡಿದ? ಇದು '*ಶ್ರೀ ಕೃಷ್ಣ ಪರೀಕ್ಷಣ*'.

'ಶ್ರೀ ಕೃಷ್ಣ ಪರೀಕ್ಷಣಂ' ಮಿಶ್ರಗ್ರಂಥ. ಇದರಲ್ಲಿ ಗದ್ಯವಿಮರ್ಶೆ, ಕಾವ್ಯ, ನಾಟಕ ಎಲ್ಲ ಇವೆ. ನಾಲ್ಕು ಭಾಗಗಳಲ್ಲಿ ಡಿವಿಜಿಯವರ ಶ್ರೀ ಕೃಷ್ಣಚಿಂತನ ಅಭಿವ್ಯಕ್ತಗೊಳ್ಳುತ್ತದೆ. ಅರ್ಧಕ್ಕೂ ಹೆಚ್ಚಿನ ಭಾಗ ಮೊದಲನೆಯದು. ಗದ್ಯ ವಿಮರ್ಶೆ. ಶ್ರೀಕೃಷ್ಣ ಮೀಮಾಂಸೆ, ಶ್ರೀಕೃಷ್ಣಚಾರಿತ್ರ್ಯ, ಶ್ರೀಕೃಷ್ಣತತ್ತ್ವ, ಶ್ರೀಕೃಷ್ಣ ಗೋಪೀ ವಿಲಾಸ, ರಕ್ತಿಯೂ ಭಕ್ತಿಯೂ ಯಮಳರೇ? ಸುಖಾಪೇಕ್ಷೆ ದೋಷವೋ ಎಂಬ ಐದು ಖಂಡಗಳಲ್ಲಿ ಶ್ರೀ ಕೃಷ್ಣ ಮೀಮಾಂಸೆ ನಡೆದಿದೆ. ಕೃಷ್ಣನ ಜೀವಿತದ ಉದ್ದೇಶ, ತತ್ತ್ವ, ದರ್ಶನ, ಸಾಧನೆ, ಸಿದ್ಧಿ, ಧರ್ಮಸಂಸ್ಥಾಪನೆ, ಭಾವಸಂಪನ್ನತೆ, ಕಾವ್ಯ ಐತಿಹ್ಯಗಳು, ಕೃಷ್ಣ ಕಲ್ಪನೆ, ಕೃಷ್ಣನ ಲೀಲಾವಿನೋದಗಳ ಅಂತರಾರ್ಥ, ರಾಸಲೀಲಾ ಪ್ರಸಂಗದ ವೈಶಿಷ್ಟ್ಯ, ಅಪಕಲ್ಪನೆ ಅಪವಾದಗಳಿಗೆ ಉತ್ತರ, ಶ್ರೀರಾಮ–ಶ್ರೀಕೃಷ್ಣ ಇಬ್ಬರ ನಡುವೆ ಹೋಲಿಕೆ ವ್ಯತ್ಯಾಸಗಳು—ಇದೆಲ್ಲ ವಿಚಾರಮಂಥನ ಮೊದಲನೆಯ ಭಾಗ.

"ಮನಶ್ಛಿದ್ರದ ಈ ಸಮಯದಲ್ಲಿ ನಾವು ಗೊತ್ತಾದ ದಾರಿಯಲ್ಲಿ ದೃಢವಾಗಿ ಹೆಜ್ಜೆಯೂರಿ ನಡೆಯಬೇಕಾದರೆ ಶ್ರೀರಾಮ–ಶ್ರೀಕೃಷ್ಣರ ಅಂತರಂಗವೇನೆಂಬುದನ್ನು ಹುಡುಕಿ ಮನಸ್ಸಿಗೆ ತಂದುಕೊಳ್ಳುವುದು ತುಂಬ ಅವಶ್ಯವಾದ ಆತ್ಮಶಿಕ್ಷಣ. ಆ ಪ್ರಯತ್ನಕ್ಕೆ ಈ ಮೇಲಣ ವಿಚಾರ ಸರಣಿ ಉಪಯುಕ್ತವಾದೀತೆಂದು ನನ್ನ ನಂಬಿಕೆ"–ಕವಿಯ ಈ ಆಶಯ ಸಾರ್ಥಕಗೊಂಡಿದೆ. ಈ ಕೃತಿಯ ಅಧ್ಯಯನ ನಿಜಕ್ಕೂ ಆತ್ಮಶಿಕ್ಷಣಪ್ರದವೇ. ಈ ವಿಚಾರಮಂಥನದಿಂದ ತೇಲಿಬರುವ ನವನೀತ ವನ್ನು ಡಿವಿಜಿ ಹೀಗೆ ಉಂಡೆಮಾಡಿ ಕೊಟ್ಟಿದಾರೆ—

"ಶ್ರೀರಾಮ–ಶ್ರೀಕೃಷ್ಣರು

1. ಕೆಲವಂಶಗಳಲ್ಲಿ ಚಾರಿತ್ರಿಕ ಮಹಾಪುರುಷರು.
2. ಕೆಲವಂಶಗಳಲ್ಲಿ ಕವಿ ಸಂದರ್ಶಿತ ಮಹಾಪುರುಷರು.
3. ಕೆಲವಂಶಗಳಲ್ಲಿ ಕವಿ ಸಂದರ್ಶಿತ ದೈವಾಂಶ ಪುರುಷರು. ಇಬ್ಬರೂ—
4. ಭಕ್ತರಿಗೆ ಅಂತರಂಗೋಪಾಸ್ಯ ಪರದೈವ ಪ್ರತೀಕರು.
5. ಸಮಸ್ತರಿಗೂ ಶಾಶ್ವತ ಧರ್ಮಪ್ರತಿಷ್ಠಾಪಕರು.

"ಶ್ರೀರಾಮನು—

6. ವ್ರತನಿಯಮ ವಿಧೇಯತೆಗೆ ಆದರ್ಶನು.

"ಶ್ರೀಕೃಷ್ಣನು—

7. ಮಾನುಷಾನುಕಂಪೆಯ ಉದಾರತೆಗೆ ಆದರ್ಶನು ;
   ವಿಶೇಷ ಸಂದರ್ಭದ ಧರ್ಮವನ್ನು ನಿರೂಪಿಸಿದವನು.

"ಇಬ್ಬರೂ –

8. ಮನುಷ್ಯಲೋಕದ ಪರಮಹಿತಲಾಭಕ್ಕೆ ಅವಶ್ಯರಾದ ಉಪಕಾರಿಗಳು.''

ರಾಮದೀಕ್ಷೆ "ಒಡಲಿನ ನಿಲುವಿಗೆ ಮೂಳೆಯ ದೃಢತೆ'ಯನ್ನು ಒದಗಿಸಿದರೆ, ಕೃಷ್ಣನಯ "ಅಂಗಾಂಗ ಚಲನೆಗೆ ಸ್ನಾಯುಗಳಾ ಸಡಿಲಮುಮಿಹವೊಲ್'' ಮಾಡುತ್ತದೆ. ಎರಡೂ ನಮಗೆ ಅವಶ್ಯ.

ಶ್ರೀಕೃಷ್ಣನಿಗೆ ಅಂಟಿದ ಚೋರತ್ವ–ಜಾರತ್ವಗಳ ಕಳಂಕವನ್ನು ಡಿವಿಜಿ ವಿಮರ್ಶಿಸುತ್ತಾರೆ. ಚೋರತ್ವ ಬಾಲ್ಯದ ಹುಡುಗಾಟಿಕೆ, ತುಂಟತನ. ಅದು ಕೇವಲ ಸಂತೋಷದ ನಿಂದೆ. ಕೋಪದ್ದಲ್ಲ. ಕೃಷ್ಣ ರಾಸಿಕ್ಯ ಕಾಮುಕತೆ ಅಲ್ಲ. ಆತ ಜಾರ ಅಲ್ಲ. ಗೋಪಿಯರ ಕಾಮಜ್ವರಕ್ಕೆ ಆತ ಪರಿಹಾರೋಪಾಯ ಸೂಚಿಸಬೇಕಾಯಿತು. "ಕಾಮುಕರಾದ ಗೋಪಿಯಲ್ಲಿ ತೃಪ್ತಿಯನ್ನು ವಿರಕ್ತಿಯನ್ನು ಉಂಟುಮಾಡಿದ್ದು ಆ ಈಶ್ವರನ ಮಹಾಮಹಿಮೆ.'' ಮಹಾಪುರುಷರ ನಡೆ, ದೈವಿಕ ಪುರುಷರ ತೆರ ಬೇರೆ. ಅದು ಎಲ್ಲರಿಗೂ ಅಸಾಧ್ಯವಾಗಬಹುದು, ಸಲ್ಲದಾಗಬಹುದು. ಕಾರಣ ವಿಶೇಷ ಸಂದರ್ಭಗಳಲ್ಲಿ ಆ ದೈವಿಕ ಪುರುಷರು ಹಾಗೆ ನಡೆದಿರಬಹುದು. ಅದು ಸಾಧಾರಣ ರಿಗೆ ಸಾಧಾರಣ ಸಂದರ್ಭದಲ್ಲಿ ಸರಿಹೋಗಲಾರದು.

ಇಷ್ಟಕ್ಕೂ ಪ್ರೇಮ–ಕಾಮಗಳು ದೂಷ್ಯವೇನೂ ಅಲ್ಲ. ವೇದಾದಿಗಳಲ್ಲಿ ಅವುಗಳ ಮಹತ್ವದ ವರ್ಣನೆ ಇದೆ. ಬಾಳಿಗೆ ಅವು ಅಗತ್ಯ, ಪ್ರಚೋದಕ, ಉತ್ಸಾಹಕರ. ಅವುಗಳನ್ನು ಧರ್ಮ ಮಾರ್ಗದಲ್ಲಿ, ನಿಯತವಾಗಿ ಅನುಭವಿಸುವುದು ಪಾಪವೇನಲ್ಲ. ಈ ತತ್ತ್ವ ಕೃಷ್ಣನ ಜೀವಿತದಿಂದ ಹೊಮ್ಮುತ್ತದೆ ಎಂದು ಡಿವಿಜಿ ಪ್ರತಿಪಾದಿಸಿದ್ದಾರೆ. '*ಉಮರನ ಒಸಗೆ*'ಯಲ್ಲಿನ ಸೌಂದರ್ಯಕಾಮಚಿಂತನೆಯೆ ಕೃಷ್ಣ ಚಿಂತನೆಯಲ್ಲಿ ಹಾಗೂ '*ಅಂತಃಪುರ ಗೀತೆ*', '*ಗೀತ ಶಾಕುಂತಲ*', '*ಶೃಂಗಾರ ಮಂಗಳಂ*' ಕೃತಿಗಳಲ್ಲಿ ಬೆಳೆದುಬಂದಿದೆ. ಕೃಷ್ಣಪರೀಕ್ಷಣದ ಮೊದಲ ಭಾಗದಲ್ಲಿ ಡಿವಿಜಿಯವರ 'ರಸಚಿಂತನೆ'ಯು ಮೂಡಿಬಂದಿದೆ. ಈ ಗದ್ಯದ ಚಿಂತನೆಯೆ ಎರಡನೆಯ ಭಾಗವಾದ ಅವತರಣಿಕೆಯ ಪದ್ಯಭಾಗದ ಸುಂದರ ಕಂದಪದ್ಯಗಳಲ್ಲಿ ಸೂತ್ರಪ್ರಾಯವಾಗಿ ಸಿಗುತ್ತದೆ. '*ಲೀಲಾ ವಿಭೂತಿ*' ಎಂಬ ಗೀತ ನಾಟಕ ಮೂರನೆಯ ಭಾಗ. ಕೃಷ್ಣನೇ ಪರತತ್ತ್ವ ಎಂಬ ಗೋಪಿಯರ ಹಂಬಲ, ರಾಸಲೀಲೆ, ನಾರದನ ವಿವರಣೆ—ಇವು ಇಲ್ಲಿನ ಪ್ರಸಂಗಗಳು. ಗದ್ಯಪದ್ಯ ಮಿಶ್ರಿತ ನಾಟಕ. ಭಾಗವತ–ಶ್ರೀಕೃಷ್ಣ ಕರ್ಣಾಮೃತದ ಕೆಲವು ಪದ್ಯಗಳ ಅನುವಾದವೂ ಸೇರಿದೆ. ಓದಿಕೊಳ್ಳಲು, ಭಾವಿಸಿಕೊಳ್ಳಲು, ಆಹ್ಲಾದಕರ ರಚನೆ, ಹಾಡಿಕೊಳ್ಳಲು ಚೆನ್ನಾದ ಗೀತಗಳು. ನಾಲ್ಕನೆಯ ಭಾಗವಾದ '*ನಾರದ–ಕೃಷ್ಣ ಸಂವಾದ*',

'*ಶ್ರೀರಾಮ–ಪರೀಕ್ಷಣಂ*'ನಂತೆ ಪ್ರಶ್ನೋತ್ತರ ಪದ್ಯಖಂಡ. ಇಲ್ಲಿ ಪ್ರಶ್ನೆ ಕೇಳುವವ ಒಬ್ಬನೇ, ನಾರದ. ಉತ್ತರ ಶ್ರೀಕೃಷ್ಣನದು. ಧರ್ಮ–ಕಾಮ–ಶೃಂಗಾರ–ಆತ್ಮಶಿಕ್ಷಣ–ಸೃಷ್ಟಿಯ ಉದ್ದೇಶ, ಮುಕ್ತಿ ಕಲ್ಪನೆ ಮೊದಲಾದ ವಿಷಯಗಳ ಪರಾಮರ್ಶೆ ಇಲ್ಲಿದೆ. ಡಿವಿಜಿಯರ ರಸಸಿದ್ಧಾಂತ, ಸೌಂದರ್ಯ ಸಿದ್ಧಾಂತ, ಜೀವನ ದೃಷ್ಟಿ ಇಲ್ಲಿ ಹಳಕುಗಟ್ಟಿದೆ. ಸತ್ಯ–ಶಿವ–ಸೌಂದರ್ಯಗಳ ಸಮನ್ವಯವನ್ನು ಕಾಣಬಹುದು.

ಸತ್ಯದೆ ಜೀವಂ ಸ್ವಸ್ಥಂ
ಪ್ರೀತ್ಯಾಹವಹಮಹುದು ಜೀವಿತಂ ಸುಂದರದಿಂ ।।
ಸತ್ಯದ ಸೌಂದರ್ಯದ ದಾಂ
ಪತ್ಯದ ಫಲಮ್ ಅಖಿಲಲೋಕ ಧರ್ಮಂ ಕುಶಲಂ ।।

ಮೇಲೆ ಹೇಳಿದಂತೆ ಈ ಸೌಂದರ್ಯ ಮೀಮಾಂಸೆಯು ಡಿವಿಜಿಯವರ '*ಅಂತಃಪುರ ಗೀತೆ*', '*ಶೃಂಗಾರ ಮಂಗಳಂ*' ಕೃತಿಗಳಲ್ಲೂ ಅರಳಿಕೊಳ್ಳುತ್ತದೆ. '*ಬೇಲೂರಿನ ಶಿಲಾಬಾಲಿಕೆಯರು*' ಡಿವಿಜಿಗೆ ಸೌಂದರ್ಯದ ನಿಧಿಗಳಾಗಿ, ಸೃಷ್ಟಿಕರ್ತನ ಸೌಂದರ್ಯದ ಕಣಗಳಾಗಿ ತೋರುವುದನ್ನು 'ನಿವೇದನ'ದ ಒಂದು ಕವನ ಸಂಕ್ಷೇಪವಾಗಿ ನಿರ್ದೇಶಿಸಿತ್ತಲ್ಲ. ಅದರ ವಿಸ್ತೃತ ಕಲ್ಪನಾ ರಚನೆಯೆ '*ಅಂತಃಪುರ ಗೀತೆ*'. ಬೇಲೂರಿನ ದೇವಾಲಯ ಕನ್ನಡ ನಾಡಿನ ಒಂದು ಅದ್ಭುತ. ಅದನ್ನು ಹಾಡಿನಲ್ಲಿ ಬಣ್ಣಿಸಿರುವ ಡಿವಿಜಿಯವರ *ಅಂತಃಪುರ ಗೀತೆ* ಕನ್ನಡ ಸಾಹಿತ್ಯದ ಒಂದು ಅದ್ಭುತ. ಸೊಗಸು, ಬಂಧುರತೆ, ಚಿಂತನೆಯ ಆಳ, ಜೀವನ ದೃಷ್ಟಿ, ಮೇಲಾಗಿ ಕೃತಿಯ ಅಚ್ಚುಕಟ್ಟು, ಅಂದಚೆಂದ, ಸೊಗಸಿನ ಚಿತ್ರ, ಎಲ್ಲದರಲ್ಲೂ ಸರ್ವಾಂಗ ಸುಂದರ ಕೃತಿ. ಜಕ್ಕಣನ ಶಿಲ್ಪ ಒಂದೊಂದೂ ಕವಿಗೆ ಒಂದೊಂದು ಲೀಲಾ ವಿಲಾಸದ ಸೆಲೆ. ಆ ಪುಟ್ಟ ವಿಗ್ರಹಗಳನ್ನು ಕವಿ ಮಾತಾಡಿಸುತ್ತಾರೆ. ಅವುಗಳ ಭಾವಭಂಗಿಗಳನ್ನು ಅರ್ಥೈಸುತ್ತಾರೆ. ಅವು ಸೂಚಿಸುವ ಅಂತರಂಗದ ರಕ್ತಿ ಅನುರಕ್ತಿಗಳನ್ನು ಭಕ್ತಿ ಮುಕ್ತಿಗಳನ್ನು ಅಂದವಾದ ಕಂದವೃತ್ತ ಹಾಡುಗಳಲ್ಲಿ ನಮ್ಮ ಹೃದಯಕ್ಕೆ ಮುಟ್ಟಿಸುತ್ತಾರೆ. ಬೇಲೂರಿನ ದೇವಾಲಯ ಚೆನ್ನಕೇಶವನ ಒಡ್ಡೋಲಗ, ಚೆಲುವಿನ ಲೋಕ. ಅಲ್ಲಿ ಮೂಲ ಸ್ಫೂರ್ತಿ ಚೆನ್ನಕೇಶವ, ಸತ್ಯ ಸೌಂದರ್ಯಗಳ ಸಾಕಾರ ರೂಪ. ಸುತ್ತಲ ಸಿಂಗಾರ ಬೆಡಗು ಎಲ್ಲ ಆತನ ಲೀಲಾವಿಲಾಸ, ಈ ಮದನಿಕೆಯರು ಆ ವಿಲಾಸದ ಗಾಡಿಕಾತಿಯರು. ಭಗವದರ್ಪಿತ ಭಕ್ತೆಯರು. ಅವರ ರೂಪ ಬೆಡಗು ಆಕರ್ಷಕ. ಆದರೆ ಅವರೇ ಚೆನ್ನಕೇಶವನಿಂದ ಆಕರ್ಷಿತರು. ಆತನಲ್ಲಿ ಶರಣಾಗತರು. ಸೌಂದರ್ಯ ಸತ್ಯಕ್ಕೆ ಶರಣಾಗುತ್ತದೆ. ಅದೇ ಅನುರಕ್ತಿ, ಭಕ್ತಿ, ಪ್ರಪತ್ತಿ, ಮುಕ್ತಿ! ಸತ್ಯವನ್ನು ಮರೆಯದ, ಸತ್ಯಕ್ಕೇ ಸದಾ ಅಭಿಮುಖವಾದ, ಸತ್ಯಕ್ಕೇ ಶರಣಾದ

ಸೌಂದರ್ಯದ ದಿವ್ಯಕಲ್ಪನೆ ಬೇಲೂರಿನ ದೇಗುಲ. ಡಿವಿಜಿ ಈ ಭಾವವನ್ನು ಇಲ್ಲಿನ ಅರವತ್ತು ಹಾಡುಗಳಲ್ಲಿ ಹರಿಯಿಸುತ್ತಾರೆ. ಮದನಿಕೆಯರ ಅಂತರ್ಭಾವವನ್ನು ಅರಿಯುವಲ್ಲಿ ಕವಿಗೆ ಅವರೊಂದಿಗೆ ತಾದಾತ್ಮ್ಯ. ಆ ಭಾವವನ್ನು ಅಭಿವ್ಯಕ್ತಿಗೊಳಿಸುವಲ್ಲಿ ಅಲಿಪ್ತತೆ, ಸಾಕ್ಷೀಭಾವ!

ಸ್ವಾರಸ್ಯದ ಒಂದು ಅಂಶ ಎಂದರೆ ನಮ್ಮ ದೇಗುಲಗಳಲ್ಲಿ ಹೊರಗೆಲ್ಲ ಚೆಲುವಿನ ಶೃಂಗಾರ ಶಿಲ್ಪಗಳು. ಒಳಗೆ ಗರ್ಭಗುಡಿಯಲ್ಲಿ ಒಂದೇ ಒಂದು ವಿಗ್ರಹ, ಮೂಲದೇವನದು. ಅಲ್ಲಿ ಸಿಂಗಾರದ ಬೆಡಗಿಲ್ಲ. ಈ ಹೊರ ಸಿಂಗಾರ ಬೆಡಗುಗಳಿಗೆ ಬೆರಗಾಗಿ ಅಲ್ಲೆ ನಿಲ್ಲದೆ, ಅವನ್ನು ದಾಟಿ ಒಳಹೊಕ್ಕು ಅಂತರ್ಗೃಹದಲ್ಲಿ ನೆಲೆಗೊಂಡಿರುವ ಸತ್ಯದರ್ಶನ ಮಾಡುವುದೇ ಯಾತ್ರೆಯ ಗುರಿ. ಕವಿಚಿತ್ತ ಈ ಅಂಶವನ್ನು ಮರೆಯುವುದಿಲ್ಲ. ಹೊರಗಣ ಚೆಲುವು ನಲವು ಎಷ್ಟೇ ಮನಸೆಳೆಯಲಿ, ಅವೆಲ್ಲವೂ ಒಳಗಣ ಸತ್ಯಕ್ಕೇ ಶರಣು, ಅಲ್ಲಿಗೇ ನಮ್ಮನ್ನು ಕರೆದೊಯ್ಯಬೇಕು, ಈ ಭಾವವೂ ಈ ಕೃತಿಯಲ್ಲಿ ಧ್ವನಿತವಾಗಿದೆ. ಒಂದೊಂದು ಪುಟದಲ್ಲೂ ಒಬ್ಬೊಬ್ಬ ಮದನಿಕೆಯ ಚಿತ್ರ. ಎದುರು ಪುಟದಲ್ಲಿ ಆಕೆಯ ಹಾಡು. ಮದನಿಕೆಯರಿಗೆ ಕೊಟ್ಟಿರುವ ಹೆಸರುಗಳೇ ಕವಿಯ ರಸದೃಷ್ಟಿಗೆ ದ್ಯೋತಕ. ಮುಕುರ ಮುಗ್ಧೆ, ಶುಕಭಾಷಿಣಿ, ವೃಶ್ಚಿಕದಂಷ್ಟ್ರೆ ಇತ್ಯಾದಿ. ರಾಗತಾಳಬದ್ಧವಾದ ಹಾಡುಗಳು, ಉನ್ನತ ಗಂಭೀರ ನಡೆಯ ಕಂದವೃತ್ತಗಳು, ಬಿಗಿಯಾದ ಪದಬಂಧ, ಸೊಗಸಾದ ಮುದ್ರಣ, ಚಿತ್ರಗಳು. *'ಅಂತಃಪುರ ಗೀತೆ'* ಸೌಂದರ್ಯ ಚಿಂತನಕ್ಕೆ ಅತ್ಯಂತ ಸೂಕ್ತ ರೀತಿಯ ರಚನೆ. ಇಲ್ಲಿನ ರಚನೆಗಳು ಹಾಡಿಕೆಗೆ ನಾಟ್ಯಕ್ಕೆ ಒದಗಿಬರುತ್ತವೆ. ಅನೇಕ ಕಡೆ ಈ ಪ್ರಯೋಗ ನಡೆದಿರುವುದೂ ಉಂಟು. ಇಲ್ಲಿನ ಮೋಹಿನಿ–ಭಸ್ಮಾಸುರ ರಚನೆ ನಾಟ್ಯದಲ್ಲಿ ಸೊಗಯಿಸುತ್ತದೆ.

ಈವರೆಗೆ ನಾವು ನೋಡಿದ ಕೃತಿಗಳಲ್ಲಿ ಸೌಂದರ್ಯಮೀಮಾಂಸೆಯ ಅಪ್ರತ್ಯಕ್ಷ ದರ್ಶನವಾಗಿದೆ. ಅಂದರೆ ಕೃತಿಯಲ್ಲಿ ವರ್ಣಿತವಾದ ವಸ್ತು ಅಥವಾ ವಿಚಾರದ ಹಿನ್ನೆಲೆಯಾಗಿ ಸೌಂದರ್ಯಮೀಮಾಂಸೆ ಕಾಣಿಸಿಕೊಳ್ಳುತ್ತದೆ. ಆದರೆ ಆ ಮೀಮಾಂಸೆಯೇ ಪ್ರಧಾನವಾದ ಕೃತಿ *'ಶೃಂಗಾರ ಮಂಗಳಂ'*. ಇತರ ಹಲವು ಕೃತಿಗಳಲ್ಲಿ ಕ್ವಚಿತ್ತಾಗಿ ಕಾಣಿಸಿಕೊಳ್ಳುವ, ಮಿಂಚುವ ಸೌಂದರ್ಯ ಚಿಂತನೆ, ಇಲ್ಲಿ ಇಡಿಯಾಗಿ ಸಂಪೂರ್ಣವಾಗಿ ಮೈತಳೆದಿದೆ. ಪೀಠಿಕೆಯೂ ಪದ್ಯದಲ್ಲೆ. ಕೊನೆಯ ಅನುಬಂಧದ ಎರಡು ಪ್ರಬಂಧ ಮಾತ್ರ ಗದ್ಯ. ಉಳಿದೆಲ್ಲವೂ ಪದ್ಯವೇ. ಜಗತ್ಸೃಷ್ಟಿ: ಮಹರ್ಷಿ ಸಾಕ್ಷ್ಯ, ಜಗದ್ವಿಕಾಸ ; ಮಹರ್ಷಿಸಾಕ್ಷ್ಯ, ಸತ್ಯಸುಂದರ ತತ್ತ್ವ; ಕೀಟ್ಸನ ಸಾಕ್ಷ್ಯ, ಪ್ರೇಮಾದ್ವೈತ ; ಷೇಕ್ಸ್‌ಪಿಯರನ ಸಾಕಷ್ಯ, ವಿರಹಿಯ ಅನುಭವ ;

ಅನಾಮಧೇಯ ಸಾಕ್ಷ್ಯ—ಈ ಆರು ಕಾವ್ಯಖಂಡಗಳಲ್ಲಿ ಡಿವಿಜಿ ತಮ್ಮ ಶೃಂಗಾರ ಚಿಂತನೆಯನ್ನು, ಸೌಂದರ್ಯ ಮೀಮಾಂಸೆಯನ್ನು, ಪ್ರೇಮ–ಕಾಮ ಪರಾಮರ್ಶೆಯನ್ನು ನಮ್ಮ ಮುಂದೆ ತೆರೆದಿಡುತ್ತಾರೆ.

ಕೀಟ್ಸ್ ಕವಿಯ 'Ode on a Grecian Urn' ಲೋಕಪ್ರಸಿದ್ಧವಾದ ಕಾವ್ಯ. ಆ ಕರಂಡದ ಹೊರಮೈ ಮೇಲೆ ಚೆಲುವೆಯರ ಚಿತ್ರಗಳು, ಸೌಂದರ್ಯದ ವಿಲಾಸ. ಜೀವನೋತ್ಸಾಹ ಉಕ್ಕಿಸುವ ದೃಶ್ಯಾವಳಿ. ಒಳಗೊ ಸತ್ತವರ ಚಿತಾಭಸ್ಮ! ಹೊರಗೆ ಕಾಮ, ಒಳಗೆ ಯಮ. ಎರಡರ ಸಂಗಮ! ವಿಚಿತ್ರ. ಆದರೆ ಅದೇ ಜೀವನ ತತ್ತ್ವ. ಸಾವು ಸತ್ಯ. ಕಾಮವೂ ಸತ್ಯ. ಕಾರಣ ಅದು ಲೋಕ ಜೀವನ ಪ್ರೋತ್ಸಾಹಕ ದ್ರವ್ಯ. ಕಾಮ ಜೀವನಪ್ರೇರಕ, ಸೃಷ್ಟಿಸ್ಥಿತಿಗಳಿಗೆ ಕಾರಣಭೂತ. ಅನಿವಾರ್ಯವಾದ ಸತ್ಯವೇ ಸಾವು, ಯಮ. ಈ ಕಾಮ–ಯಮಗಳ ನಡುವೆ ಜೀವನ ಪ್ರವಾಹ. 'ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ' ಎಂಬ ಕೀಟ್ಸ್‌ನ ಸಿದ್ಧಾಂತ ವಾಕ್ಯ ಪ್ರಸಿದ್ಧವಾದುದು. ಡಿವಿಜಿ ಆ ವಿಚಾರವನ್ನು ಎತ್ತಿಕೊಂಡು ಭಾರತೀಯ ತತ್ತ್ವ ದರ್ಶನದ ಹಿನ್ನಲೆಯಲ್ಲಿ ವಿಮರ್ಶಿಸುತ್ತಾರೆ. ಎರಡಕ್ಕೂ ಸಾಮ್ಯವನ್ನು ಕಾಣುತ್ತಾರೆ. ಕಾಮ–ಪ್ರೇಮ–ಸೌಂದರ್ಯ ಜಗತ್ತಿಗೆ ಅಗತ್ಯ. ಅವೂ ಪರಮಾತ್ಮ ಸೃಷ್ಟಿಯೆ. ದೂಷ್ಯವಲ್ಲ. ಆದರೆ ಅವೇ ಪರಮ ಅಲ್ಲ. ಅವುಗಳ ಭ್ರಮೆಯಲ್ಲಿ ಪರಮಸತ್ಯವನ್ನು ಮರೆಯಬಾರದು. ಸತ್ಯದಲ್ಲಿ ನೆಟ್ಟ ದೃಷ್ಟಿ ಸೃಷ್ಟಿಯ ಸೌಂದರ್ಯವನ್ನು ಪರಮಾತ್ಮನ ಪ್ರಸಾದವೆಂದು ಭಾವಿಸಿ ಆಸ್ವಾದಿಸುವ ನಡೆ—ಇವೆರಡೂ ಜೀವನದಲ್ಲಿ ಅತ್ಯಗತ್ಯ. ಹಸನಾದ ಬಾಳಿಗೆ ಇವೇ ಆಧಾರ, ನೆಲೆಗಟ್ಟು. ಈ ಸಾಮರಸ್ಯವನ್ನು ಡಿವಿಜಿ ಪ್ರತಿಪಾದಿಸುತ್ತಾರೆ. ರಸಿಕನೂ ಭಕ್ತನೇ, ಋಷಿಯೂ ರಸಿಕನೇ, ಸೃಷ್ಟಿ ಮಿಥ್ಯೆಯೂ ಅಲ್ಲ, ತುಚ್ಛವೂ ಅಲ್ಲ. ಭೋಗ್ಯವೇ ಸರಿ. ಇತ್ತ ಭೋಗವೂ ಬೇಕು, ಅತ್ತ ತ್ಯಾಗವೂ ಬೇಕು. ಎರಡೂ ಸೇರಿ ಯೋಗ. ಜೀವನಯೋಗ ಜೀವನ ಧರ್ಮಯೋಗ! ಈ ತತ್ತ್ವಪ್ರಣಾಲಿ ಈ ಕೃತಿಯಲ್ಲಿ ಸುಂದರವಾದ ಗಂಭೀರವಾದ ಕಾವ್ಯದಲ್ಲಿ ಒಡಮೂಡಿದೆ.

ಬ್ರಹ್ಮಕಾಮಿತಮಲ್ತೆ ಸೃಷ್ಟಿಯಾರಂಭ ಘಟಕಂ
ಕಾಮದಿನೆ ಜೀವಚೋದನೆ ಜಗನ್ನಿತ್ಯ ಚಲನೆ
ಕಾಮನಂ ಸುಟ್ಟವನೆ ಮರಳಿ ತಾಂ ಕಾಮಿಯಾದನ್
ಶಿವಶಿವೆಯರೊಳ್ ಕಾಮಮಾಯಿತಾತ್ಮೈಕ ಧಾಮಂ !

ಕಾಮ ಆತ್ಮೈಕಧಾಮವಾಗುವುದು—ಇದೇ ಜೀವನ ವೈಭವ, ಸಂಯಕ್ ಜೀವನ!

ತನುಪೋಷಣೆಗನ್ನರಸಂ
ಮನಸಿನ ಪೋಷಣೆಗೆ ಬೇಕುದನುರಾಗರಸಂ ।
ಪ್ರಣಯವನರಿಯದ ಜೀವಂ
ತೃಣಜಲ ಲವಲೇಶಶೂನ್ಯ ಮರುತಲ ಸಿಕತಂ ।

ಮಾನವ ಹೃದಯ ಮರಳುಗಾಡು ಆಗದಂತೆ, ಶುಷ್ಕವಾಗದಂತೆ, ತಂಪನ್ನು, ತನಿರಸವನ್ನು ನೀಡುವುದು ಪ್ರೇಮ–ಕಾಮ.

ಪ್ರೇಮ ಒಂದು ಅದ್ವೈತಾನುಭೂತಿ. ಪ್ರೇಮಾದ್ವೈತ. ಇದಕ್ಕೆ ಸಾಕ್ಷಿಯಾಗಿ ಷೇಕ್ಸ್‌ಪಿಯರನ 'ದಿ ಫೀನಿಕ್ಸ್ ಅಂಡ್ ದಿ ಟರ್ಟ್ಲ್' ಎಂಬ ಕಾವ್ಯದ ಭಾವಾನುವಾದವನ್ನು ಕೊಡುತ್ತಾರೆ.

'ಅನಾಮಧೇಯನ ಸಾಕ್ಷ್ಯ' ಒಬ್ಬ ವಿರಹಿಯ ಆತ್ಮದ ಅಳಲು. (ಇದು ಡಿವಿಜಿಯವರ ಅನುಭವವೂ ಇದ್ದೀತೆ?) 'ಸತ್ಯ ಮತ್ತು ಸೌಂದರ್ಯ' ಎಂಬ ಅನುಬಂಧದಲ್ಲಿ ಇದೇ ಮೀಮಾಂಸೆಯನ್ನೆ ಡಿವಿಜಿ ವಿವರಿಸುತ್ತಾರೆ. ಕೀಟ್ಸ್‌ನ ತತ್ತ್ವಸಿದ್ಧಾಂತ ವೇದಾಂತಮತಕ್ಕೆ ಸಮ್ಮತವೇ ಎಂದು ಪ್ರತಿಪಾದಿಸುತ್ತಾರೆ. ''ಸತ್ಯದ ಸತ್ಯವು ಪರಮಾತ್ಮ. ವಿಶ್ವಕರ್ತನ ಒಳಮೈ ಸತ್ಯ; ಹೊರಮೈ ಸೌಂದರ್ಯ. ಇದು ಜೀವನಧರ್ಮಕ್ಕೆ ಮೂಲಾಧಾರ. ಸತ್ಯವನ್ನು ಮರೆಯದೆ ಸೌಂದರ್ಯವನ್ನು ಭಜಿಸುವಾತನು ಸುಕೃತಜೀವಿ.''

''ಧಾರ್ಮಿಕನ ಶೃಂಗಾರ ಜೀವಕ್ಕೆ ಸಂಸ್ಕಾರ. ಮರ್ಮವರಿತ ಪ್ರೇಮವಾತ್ಮ ವಿಸ್ತಾರ.''

ಹಳಿಯದಿರು ಸುಂದರವ, ಜರಿಯದಿರು ಸಿಂಗರವ
ಕಳೆಯದಿರು ಜೀವಬಾಂಧವ್ಯ ಬಂಧುರವ
ಮಲಿನವಾಗದೆ ಬೆಳೆದು ಬೆಳಗೆ ನಿನ್ನೊಳಸತ್ತ್ವ –
ಮೊಳೆತು ಜಗವೊಳಿತು ಸೊಗಸೊಗಸೆಲ್ಲಮೊಳಿತು.

—ಇದು ಡಿವಿಜಿಯವರ ಶೃಂಗಾರ ಸಂದೇಶ, ಸೌಂದರ್ಯ ದರ್ಶನ.

ಕಾವ್ಯಗಳ ಪೈಕಿ ಇನ್ನು ನಾವು ನೋಡಬೇಕಾದವು ಜೋಡಿ ಕಗ್ಗಗಳು— ಅವರೇ ಪ್ರಕಟಿಸಿದ '*ಮಂಕುತಿಮ್ಮನ ಕಗ್ಗ*', ಅವರ ನಿಧನಾನಂತರ ಪ್ರಕಟವಾದ '*ಮರುಳು ಮುನಿಯನ ಕಗ್ಗ*'.

'ಡಿವಿಜಿ' ಮೂರಕ್ಷರ ಕೇಳಿದೊಡನೆಯೆ ಕನ್ನಡಿಗನ ಮನಸ್ಸಿನ ಮುಂದೆ ಬಂದು ನಿಲ್ಲುವವನು '*ಮಂಕುತಿಮ್ಮ*'. ಕಗ್ಗ ವಿಚಿತ್ರ ರಚನೆ. ರೂಪ ಕಾವ್ಯ, ತಿರುಳು ತತ್ತ್ವ. ಡಿವಿಜಿ ಅವರ ಅನುಭವ, ಅಧ್ಯಯನ, ಆಲೋಚನೆ, ಎಲ್ಲದರ ಸಾರ ಇಲ್ಲಿನ 945 ಚೌಪದಿಗಳಲ್ಲಿ ಮಡುಗಟ್ಟಿದೆ. ಹಳ್ಳಿಯ ಗುರು ಜ್ಞಾನಿ. ಆದರೆ ತೀರ ವಿನಯಿ. ತನ್ನ

ಹೆಸರನ್ನೂ ಹೇಳ, 'ಮಂಕುತಿಮ್ಮ' ಎಂದುಕೊಳ್ಳುತ್ತಾನೆ. ತಾನು ಬರೆದ ಕಗ್ಗವನ್ನು ಮನೆಯಲ್ಲಿ ಬಿಟ್ಟು, ಅವಧೂತನಂತೆ ಊರಿನಿಂದ ಮರೆಯಾಗುತ್ತಾನೆ. ಆತನ ಕಾಗದವನ್ನು ಓದಿದ ಅವನ ಸೋದರಳಿಯ ಸೋಮಿ ಆ ಕಡತವನ್ನು ಹೊರತೆಗೆಯುತ್ತಾನೆ. "ಕಂಡನದರೊಳಿನಿತು ಬಾಳ್ಗೆ ಸಲುವ ತತ್ತ್ವಮಥಿತವ". ತನ್ನ "ಸಖರ ತೃಪ್ತಿಗೆಂದು" ಈ ಮಂಕುತಿಮ್ಮ ಕಂತೆಯನ್ನು ಲಿಖಿಸುತ್ತಾನೆ ಸೋಮಿ. ಇದು ಹಿನ್ನೆಲೆ. ತಿಮ್ಮಗುರುವಿನ ಈ ಚಿತ್ರಣ ಹೃದಯಸ್ಪರ್ಶಿ. ನಾಲ್ಕು ಜನರಿಗೆ ಉಪಕಾರಿ ಆಗಿದ್ದುಕೊಂಡು, ತಾನು ಉಪಕಾರಿ ಎಂಬ ಅಹಂಕಾರ ಲೇಶವೂ ಇಲ್ಲದಂತೆ ಬಾಳಿ, ಎಲ್ಲರಿಗೂ ಸುಖವನ್ನು ಹಂಚುತ್ತ ಬಾಳಿ, ಅದರಲ್ಲಿಯೆ ತಾನೂ ಸುಖಿಸುತ್ತ, ಬಾಳಿನ ವಿಸ್ತಾರ, ವೈಭವ, ವೈವಿಧ್ಯತೆ, ವ್ಯಾಪ್ತಿ, ಆಳ, ನಿಗೂಢತೆ ಎಲ್ಲವನ್ನೂ ತೆರೆದ ಒಳಗಣ್ಣಿನಿಂದ ನೋಡುತ್ತ, ನೋಡಿ ತನಗೆ ಅನಿಸಿದ್ದನ್ನು ಬರೆದಿಟ್ಟು, ಅದರ ಮೇಲೂ ಯಾವ ಮೋಹವನ್ನೂ ಬೆಳೆಸಿಕೊಳ್ಳದೆ, ತನ್ನ ಕೆಲಸ ಆಯಿತು ಎನಿಸಿದ ಕೂಡಲೇ, ನಿಸೂರಾಗಿ ಬಾಳಿನಿಂದ ಜಾರಿಹೋಗುವ ಯೋಗಿ ತಿಮ್ಮಗುರು! ಈ ಚಿತ್ರದಲ್ಲಿ ಡಿವಿಜಿ ತಮ್ಮ ಸೋದರಮಾವ ತಿಮ್ಮಪ್ಪನವರನ್ನೇ ಸ್ಮರಿಸಿಕೊಂಡಿದಾರೆ ಎನ್ನಲಾಗಿದೆ. ಅಲ್ಲದೆ "ವನಸುಮದೊಲೆನ್ನ ಜೀವನವು ವಿಕಸಿಸುವಂತೆ" ಬೇಡಿಕೊಂಡಿದ್ದು ಈ ಮನಸ್ಸೇ ಅಲ್ಲವೇ !

'ಮಂಕುತಿಮ್ಮನ ಕಗ್ಗ' ಕನ್ನಡದ ಅತ್ಯಂತ ಜನಪ್ರಿಯ ಗ್ರಂಥ. 1943ರಲ್ಲಿ ಮೊದಲ ಪ್ರಕಟಣೆ. ಹಲವು ಮುದ್ರಣಗಳನ್ನು ಕಂಡಿದೆ. ಸಾವಿರಾರು ಪ್ರತಿಗಳು ಮಾರಾಟವಾಗಿವೆ. ಹೆಚ್ಚಿನ ಸಂಖ್ಯೆಯಲ್ಲಿ ಮಾರಟವಾಗಿರುವ, ಆಗುತ್ತಿರುವ ಕನ್ನಡ ಗ್ರಂಥಗಳಲ್ಲಿ 'ಕಗ್ಗ'ಕ್ಕೆ ಅಗ್ರಸ್ಥಾನ. 'ಕಗ್ಗ' ಭಾರತೀಯ ಜ್ಞಾನಪೀಠದ ಪ್ರಶಸ್ತಿಗೂ ಪರಿಗಣಿತವಾಗಿತ್ತು. ಅಂತಿಮ ಆಯ್ಕೆಯವರೆಗೂ ಹೋಗಿತ್ತು. ಇದು ಶುದ್ಧ ಕಾವ್ಯ ಅಲ್ಲ, ನೀತಿಕಾವ್ಯ ಎಂಬ ಒಂದು ಭಾವನೆ, ಮತ್ತು ಇಂದಿನ ಭಾರತೀಯ ಪರಿಸರದಲ್ಲಿ ಇಂಥ ಕಾವ್ಯಕ್ಕೆ ಸರಯಾಗಿ ಬೆಲೆ ಕಟ್ಟುವುದೇ ದುಸ್ತರಕವಾಗಿ 'ಕಗ್ಗ' ಪ್ರಶಸ್ತಿ ಪಡೆಯಲಿಲ್ಲ. ಆದರೆ ಇದು ಕನ್ನಡಿಗರೆಲ್ಲರ ಹೃದಯಪೀಠದಲ್ಲಿ ಪ್ರತಿಷ್ಠೆಗೊಂಡು ಜೀವಂತ ಪ್ರಶಸ್ತಿ ಪಡೆದಿದೆ. ಇದರ ಪದ್ಯಗಳು ನಮ್ಮ ಬಾಳಿನ ಕ್ಷಣಗಳನ್ನು ಬೆಳಗುವ ಸೊಡರುಗಳಾಗಿವೆ.

ಕಗ್ಗದ ಧಾಟಿ ಚೌಪದಿ. ನಾಲ್ಕು ಸಾಲುಗಳಲ್ಲೂ ದ್ವಿತೀಯಾಕ್ಷರ ಪ್ರಾಸ. ಪದ್ಯಾಂತ್ಯದಲ್ಲಿ 'ಮಂಕುತಿಮ್ಮ' ಎಂಬ ಅಂಕಿತ. ಸರ್ವಜ್ಞ ಪದಗಳಂತೆ. ಜೀವನಾವಲೋಕನದಲ್ಲಿ, ಚಿಂತನೆಯ ಅಭಿವ್ಯಕ್ತಿಯಲ್ಲಿ, ಶಬ್ದ ಸೌಲಭ್ಯದಲ್ಲಿ, ತಿಳಿನಗೆಯಲ್ಲಿ, ಹಾಸುಬೀಸುಗಳಲ್ಲಿ, 'ಕಗ್ಗ' ಸರ್ವಜ್ಞ ಪದಗಳಂತೆಯೆ.

ಕಗ್ಗದ ಆರಂಭ 'ನಂಬಿಕೆ'ಯ ನಮನದಿಂದ. ನಂಬಿಕೆ ಇದ್ದರೂ, ಶಂಕೆ ಹೋಗಿಲ್ಲ. ಕಾರಣ ಸೃಷ್ಟಿಯ ಬಗ್ಗೆ ಬೆರಗು ! ಸಹಜವಾಗಿಯೆ ಅನೇಕ ಪ್ರಶ್ನೆ ಏಳುತ್ತವೆ.

ಏನು ಜೀವನದರ್ಥ, ಏನು ಪ್ರಪಂಚಾರ್ಥ ?
ಏನು ಜೀವ ಪ್ರಪಂಚಗಳ ಸಂಬಂಧ ?
ಕಾಣದಿಲ್ಲಿರ್ಪುದೇನಾನುಮುಂಟೆ ? ಅದೇನು ?
ಜ್ಞಾನ ಪ್ರಮಾಣವೇಂ ?
ಒಗಟೆಯೇನೀ ಸೃಷ್ಟಿ ?

ಏನು ಪ್ರಪಂಚವಿದು ? ಏನು ಧಾಳಾ ಧಾಳಿ, ಏನು ಭೈರವಲೀಲೆಯೀ ವಿಶ್ವ ವಿಭ್ರಮಣೆ? ಏನು ವಿಸ್ಮಯ ಸೃಷ್ಟಿ ? ಏನು ಹಗೆ ? ಏನು ಧಗೆ ? ಏನು ಹೊಗೆ?— ಇತ್ಯಾದಿ ಪ್ರಶ್ನಾವಳಿ. ಬೆರಗು, ಕುತೂಹಲ, ಚಿಂತೆ, ಬೊಂತೆಗಳು! ಹೊರಗಣ್ಣು ಸೃಷ್ಟಿಯನ್ನು ನೋಡಿ ಹೀಗೆ ಬೆರಗಾದರೆ, ಒಳಗಣ್ಣು ಅದರ ರಹಸ್ಯದತ್ತ ಕುತೂಹಲಿಯಾಗುತ್ತದೆ. ಪ್ರಶ್ನೆಗಳನ್ನು ಹಾಕಿಕೊಳ್ಳುತ್ತದೆ ಮನಸ್ಸು. ಭಾವಿಸಿಕೊಳ್ಳುತ್ತದೆ ಹೃದಯ. ಪ್ರಶ್ನೆಗಳಿಗೆ ಉತ್ತರವನ್ನೂ ಅದೇ ಮನಸ್ಸು ಯೋಚಿಸುತ್ತದೆ. ಬಾಹ್ಯಾನುಭವಗಳ ಬೆಂಬಲದಿಂದ, ಅಂತರಂಗದ ಚಿಂತನೆಯ ನೆರವಿನಿಂದ ಚಿತ್ತ ಎಲ್ಲವನ್ನೂ ವಿಶ್ಲೇಷಿಸುತ್ತದೆ. ಸಾಕ್ಷೀಭೂತವಾಗಿ ಒಳ–ಹೊರಗುಗಳನ್ನೆಲ್ಲ ನೋಡುತ್ತದೆ. ತನ್ನ ಅನಿಸಿಕೆಗಳನ್ನು ವ್ಯಕ್ತಗೊಳಿಸುತ್ತದೆ. ಈ ಕ್ರಿಯೆಯಿಂದ ಚಿಮ್ಮುವ ವಿಚಾರ ಕಿರಣಗಳೇ ಪದ್ಯಗಳು. ಭಾವದಲೆಗಳು ಹೊಳೆಹೊಳೆದು ನಲಿಯುತ್ತವೆ. ಬೆರಗು–ಶಂಕೆ–ಪ್ರಶ್ನೆಗಳಿಂದ ಹೊರಟ ಚಿತ್ತ ಲೋಕಜೀವನದ ಎಲ್ಲ ಬಗೆಗಳನ್ನು ಮುಟ್ಟಿನೋಡಿ ತಟ್ಟಿ ನೋಡಿ ಸೃಷ್ಟಿ ಪ್ರಕೃತಿ, ಮಾನವಪ್ರಕೃತಿ, ಎಲ್ಲದರ ಒಳಹೊರಗುಗಳಲ್ಲಿ ಸಂಚರಿಸುತ್ತದೆ. ಕೊನೆಗೆ, "ಜೀವನರಹಸ್ಯದಲಿ, ಸತ್ವದಲಿ, ಜೀವನವ ಸುಮವೆನಿಪ ಯತ್ನದಲಿ, ಆತ್ಮ ಗಂಭೀರ ಪ್ರಶಾಂತಿಯಲಿ, ವಿಶ್ವಾತ್ಮದಲಿ ಶರಣುವೊಗು" ಎಂಬ ನಿಲುವಿಗೆ ಬರುತ್ತದೆ. ರಹಸ್ಯ ಇನ್ನೂ ರಹಸ್ಯವಾಗಿಯೆ ಉಳಿಯುತ್ತದೆ. ಹಾಗೆಂದು ಸುಮ್ಮನಿರುವಂತಿಲ್ಲ. ಜೀವನವ ಸುಮವೆನಿಪ ಯತ್ನ ಸಾಗಲೇಬೇಕು. ಲೋಕ ಜೀವನದಲ್ಲಿ ಇರಲೇಬೇಕು. ದುಡಿಯಲೇಬೇಕು. ಆದರೆ 'ಆತ್ಮಪ್ರಶಾಂತಿ'ಯತ್ತ ಗಮನವಿಡಬೇಕು. ವಿಶ್ವದೃಷ್ಟಿಯನ್ನು ಬೆಳೆಸಿಕೊಳ್ಳಬೇಕು.

ಹೊರಗೆ ಲೋಕಾಸಕ್ತಿಯೊಳಗೆ ಸಕಲ ವಿರಕ್ತಿ
ಹೊರಗೆ ಕಾರ್ಯಧ್ಯಾನವೊಳಗುದಾಸೀನ
ಹೊರಗೆ ಸಂಸ್ಕೃತಿಭಾರವೊಳಗದರ ತಾತ್ಸಾರ
ವರಯೋಗಮಾರ್ಗವಿದು–ಮಂಕುತಿಮ್ಮ.

ನಮ್ಮ ಪರಂಪರೆಯ ಶಾಸ್ತ್ರ, ಕಾವ್ಯ, ಐತಿಹ್ಯ, ಕಲ್ಪನೆಗಳು, ದೇಶವಿದೇಶಗಳ

ಕಾವ್ಯಶಾಸ್ತ್ರಗಳು, ಮಹಾಜ್ಞಾನಿ ಮಹಾಗುರುಗಳ ಜೀವಿತೋದಾಹರಣೆಗಳು, ದೃಷ್ಟಾಂತಗಳು, ಅಂತೆಯೆ ತೀರ ಸಾಮಾನ್ಯ ಬದುಕಿನ ಸಂಗತಿಗಳು, ಪಶುಪಕ್ಷಿ ಚರಾಚರ ಸೃಷ್ಟಿ ವಿಚಿತ್ರಗಳು, ಸಂಸಾರದ ಏಳುಬೀಳು ಕಷ್ಟಕೋಟಲೆ, ಅಳು ನಗು, ಆಸೆ ಮೋಹ, ಕುದಿಬೇಗುದಿಗಳು, ಒಳಿತು ಕೆಡುಕುಗಳು, ಕೇಸರು ಬಾಸರುಗಳು, ಹಿರಿಮೆ ಕೀಳುತನಗಳು—ಎಲ್ಲ ಕಗ್ಗದ ಪರಿಕರಗಳು. ಇಲ್ಲಿ ನಿರ್ದಿಷ್ಟವಾದ ಕ್ರಮಪ್ರಕಾರವಾದ ವಿಷಯಪ್ರತಿಪಾದನೆ ಇಲ್ಲ. ಕಣ್ಣು ಕಂಡ ಹಾಗೆ, ಮನ ಭಾವಿಸಿದ ಹಾಗೆ ಕಿರಣಗಳು, ಅಲೆಗಳು ಹೊಳೆಯುತ್ತವೆ. ಒಂದೊಂದು ಪದ್ಯವೂ ಪ್ರತ್ಯೇಕ ವಿಚಾರದ ಹಳಕೇ. ಮತ್ತೆ ಮತ್ತೆ ಸವಿಯಬೇಕಾದುದು, ಸವಿದಷ್ಟೂ ರುಚಿಕರ, ಪುಷ್ಟಿದಾಯಕ. ಕಗ್ಗ ಡಿವಿಜಿಯವರ ಜೀವನ ದರ್ಶನ ಸಾರ.

ಎರಡು ಚಿತ್ರ ಉಲ್ಲೇಖನಾರ್ಹ. ಒಂದು ಭರತೋದಾಹರಣೆ. ಅನಾಯಾಸವಾಗಿ ಕೈಗೆ ಬಂದ ರಾಜ್ಯವನ್ನು 'ನ್ನದಲ್ಲ ಎಂದು ತ್ಯಜಿಸಿ, ಅಣ್ಣನದು ಎಂದು ಭಾವಿಸಿ, ಆದರೆ ಆ ರಾಜ್ಯವನ್ನೇ ಅಣ್ಣನ ಪರವಾಗಿ ತಾನೇ ನಡೆಸಿ, ತನ್ನ ಹೊಣೆಯನ್ನು ಬಿಡದೆ ನಿರ್ವಹಿಸಿ, ಮತ್ತೆ ಅಣ್ಣನಿಗೇ ಅದನ್ನು ಸಮರ್ಪಿಸಿದ ಮಹಾಸತ್ತ್ವ ರಾಮಾಯಣದ ಭರತ. 'ಭರತನ್ ಅಸ್ವಾರ್ಥ ಚರಿತನ್', 'ಈಶಾವಾಸ್ಯಮಿದಂ ಸರ್ವಂ' ಮಾತಿಗೆ ನಿದರ್ಶನ. ಇದು ಡಿವಿಜಿಗೆ ಪ್ರಿಯ. ಇದನ್ನು ಡಿವಿಜಿ ಕನ್ನಡದಲ್ಲಿ ಸೊಗಸಾಗಿ ಚಿತ್ರಿಸಿದಾರೆ ನಾಲ್ಕಾರು ಪದ್ಯಗಳಲ್ಲಿ.

ಇನ್ನೊಂದು ಚಿತ್ರ, "ವಿಶ್ವ ಜೀವಾಶ್ವತ್ಥ". ಅಶ್ವತ್ಥ ಡಿವಿಜಿಯವರ ಮನವನ್ನು ಸೂರೆಗೊಂಡ ಮರ. ಅದರ ಅಡಿಯಲ್ಲಿ ಕುಳಿತಿರುವುದು ಅವರಿಗೆ ಪ್ರಿಯ ಹವ್ಯಾಸ. ಅಶ್ವತ್ಥ ನಿತ್ಯಸನಾತನ, ನಿತ್ಯವಿನೂತನ. ಗೀತೆಯಲ್ಲೂ ಅಶ್ವತ್ಥದ ಸಂಕೇತ ಉಂಟು. "ಊರ್ಧ್ವಮೂಲಂ ಅಧಃ ಶಾಖಂ ಅಶ್ವತ್ಥಂ ಪ್ರಾಹುರವ್ಯಯಂ."

ಪರಮಪದದಲಿ ನೋಡು ; ಬೇರುಗಳ್ ವ್ಯೋಮದಲಿ.
ಧರೆಗಿಳಿದ ಕೊಂಬೆರೆಂಬೆಗಳು ಬಿಳಲುಗಳು ।
ಚಿರಂಜೀವಿ ವೃಕ್ಷವಿದು ವಿಶ್ವಜೀವಾಶ್ವತ್ಥ ।
ಪರಿಕಿಸಿದರರ್ಥವನು – ಮಂಕುತಿಮ್ಮ.

ಕಗ್ಗದ ಅನೇಕ ಮಾತು ಸೂತ್ರಪ್ರಾಯ, ಗಾದೆಗಳ ಹಾಗೆ. ಈಗಾಗಲೇ ನಮ್ಮ ಜನರ ಆಡುಮಾತಿನಲ್ಲಿ ಸೇರಿಹೋಗಿವೆ.

"ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ,"

"ತರಣಿದರ್ಶನಕಿಂತ ಕಿರಣಾನುಭವ ಸುಲಭ,"

"ಕಷ್ಟ ಜೀವದ ಪಾಕ," "ನಗುವೊಂದು ರಸಪಾಕ ಅಳುವೊಂದು ರಸಪಾಕ"— ಇಂಥ ಮಾತಿನ ಮುತ್ತು ನೂರಾರು.

ಕಗ್ಗವನ್ನು ಓದಿದಾಗ, ಒಂದು ಬಗೆಯ ನಿರಾಸೆ, ನಿರ್ವೇದ, ಏನೊ ಲೋಕ ವಿಮುಖತೆ, ಏನೊ ನಿರುತ್ಸಾಹ ಇದೆಯಲ್ಲ ಎನಿಸಬಹುದು. ಚಿಂತನಪರವಾದ ಮನಸ್ಸಿಗೆ ಇದೆಲ್ಲ ಸಹಜ. ಅನೇಕ ಪದ್ಯಗಳಲ್ಲಿ ಈ ವಿಚಾರ, ಈ ಭಾವ ಇಲ್ಲದಿಲ್ಲ. ಇದು ಬದುಕಿನ ಒಂದು ನೋಟ. ದಿಟವೇ. ಇದರ ಜೊತೆಗೇ ಇನ್ನೊಂದು ನೋಟವೂ ಉಂಟು. ಅಲ್ಲಿ ಉತ್ಸಾಹ, ಗೆಲವು, ನಲವು, ರಸಿಕತೆ, ಕರ್ತವ್ಯಪರತೆ, ದೃಢನಂಬಿಕೆ, ವಿಶ್ವಾಸ, ಭರವಸೆ. 'ಲೌಕಿಕವೇ ತಪಸ್ಸು' ಎನ್ನುತ್ತದೆ ಕಗ್ಗ.

ಹೋರು ಧೀರತೆಯಿಂದ, ಮೊಂಡುತನದಿಂ ಬೇಡ ।
ವೈರ ಹಗೆತನ ಬೇಡ ಹಿರಿನಿಯಮವಿರಲಿ ।
ವೈರಾಗ್ಯ ಕಾರುಣ್ಯ ಮೇಳನವೆ ಧೀರತನ ।
ಹೋರುದಾತ್ತತೆಯಿಂದ—ಮಂಕುತಿಮ್ಮ

'ಮಂಕುತಿಮ್ಮ'ನ ತಮ್ಮ 'ಮರುಳ ಮುನಿಯ'! ಡಿವಿಜಿಯವರ ಬಾಳಿನ ಸಂಧ್ಯಾ ಕಾಲದಲ್ಲಿ ಆಗಿಂದಾಗ್ಗೆ ಗುರುತು ಹಾಕಿ ಇಟ್ಟಿದ್ದ ಪದ್ಯಗಳನ್ನು, ಅವರ ನಿಧನಾ ನಂತರ ಐ.ಬಿ.ಎಚ್. ಪ್ರಕಾಶನ ಸಂಸ್ಥೆ ಪ್ರಕಟಿಸಿದೆ. ಮಂಕುತಿಮ್ಮನ ಕಗ್ಗಕ್ಕೆ ಟಿಪ್ಪಣಿ, ಕ್ಲಿಷ್ಟಪದಗಳ ಅರ್ಥ, ಪೂರ್ವಕಥಾ ವಿವರಣೆ ಇತ್ಯಾದಿ ಕೈಂಕರ್ಯವನ್ನು ಜಿ.ಪಿ. ರಾಜರತ್ನಂ ನಡೆಸಿಕೊಟ್ಟಿದ್ದರು. 'ಮರುಳು ಮುನಿಯನ'ನಿಗೆ ಈ ಸೇವೆ ಖ್ಯಾತ ಸಂಸ್ಕೃತ ವಿದ್ವಾನ್ ಶ್ರೀ ರಂಗನಾಥಶರ್ಮರಿಂದ ಸಂದಿದೆ. ಈ ಕೃತಿಯ ಧಾಟಿ ಧೋರಣೆ ರೂಪ ಎಲ್ಲ ಹಿಂದಿನ ಕಗ್ಗದ್ದೇ. ಅದೇ ಚೌಪದಿ. ಅದೇ ಜೀವನಾವಲೋಕನ, ಅದೇ ನಂಬಿಕೆ, ಅದೇ ಜಿಜ್ಞಾಸೆ. ಇಲ್ಲಿನ ಅಂಕಿತ ಮರುಳು ಮುನಿಯ. ಇಲ್ಲಿ 806 ಪದ್ಯ ಇವೆ. ಪರಿಶಿಷ್ಟದಲ್ಲಿನ 18 ಪದ್ಯಗಳು ಡಿವಿಜಿ ಪೂರ್ಣಗೊಳಿಸದೆ ಇದ್ದವು. ಶರ್ಮರು ಅವನ್ನು ಸೂಕ್ತ ಕಂಡಂತೆ ಪೂರ್ಣ ಗೊಳಿಸಿದಾರೆ.

ಇಲ್ಲಿನ ಆರಂಭ ದೈವಸ್ತುತಿಯಿಂದ. ದೈವದ ಹಂಬಲದಿಂದ. ಶಂಕೆ ಪ್ರಶ್ನೆ ಇಲ್ಲ. ಮಾಗಿದ ಮನಸ್ಸು, ಪಕ್ವವಾದ ಜೀವ, ತನ್ನ ಸುತ್ತಲ ಲೋಕ ಜೀವನವನ್ನು ನೋಡಿ ನಸುನಗುತ್ತ ಹಾಡುವ ಪರಿ.

ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ
ಸುರಿವೆನೆನ್ನದೆ ಚೀಲದಲ್ಲ ಪುರುಳುಗಳ ।
ಸರಿ ನೋಡಿಕೊಡುವ ಸಜ್ಜನರಿಹರೆ ಲೋಕದಲಿ
ಶರಣಪ್ಪೆನವರಿಂಗೆ—ಮರುಳ ಮುನಿಯ.

ಮರುಳು ಮುನಿಯನ ಆದರ್ಶ ಏನು? ಇಂಗಿತ ಏನು?

ಮರುಳ ಮುನಿಯನ ಮನಸು ಸರಳ ಬಾಳ್ವೆಯ ಕನಸು
ಸರಸ ಋತ ಸೌಜನ್ಯ ಶಾಂತಿಗಳ ಸೊಗಸು ।
ಕೆರೆಯಿನೆದ್ದಲೆಯೆರಚಿ ತಣಿವು ತುಂತುರನಿನಿತು
ಮರಳಿ ತೆರೆ ಸೇರ್ವುದಲ—ಮರುಳ ಮುನಿಯ.

ಸರಳ ಬಾಳ್ವೆ, ಸರಸತೆ, ಋತ, ಸೌಜನ್ಯ, ಶಾಂತಿ ಇವೆಲ್ಲ ಡಿವಿಜಿಯವರ ಜೀವನ ಮೌಲ್ಯಗಳು. ಸನಾತನ ಮೌಲ್ಯಗಳು ತಾನೇ ! ಅವರ ಸಾಹಿತ್ಯ ಎಲ್ಲದರಲ್ಲಿ, ಜೀವನಯಾತ್ರೆಯಲ್ಲಿ ಒಡಗೂಡಿ ಬರುವ ಮೌಲ್ಯಗಳು. ಈ ಜೀವ, ತನ್ನ ಕೆಲಸವನ್ನು ಸಂತೋಷದಿಂದ ಮಾಡಿ, ತಂಪಿನ ತುಂತುರನ್ನು ಚೆಲ್ಲಿ ಮತ್ತೆ ತನ್ನ ಮನೆಗೆ ತೆರಳುತ್ತದೆ. ಕಡಲಿನ ಅಲೆಯ ಉದಾಹರಣೆ ಸೊಗಸಾಗಿ ಬಂದಿದೆ.

ಶ್ರೀ ರಂಗನಾಥಶರ್ಮರು ಇಲ್ಲಿನ ಆಶಯವನ್ನು ಹೀಗೆ ತಿಳಿಸುತ್ತಾರೆ—

"ಇದರಲ್ಲಿ ವಿಚಾರಕ್ಕೆ ಒಳಗಾದ ವಸ್ತು ಮೂರು—ಅಧಿದೈವ, ಅಧಿಲೋಕ ಮತ್ತು ಅಧ್ಯಾತ್ಮ. ಹಾಗೆಂದರೆ ಬ್ರಹ್ಮಾಂಡವೇ ವಿಚಾರಕ್ಕೆ ಒಳಗಾದ ವಸ್ತು."

"ಬಾಳಿಗೊಂದು ನಂಬಿಕೆಯೊಂದು ದೃಢವಾಗಿ ಇರಬೇಕು."

"ಗುರಿಯೊಂದು ಬೇಕು ಜಗದಡವಿಯಲಿ ಪಥ ಕಾಣೆ."

"ಭುವನ ಜೀವನವೆಲ್ಲ ಶಿವನ ಲೀಲಾ ರಂಗ." ಈ ಜಗನ್ನಾಟಕದಲ್ಲಿ ಎಲ್ಲ ಜೀವಗಳೂ ಪಾತ್ರಧಾರಿಗಳು.

"ಜಗತ್ತಿನ ಮೂಲ ತತ್ತ್ವವನ್ನು ಶೋಧಿಸಿ ಇದು ಹೀಗೆಯೆ ಎಂದು ನಿಶ್ಚಯಿಸುತ್ತೇನೆನ್ನುವುದು ಹುಂಬತನ.... ನಿನಗೆ ಎಷ್ಟು ನಿಲುಕಿದೆಯೊ ಯಾವುದರಲ್ಲಿ ನಂಬಿಕೆ ಹುಟ್ಟಿದೆಯೊ ಅದಷ್ಟನ್ನು ಶ್ರದ್ಧೆಯಿಂದ ಆಚರಿಸು."

"ಮಾನವನೆಂಬ ಹಕ್ಕಿಗೆ ದೈವವೆಂಬುದೊಂದು ರೆಕ್ಕೆ. ಪುರುಷಪ್ರಯತ್ನ ವಿನ್ನೊಂದು ರೆಕ್ಕೆ. ಎರಡು ರೆಕ್ಕೆಗಳ ನೆರವಿಲ್ಲದೆ ಹಕ್ಕಿ ಹಾರದು ಎಂದು ಮರುಳನ ಅಭಿಪ್ರಾಯ. ಮನುಷ್ಯನು ಲೋಕದಲ್ಲಿ ದುಡಿಯುತ್ತಲೇ ಇರಬೇಕು. ಅದರಿಂದ ತನ್ನ ಹಿತವೂ ಉಂಟು, ಪರಹಿತವೂ ಉಂಟು. ದುಡಿದಂತೆ ಲೋಕಾನುಭವ ಹೆಚ್ಚಿ ಮನಸ್ಸಿಗೆ ಸಂಸ್ಕಾರವಾಗುತ್ತದೆ. ಸಂಸ್ಕಾರಗೊಂಡ ಮನಸ್ಸಿಗೆ ಜ್ಞಾನ ಬೆಳಕು ದೂರವಿಲ್ಲ" ಎನ್ನುತ್ತಾನೆ ಮರುಳ.

"ಜೀವರೆಲ್ಲ ಪರಮಾತ್ಮನ ಅಂಶ.... ಎಲ್ಲರನ್ನೂ ಗೌರವದಿಂದ ನೋಡು."

ಮಂಕುತಿಮ್ಮನ ಕಗ್ಗ ಡಿವಿಜಿಯವರ ನಡುಹರೆಯದಲ್ಲಿ ಮೂಡಿಬಂದದ್ದು. ಆ ವಯಸ್ಸು, ಅನುಭವಗಳಿಗೆ ತಕ್ಕಂತೆ ಅಲ್ಲಿ ಕೆಲವು ಶಂಕೆ, ಕೆಲವು ಖೇದ

ಉದ್ವೇಗಗಳು, ನಿರಾಶೆ ತೋರುವುದು ಸಹಜ. 'ಮರುಳ ಮುನಿಯ' ಅವತರಿಸಿದ್ದು ಮಾಗಿ ಹಣ್ಣಾದ ಜೀವದಿಂದ. ಇಲ್ಲಿ ಶಂಕೆ, ಸಂದೇಹ ಕಡಿಮೆ. ನಿರಾಳ ಹೆಚ್ಚು. ಸರಸತೆ ಹೆಚ್ಚು. ಹಿರಿಯಜ್ಜ ಮಕ್ಕಳಾಟಿಕೆಯನ್ನು ಮುಗ್ಧಮನದಿಂದ ನೋಡಿ ನಸುನಗುವಂತೆ ಇಲ್ಲಿನ ಅವಲೋಕನ. 'ಬದುಕು ಇಷ್ಟೇ ಕಣಯ್ಯ' ಎಂದು ತಲೆಸವರಿ ಹೇಳುವ ಹಿರಿಯತನ. ಜೀವನದ ಬಗ್ಗೆ ಗೌರವ, ಉತ್ಸಾಹ, ಹಾಸ್ಯ ದೃಷ್ಟಿಗಳಲ್ಲಿ ಮುನಿಯ ತಿಮ್ಮನಿಗಿಂತ ಒಂದು ಹೆಜ್ಜೆ ಮುಂದೆ. ಅನುಭವ ಇನ್ನೂ ಹೆಚ್ಚು. ಮುನಿಯ ತಿಮ್ಮನ ಹೆಗಲೇರಿ ನಿಂತು ನೋಡುತ್ತಾನೆ. ಇವನ ನೋಟದ ಹರವು ಹೆಚ್ಚು. ಹಾಗೆಯೆ ಲೋಕದ ಆಟದ ಅಂಕುಡೊಂಕುಗಳು ಕಡಿಮೆ ಕಾಣಿಸುತ್ತವೆ. ಲೋಕದ ಬಗ್ಗೆ ಅಕ್ಕರೆ, ಆದರ ಹೆಚ್ಚು. ತಿಮ್ಮನಿಗೆ ಜೀವನದ ಬಗ್ಗೆ ಬೆರಗು, ಕುತೂಹಲ, ಪ್ರಶ್ನಿಸುವ ಜಿಜ್ಞಾಸೆ. ಮುನಿಯನಿಗೂ, ಜೀವನ ಎಂದರೆ ನಲವು, ಆಟ. ಇವನ ನಂಬಿಕೆ ಗಾಢ. ಅನುಮಾನ ಕಡಿಮೆ. ಗುರಿ ಸ್ಪಷ್ಟ ದಾರಿಯೂ ನಿಚ್ಚಳ. ಹೀಗಾಗಿ 'ಮರುಳ ಮುನಿಯ' ಲೋಕಜೀವನಕ್ಕೆ ಹತ್ತಿರದವ. ಅದೇ ಕ್ಷಣವೇ ಅಲಿಪ್ತ. ಈ ರಕ್ತಿ–ವಿರಕ್ತಿ (Immanence and Transcendence) ಜೊತೆ ಜೊತೆಯಾಗಿವೆ ಮುನಿಯನಲ್ಲಿ. ತಿಮ್ಮನಲ್ಲಿ ಇದು ಇರಲಿಲ್ಲ ಎಂದಲ್ಲ. ಇತ್ತು. ಇಲ್ಲಿ ಹೆಚ್ಚು ಸ್ಫುಟ ಸ್ಪಷ್ಟ ಪಟು. ಬಾಳೊಲವು, ಪ್ರಕೃತಿ ಪ್ರೇಮ, ದೈವಭಕ್ತಿ, ಕರ್ತವ್ಯಶ್ರದ್ಧೆ, ಹೃದಯ ಶುಚಿ, ಹೃದಯರಾಸಿಕ್ಯ, ಸಿಡುಕು ಇಲ್ಲದ ಸರಸತೆ, ನಿರಾಳತೆ, ಅನಿವಾರ್ಯ ಸತ್ಯವನ್ನು ಸಂತೋಷವಾಗಿ ಒಪ್ಪಿಕೊಳ್ಳುವ ಮನಃಪರಿಪಾಕ—ಇವೆಲ್ಲ ಮುನಿಯನ ಪದ್ಯಗಳಲ್ಲಿ ಚಿಮ್ಮುತ್ತವೆ, ಹೊಮ್ಮುತ್ತವೆ. ಐಹಿಕ ವಸ್ತು ಸೌಭಾಗ್ಯವೇನೂ ಸುಖಕ್ಕೆ ಅಗತ್ಯವಲ್ಲ. ಮನೋಭಾವ ಅಗತ್ಯ ಎನ್ನುತ್ತಾನೆ ಮುನಿಯ. ಅವನಿಗೆ 'ಹೃದಯದೊಳ ಚೆಲುಮೆಯೆ ಸಿರಿ, ಸರಸತೆಯೆ ಸಿರಿತನ.''

ಬಡವನಾರ್ ? ಮಡದಿಯೊಲವಿನ ಸವಿಯರಿಯದವನು ।
ಹುಡುಗರಾಟದಿ ಬೆರೆತು ನಗಲರಿಯದವನು ।
ಉಡುರಾಜನೋಲಗದಿ ಕುಳಿತು ಮೈ ಮರೆಯದವನು
ಬಡಮನಸೆ ಬಡತನವೊ—ಮರುಳು ಮುನಿಯ

ಲೋಕದ ಗೋಜಿನ ನಡುವೆ ಸುಖವಾಗಿ ಸಾಗುವ ಉಪಾಯವಿದು –

ಸೊಗಸುಗಳನೆಸಗುತ್ತ ಲೋಕಸಾಮಗ್ರಿಯಲಿ
ಸೊಗ! ಮುಗುಡಗಳ ನಡುವೆ ಮತಿಯನೆಡವಿಸದೆ ।
ಜಗದಾತ್ಮವನು ನೆನೆದು ಸರ್ವಹಿತದಲಿ ಬಾಳ್ವ
ಪ್ರಗತಿ ಪೌರುಷ ವಿಜಯ—ಮರುಳ ಮುನಿಯ

ಇಂಥ ಉತ್ಸಾಹದಾಯಕವಾದ, ಲೋಕನಿಷ್ಠವಾದ ಆಶಾಭಾವನೆಯ ಮುನಿಯನ ಭರತವಾಕ್ಯ ಜೀವದ ಜಯಕಾರ.

ಜಯವೆನ್ನು ಜೀವಕ್ಕೆ ಜಯ ಜೀವಲೋಕಕ್ಕೆ
ಜಯ ಜೀವಮೂಲಕ್ಕೆ ಜಯ ಜೀವಿತಕ್ಕೆ ।
ಜಯ ನಿರಂತರ ಜೀವ ನಾಟಕ ವಿಧಾತಂಗೆ
ಜಯ ನಿರ್ಮಮಾತ್ಮಂಗೆ–ಮರುಳ ಮುನಿಯ.

*'ಮಂಕುತಿಮ್ಮನ ಕಗ್ಗ'*, *'ಮರುಳ ಮುನಿಯನ ಕಗ್ಗ'* ಎರಡೂ ಡಿವಿಜಿಯವರ ಜೀವಿತ ಸರ್ವಸ್ವ ಸಾರಫಲಗಳು. ಬಾಳ ಕೈದೀವಿಗೆಗಳು—ಅವರ ಚಿಂತನೆ, ಭಾವನೆ, ಅನುಭವ, ಅರಿವು, ದರ್ಶನ ಎಲ್ಲದರ ಭಟ್ಟಿ ಜೀವನ ಪೋಷಕ, ಜೀವನ ಪ್ರೋತ್ಸಾಹಕ, ಜೀವನ ಪ್ರಚೋದಕ ಆಗೂ ಜೀವನ ಪ್ರಬೋಧಕ !

ಈಗ ಮತ್ತೆ ಗದ್ಯಕ್ಕೆ ಹೋಗೋಣ. 'ಬೆಕ್ಕೋಜಿ', 'ಇಂದ್ರವಜ್ರ' ಎಂಬ ಎರಡು ಪುಸ್ತಕಗಳು ಮಕ್ಕಳಿಗಾಗಿ ಬರೆದವು. ಕಥೆ ಉಪಕಥೆಗಳ ಸಂಕಲನ. ವಿಕ್ರಮ, ಭೋಜರಾಜ ಮುಂತಾದವರ ಪ್ರಾಚೀನ ಕತೆಗಳು. ಸಾಕಷ್ಟು ಸರಳ ಶೈಲಿ. ಮಕ್ಕಳಿಗೆ ಹಿಡಿಸುವಂಥವು. ಡಿವಿಜಿ ಪ್ರಧಾನವಾಗಿ ಚಿಂತನಪರರು, ಜ್ಞಾನಿಗಳು, ಪ್ರೌಢ ವಿಚಾರಕರು. ಅವರು ಮಕ್ಕಳಿಗಾಗಿ ಬರೆಯಬಲ್ಲರು ಎಂದು ಈ ಕೃತಿಗಳು ತೋರಿಸಿಯಾವೇ ವಿನಾ ಈ ಪ್ರಕಾರವೇ ಅವರ ಮುಖ್ಯ ಆಯ್ಕೆ ಅಲ್ಲ.

ಧಾರ್ಮಿಕ ಚಿಂತನೆ ಡಿವಿಜಿಯವರ ಬಾಳಿನ ಮೂಲ ಸೆಲೆ. ಅದರ ಫಲ ಹಲವು ಕೃತಿಗಳಾಗಿ ಬಂದಿದೆ. *'ಬಾಳಿಗೊಂದು ನಂಬಿಕೆ'* ಅಂಥದೊಂದು. ಇಲ್ಲೂ ಕಗ್ಗಗಳಲ್ಲಿನ ಧೋರಣೆಯೆ. ದೃಢವಾದ ನಂಬಿಕೆ, ಚಲಿಸದ ಶ್ರದ್ಧೆ, ಸರಸವಾದ ಲೋಕಾಸಕ್ತಿ, ಕರ್ತವ್ಯ ನಿಷ್ಠೆ, ಇಹವನ್ನು ಕಡೆಗಾಣಿಸದ ಪರದ ದೃಷ್ಟಿ, ಪರವನ್ನು ಮರೆಯದ ಇಹದ ರಕ್ತಿ. ಸೊಗಸಾದ ದೃಷ್ಟಾಂತಗಳು, ಸಾಮತಿಗಳು ಕೃತಿಯನ್ನು ನಮಗೆ ಹೃದ್ಯವಾಗಿಸುತ್ತವೆ. ಆಂಜನೇಯನ ಉದಾಹರಣೆಯನ್ನು ಡಿವಿಜಿ ವಿಶೇಷವಾಗಿ ಪ್ರಸ್ತಾಪಿಸುತ್ತಾರೆ. ಆತನ ಭಕ್ತಿ, ಕಾರ್ಯದಕ್ಷತೆ, ಅನಾಸಕ್ತತೆ, ನಿಃಸ್ವಾರ್ಥತೆ, ಶುಚಿತ್ವ, ನಿರಾಳತೆಗಳು ನಮಗೆ ದಾರಿದೀಪಗಳು ಎನ್ನುತ್ತಾರೆ. ಒಳ್ಳೆಯ ಬಾಳಿನಲ್ಲಿ ಆಸಕ್ತಿ ಇರುವವರಿಗೆ 'ಬಾಳಿಗೊಂದು ನಂಬಿಕೆ' ಕೈದೀವಿಗೆ. ಬೆಳಕನ್ನು ಬೀರುತ್ತದೆ. ನೆಚ್ಚನ್ನು ನೀಡುತ್ತದೆ.

ಇದೇ ಆಂಜನೇಯ ವಿಚಾರ ಚಿಂತನೆಯ ಹಳಕುಗಳೇ ಒಂದು ಸಂಕಲನವಾಗಿಯೂ ಬಂದಿದೆ. ಡಿವಿಜಿ ನಿಧನರಾದ ಮೇಲೆ ಅವರ ಶಿಷ್ಯರು ಸಂಪಾದಿಸಿ

ಪ್ರಕಟಿಸಿದ ಕೃತಿ '*ಶ್ರೀಮದಾಂಜನೇಯ ಸ್ವಾಮಿ*'. ಮುಳುಬಾಗಿಲಿನ ದೈವ. ಆಂಜನೇಯನ ದಾರಿಯನ್ನು ಡಿವಿಜಿ ಇಲ್ಲಿ ನಮಗೆ ತೋರಿಕೊಟ್ಟಿದಾರೆ.

'*ಪುರುಷಸೂಕ್ತ*', '*ಈಶೋಪನಿಷತ್ತು*'ಗಳು ಕನ್ನಡ ಅರ್ಥಾನುವಾದಗಳು. ಇಲ್ಲಿ ನಾವು ಕಾಣುವುದು ಹೊಸ ಅರ್ಥವನ್ನಲ್ಲ. ಹಳೆಯದರ ಹೊಸ ರೂಪ. ಸಾಕಷ್ಟು ದೃಢಕಾರಣ ಇಲ್ಲದೆ, ಹಳೆಯ ಅರ್ಥವನ್ನು ಬದಲಾಯಿಸಬಾರದು ಎಂಬುದೇ ಡಿವಿಜಿಯವರ ಮತ.

'*ದೇವರು*', '*ಋತ, ಸತ್ಯ, ಧರ್ಮ*' ಹಾಗೂ '*ಸಂಸ್ಕೃತಿ*' ಮೂರು ಪುಸ್ತಕಗಳು ಗಾತ್ರದಲ್ಲಿ ಸಣ್ಣವು. ಗುಣದಲ್ಲಿ ದೊಡ್ಡವು. ಆಯಾ ವಿಷಯ ಕುರಿತ ತಮ್ಮ ಚಿಂತನವನ್ನೆಲ್ಲ ಅಧ್ಯಯನವನ್ನೆಲ್ಲ ಸಾರರೂಪದಲ್ಲಿ ಕೊಟ್ಟಿದ್ದಾರೆ. ಮೂಲಿಕೆಗಳ ಕಷಾಯದಂತೆ. ಜೊತೆಗೆ ಸರಸತೆಯ ಜೇನಿನ ಅನುಪಾನ. ಜೀವಶೋಧಕವಾದ, ಉದ್ಬೋಧಕವಾದ ವಿಚಾರ ಸರಣಿ.

ದೇವರು ಇದ್ದಾನೆಯೆ, ದೇವರು ಎಂದರೆ ಏನು?—ವಿಮರ್ಶೆ '*ದೇವರು*' ಕೃತಿ. ನಾನಾ ಮತಗಳ ದೃಷ್ಟಿಯ ವಿವೇಚನೆ. ವೇದೋಪನಿಷತ್ತು, ಪಾಶ್ಚಾತ್ಯ ಚಿಂತನೆಗಳ ಆಧಾರ. ನಾನಾತ್ವದಲ್ಲಿ ಏಕತ್ವವನ್ನು ಕಂಡುಕೊಳ್ಳುವ ದೃಷ್ಟಿ. ಉಪಾಸನಾ ವೈವಿಧ್ಯ, ಬಹುರೂಪತೆ, ಲೀಲಾವಿಲಾಸ, ಆಸ್ತಿಕತೆಯ ಪ್ರಯೋಜನ, ಪಾಪ–ಪುಣ್ಯಗಳ ಕಲ್ಪನೆ, ಕರ್ಮಸಿದ್ಧಾಂತ, ವಿಶ್ವವ್ಯವಸ್ಥೆ, ಮತ ಸಮನ್ವಯ, ಪವಾಡ ಹೀಗೆ ಎಲ್ಲದರ ಸಮಗ್ರ, ಸಂಕ್ಷಿಪ್ತ ಅವಲೋಕನ. ಬೆರಗುಗೊಳಿಸುವ ಅಂಶ ಎಂದರೆ ಅಗಾಧ ವಿಷಯವನ್ನು ಅಂಗೈ ನೆಲ್ಲಿಯ ಹಾಗೆ ಅಡಕವಾಗಿ, ಸ್ಪಷ್ಟವಾಗಿ, ನಿಖರವಾಗಿ ನಿರೂಪಿಸಿರುವುದು. ಕೊನೆಗೆ ಸಿದ್ಧಾಂತ ರೂಪದಲ್ಲಿ ಎಲ್ಲ ಚಿಂತನೆಯನ್ನೂ ಉಂಡೆಕಟ್ಟಿ ಕೊಟ್ಟಿದಾರೆ.

"ದೇವರು ಇದ್ದಾನೆ. ಯಾವಾಗಲೂ ಇದ್ದಾನೆ, ಎಲ್ಲೆಲ್ಲೂ ಇದ್ದಾನೆ. ಎಲ್ಲ ಜಗತ್ತನ್ನೂ ಆಳುತ್ತಿದ್ದಾನೆ. ಜಗತ್ತು ಮತ್ತು ಅದರ ಆಳ್ವಿಕೆ ಆತನ ಲೀಲೆ. ಆತನ ಸ್ವತಂತ್ರವಾದ ಇಚ್ಛೆಯ ಕಾರ್ಯ. ಈ ಲೀಲೆಯಲ್ಲಿ ಆತನು ಕೆಲವು ಕ್ರಮ ನಿಯಮಗಳನ್ನು ಇರಿಸಿಕೊಂಡಿರುವಂತೆ ಕಾಣಬರುತ್ತದೆ. ಈ ಕ್ರಮನಿಯಮಗಳು ಪ್ರಕೃತಿಕಾರ್ಯದಲ್ಲಿ ಅಷ್ಟಿಷ್ಟು ಕಾಣಬರುತ್ತದೆ. ದೇವರ ಒಂದು ಅಂಶ ಜೀವಿಗಳಲ್ಲಿ ಅಡಗಿಕೊಂಡಿರುತ್ತದೆ. ಆ ತೇಜಸ್ಸು ಮನುಷ್ಯಜಂತುವಿನಲ್ಲಿ ಹೆಚ್ಚು ಪ್ರಕಾಶಮಾನವಾಗಿರುತ್ತದೆ. [ಇಲ್ಲಿ ವಿಶಿಷ್ಟಾದ್ವೈತದ ಶೇಷ–ಶೇಷೀಭಾವ ಕಾಣಿಸದೆ–?–(ಲೇ.)]

"ದೇವರ ಇಚ್ಛೆಯನ್ನರಿತುಕೊಂಡು ಅದರಂತೆ ನಡೆಯುವುದು ಪುಣ್ಯ.

ಅದಕ್ಕೆ ವಿರೋಧವಾಗಿ ನಡೆಯುವುದು ಪಾಪ. ಪುಣ್ಯಕ್ಕೆ ಶುಭವನ್ನೂ ಪಾಪಕ್ಕೆ ದಂಡನೆಯನ್ನೂ ವಿಧಿಸುವುದು ದೈವದ ಅಧಿಕಾರ.

"ದೇವರು ಸಚ್ಚಿದಾನಂದನು."

ಇದು ಇಲ್ಲಿನ ಸಿದ್ಧಾಂತ.

'ಸತ್ಯ–ಋತ–ಧರ್ಮ' ಎನ್ನುವ ಪುಸ್ತಿಕೆಯಲ್ಲಿ ಇಂಥದೇ ವಿಚಾರಲಹರಿ. 'ಋತ' ಎಂದರೆ ಸ್ವಭಾವಸಿದ್ಧವಾದ, ಪ್ರಕೃತಿಸಿದ್ಧವಾದ ಒಂದು ನಡವಳಿಕೆ, ಕ್ರಮ. ಸತ್ಯ ವಿಚಾರಸಿದ್ಧವಾದದ್ದು, ಸಮಾಜದ ಹೊರಜಗತ್ತನ್ನು ನೋಡಿ ಅದನ್ನು ಸ್ಥಿರಪಡಿಸಿಕೊಳ್ಳುತ್ತೇವೆ. ಹೀಗೆ ವಿಚಾರಸಿದ್ಧವಾದದ್ದು ಸತ್ಯ. ಈ ಸತ್ಯದ ಅನುಷ್ಠಾನವೇ ಧರ್ಮ. ಋತಕ್ಕೂ ಸತ್ಯಕ್ಕೂ ಅನುಸಾರವಾದ ನಡವಳಿಕೆಯೆ ಧರ್ಮ. 'ದೇವರು' ಪುಸ್ತಿಕೆಯಲ್ಲಿನ ಈ ಪ್ರಸ್ತಾವನ್ನೆಲ್ಲ 'ಸತ್ಯ–ಋತ–ಧರ್ಮ' ಕೃತಿ ವಿವರಿಸುತ್ತದೆ.

ನಮ್ಮ ಸಂಸ್ಕೃತಿಯಲ್ಲಿ ಗಾಢವಾಗಿ ಇದ್ದು, ಅದನ್ನು ಕುರಿತು ಆಳವಾಗಿ ಚಿಂತಿಸಿರುವ ಆಲೋಚಕರ ವಿದ್ವತ್ಪೂರ್ಣ ಕೃತಿ, '*ಸಂಸ್ಕೃತಿ*'. ನಮ್ಮ ನಾಡು, ಪರಂಪರೆಗಳ ಬಗ್ಗೆ ಪ್ರೇಮ, ಅಭಿಮಾನ, ಸಂಪ್ರದಾಯಗಳ ಬಗ್ಗೆ ವಿಶ್ವಾಸಪೂರ್ವಕ ವಿಮರ್ಶನ, ಗುಣಗ್ರಾಹಕ ಬುದ್ಧಿ ಇವು ಇಲ್ಲಿ ಪ್ರಕಟಗೊಂಡಿವೆ. "ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ" ಎನ್ನುತ್ತಾರೆ. ಮ್ಯಾಥ್ಯೂ ಆರ್ನಾಲ್ಡ್, ನ್ಯೂಮನ್, ವಾಲ್ಮೀಕಿ ಮುಂತಾದವರ ವಿಚಾರದ ಉದಾಹರಣೆಗಳನ್ನು ಕೊಡುತ್ತಾರೆ. "ದೈವ ಮತ ಧರ್ಮ, ಸಾಹಿತ್ಯಾದಿ ಸರಸ ಕಲೆ, ವಿಜ್ಞಾನ, ದೇಶ ವಿದೇಶ ಚರಿತ್ರೆ ಮತ್ತು ಮಹಾಪುರುಷ ವೃತ್ತಾಂತ, ಸ್ವಸಮಾಜ ಪ್ರಭಾವ, ಮನುಷ್ಯನ ಅಂತರಂಗದ ಆತ್ಮ ಪರಿಶೋಧನೆ, ಆತ್ಮಸಂಯಮ— ಇವು ಆರು ಸಂಸ್ಕೃತಿಯ ಮೂಲ ಸ್ಥಾನಗಳು" ಎಂದು ನಿರ್ದೇಶಿಸುತ್ತಾರೆ. " '*ಮಂಕುತಿಮ್ಮನ ಕಗ್ಗ*' ಡಿವಿಜಿಯವರ ಜೀವನ ಚಿಂತನೆಯ ಪದ್ಯರೂಪವಾದರೆ, '*ಸಂಸ್ಕೃತಿ*' ಅದೇ ಚಿಂತನೆಯ ಗದ್ಯರೂಪವೆನ್ನಬಹುದು."

(—ಡಾ।। ಚಿದಾನಂದಮೂರ್ತಿ–ಕುಸುಮಾರ್ಪಣೆ–ಪುಟ 56)

ತತ್ತ್ವಚಿಂತನೆಯ ಪ್ರಕಾರದಲ್ಲಿ ಇನ್ನು ಉಳಿದಿರುವುದು '*ಶ್ರೀಮದ್ ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ*'. ಇದು ಈ ಮಾಲೆಯ, ಅಷ್ಟೇ ಅಲ್ಲ, ಡಿವಿಜಿಯವರ ಸಮಸ್ತ ಸಾರಸ್ವತ ಚಿಂತನೆಯ ಶಿಖರ ಕೃತಿ. ಬೃಹತ್ತಿನಲ್ಲಿ ಮಹತ್ತಿನಲ್ಲಿ ಎರಡರಲ್ಲೂ ಮೇರು ಸದೃಶ. ಅವರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ತಂದುಕೊಟ್ಟ ಕೃತಿ.

"ಮತತತ್ತ್ವ, ಧರ್ಮ, ದೈವ ಮೊದಲಾದ ಸೂಕ್ಷ್ಮ ಪವಿತ್ರ ವಿಚಾರಗಳಿಗೆ ನಾನು ಬಾಯಿ ಹಾಕತಕ್ಕದ್ದಲ್ಲವೆಂದು ಮೊದಲಿನಿಂದ ನಿಯಮ ಮಾಡಿಕೊಂಡಿದ್ದೆ. ಅಂಥ ವಿಚಾರಕ್ಕೆ ಅವಶ್ಯವಾದ ಶಾಸ್ತ್ರಜ್ಞಾನವಾಗಲಿ ಅನುಷ್ಠಾನ–ಅನುಭವಗಳಾಗಲಿ ನನ್ನ ಪಾಲಿಗೆ ಬಂದಿಲ್ಲ. ಸಂತೆ ಮಾಳದಲ್ಲಿ ನನ್ನ ನಿತ್ಯದ ಬಿಡಾರ. ಗುಡಿ ಮಠಗಳು ನನಗೆ ದೂರ....

"...ಅದಕ್ಕೆ (ಪತ್ರಿಕಾ ವೃತ್ತಿಗೆ) ಅಂಟಿಕೊಂಡು ಸಾರ್ವಜನಿಕ ಜೀವನದ ಸಂಪರ್ಕ ನನಗೆ ಉಂಟಾಯಿತು. ಅಲ್ಲಿ ಅನುಭವ ಬೆಳೆದಂತೆ ರಾಜಕೀಯಕ್ಕೂ, ಧರ್ಮಪ್ರಶ್ನೆಗೂ ಇರುವ ಸಂಬಂಧ ನನ್ನ ಮನಸ್ಸಿಗೆ ವಿಶದಪಡುತ್ತ ಬಂತು. ಗೋಖಲೆ ಸಂಸ್ಥೆಯ ಜವಾಬ್ದಾರಿ ಒದಗಿದ ಮೇಲಂತೂ ದೇಶಹಿತಕ್ಕೆ ಧಾರ್ಮಿಕ ಸಾಹಿತ್ಯದ ಅನಿವಾರ್ಯತೆ ಎಷ್ಟೆಂಬುದು ಮತ್ತಷ್ಟು ಸ್ಪಷ್ಟವಾಯಿತು.

"ಹೀಗೆ ಧರ್ಮಜಿಜ್ಞಾಸೆ ಗೋಖಲೆ ಸಂಸ್ಥೆಯಲ್ಲಿ ಸಂಗತವಾಯಿತು."

ಡಿವಿಜಿ ಧರ್ಮಜಿಜ್ಞಾಸೆಗೆ ಹೊರಟದ್ದು ಹೀಗೆ. ಅದು ಅವರ ಜೀವನ ಶ್ರದ್ಧೆಗೆ ಅವಶ್ಯವೆಂದು ತೋರಿತು. ಅಂತೆಯೆ ಅವರ ಧರ್ಮಚಿಂತನೆ ಎಲ್ಲವೂ ಪರಮಾರ್ಥ ಉದ್ದೇಶ ಮಾತ್ರದ್ದಲ್ಲ, ಇಹದಲ್ಲಿ ಇದ್ದು, ಇಹವನ್ನು ಚೆನ್ನ ಮಾಡಿಕೊಳ್ಳುವ ಉದ್ದೇಶದ್ದು. ಹಾಗಾಗಿ ಅವರ ಗೀತಾ ಚಿಂತನ 'ಜೀವನ ಧರ್ಮಯೋಗ'. ದಿನನಿತ್ಯದ ಬದುಕಿಗೆ ಗೀತೆ ಎಷ್ಟು ಬೇಕು, ಹೇಗೆ ಅನ್ವಯ ಸಹಾಯಕ, ಧರ್ಮತತ್ತ್ವಗಳು ಎಷ್ಟೆಷ್ಟು ಹೇಗೆ ಹೇಗೆ ಅವಶ್ಯ ಇತ್ಯಾದಿಗಳತ್ತಲೇ ಅವರ ದೃಷ್ಟಿ.

ಈ ವ್ಯಾಖ್ಯಾನ ಗೋಖಲೆ ಸಂಸ್ಥೆಯಲ್ಲಿ ನಡೆಸಿದ ಅಭ್ಯಾಸಗೋಷ್ಠಿಯ ಪ್ರವಚನಗಳು. ಅವುಗಳ ಲಿಖಿತರೂಪದ ಲೇಖನಗಳು 'ಪ್ರಜಾಮತ' ಪತ್ರಿಕೆಯಲ್ಲಿ ಧಾರೆಯಾಗಿ ಬಂದವು. ಪಂಡಿತ ಪಾಮರರಾದಿಯಾಗಿ, ಮುಖ್ಯವಾಗಿ ಸಾಮಾನ್ಯ ಜನರ ಮನಸೆಳೆದವು. ತತ್ಫಲವೇ 1966ರಲ್ಲಿ ಗ್ರಂಥವಾಗಿ ಪ್ರಕಟಣೆ.

ಗೀತೆಯ ಮೇಲೆ ಬಂದಿರುವ ವ್ಯಾಖ್ಯಾನಗಳು ಸಾವಿರಾರು. ಆಚಾರತ್ರಯ ರಿಂದ ಮೊದಲುಗೊಂಡು ಇಂದಿನವರೆಗೂ ವ್ಯಾಖ್ಯಾನ ವಿಮರ್ಶೆ ಬರುತ್ತಲೇ ಇವೆ. ಭಿನ್ನ ಭಿನ್ನ ದೃಷ್ಟಿಗಳಿಂದ ಅವಲೋಕನ. ಎಲ್ಲ ದೃಷ್ಟಿಗಳಿಗೂ ಮತಗಳಿಗೂ ಗೀತೆ ಆಧಾರ ಒದಗಿಸುತ್ತಲೇ ಇದೆ. ಡಿವಿಜಿಯವರ ದೃಷ್ಟಿ ಜೀವನ ದೃಷ್ಟಿಯದು ಎಂದು ಆಗಲೇ ನೋಡಿದ್ದೇವೆ. ಅಂತಯೆ ಇದರಲ್ಲಿ ದ್ವೈತಾದ್ವೈತ, ವಿಶಿಷ್ಟಾದ್ವೈತ ಇತ್ಯಾದಿ ಪ್ರತಿಪಾದನೆ ಇಲ್ಲ. ಖಂಡನ ಮಂಡನ ಇಲ್ಲ. ಇಲ್ಲಿರುವುದು ಸಾಮರಸ್ಯದ ದೃಷ್ಟಿ ಸಮನ್ವಯದ ದೃಷ್ಟಿ. ಬದುಕು ಮುಖ್ಯ. ಬದುಕಿಗೆ ಗೀತೆ ಎಷ್ಟು ಮುಖ್ಯ, ಎಷ್ಟು ಸಂಗತ—ಇದೇ ಡಿವಿಜಿಯವರ ಕಾಳಜಿ.

ಗೀತೆಯಂಥ ಧಾರ್ಮಿಕ ಗ್ರಂಥದ ಅವಲೋಕನಕ್ಕೆ ಸಾಕಷ್ಟು ಮನೋಭೂಮಿಕೆಯ ಪೂರ್ವಸಿದ್ಧತೆ ಅಗತ್ಯ ಎಂದು ಅಭಿಪ್ರಾಯ. ಯಾವುದೇ ಶಾಸ್ತ್ರಕ್ಕೂ ಇದು ಅಗತ್ಯವೇ. ಅದರಂತೆ ಇಲ್ಲಿ ಸುಮಾರು 50 ಪುಟಗಳಲ್ಲಿ 'ಭೂಮಿಕೆ'ಯನ್ನು ಕೊಟ್ಟಿದಾರೆ. ಇದು ಬಹು ಮುಖ್ಯ ಭಾಗ. ವಿಷಯ ದೇಗುಲಕ್ಕೆ ಪ್ರವೇಶದ್ವಾರ. ಗೀತೆ ಒಂದು ಜೀವನ ಶಾಸ್ತ್ರ, ಕೇವಲ ಮೋಕ್ಷಶಾಸ್ತ್ರವಲ್ಲ, ಸತ್ಯದ ಸಾವಿರ ನೋಟ, ಗ್ರಂಥದ ರಚನೆ, ಸ್ವರೂಪ, ಹಿನ್ನಲೆ, ಅಧ್ಯಯನಕ್ಕೆ ಬೇಕಾದ ಅರ್ಹತೆ, ಮನೋಭಾವ, ಕಾವ್ಯದೃಷ್ಟಿ ಪುರುಷಾರ್ಥ ಕಲ್ಪನೆ, ಶ್ರದ್ಧೆಯ ಅಗತ್ಯ, ಸಮ್ಯಗ್ಜೀವನ ದರ್ಶನ—ಇತ್ಯಾದಿ ವಿಷಯಗಳ ಅತ್ಯಂತ ಸಾರಭೂತ ಪ್ರತಿಪಾದನೆ.

"ಗೀತೆಯು ಸರ್ವಾಂಗ ಸಂಪೂರ್ಣವಾದ ಸಾರ್ಥಕ ಜೀವನ ದರ್ಶನ."

"ಸರ್ವಾಂಶಪೂರ್ಣವೂ ಸರ್ವಸಮಂಜಸವೂ ಸರ್ವಸಮರಸವೂ ಆದ ಜಗಜ್ಜೀವೇಶ್ವರ ತತ್ತ್ವ ನಿರೂಪಣೆ..."

"ಜೀವನ ಕೆಟ್ಟದ್ದಲ್ಲ. ಅದರ ವಿಷಯಕ್ಕೆ ಜಿಹಾಸೆಪಡತಕ್ಕದ್ದಲ್ಲ ಮತ್ತು ಅದರಲ್ಲಿರುವ ಕಷ್ಟಗಳನ್ನು ಎದುರಿಸಿ ಪೌರುಷದಿಂದ ಹೋರಾಡತಕ್ಕದ್ದು. ಇದೇ ಗೀತೆಯ ಉಪದೇಶ" ಎನ್ನುವಲ್ಲಿ ಡಿವಿಜಿಯರ ಜೀವನ ದರ್ಶನ ವ್ಯಕ್ತಗೊಂಡಿದೆ. ಗೀತೆಯ ಅಧ್ಯಾಯ ಕ್ರಮದ ಪರಿಶೀಲನೆ, ವಿವರಣೆ ವಿಸ್ತಾರವಾಗಿ ನಡೆಯುತ್ತದೆ. ಗೀತೆಯ ಪ್ರತಿ ಅಧ್ಯಾಯಕ್ಕೂ ಡಿವಿಜಿ ತಮ್ಮದೇ ಆದ ಹೆಸರುಗಳನ್ನು ಕೊಟ್ಟಿದ್ದಾರೆ. ಪ್ರಾಕೃತ ಕಾರುಣ್ಯಯೋಗ, ತತ್ತ್ವ ವಿವೇಕ ಯೋಗ, ಸ್ವಧರ್ಮಯೋಗ, ಇತ್ಯಾದಿ. ಪ್ರತಿಯೊಂದು ಪ್ರಕರಣದಲ್ಲೂ ಮೊದಲು ಆ ಅಧ್ಯಾಯದ ಮೂಲ ಶ್ಲೋಕಗಳು. ಅಧ್ಯಾಯದ ವಿಷಯಸೂಚಕವಾದ ಒಂದು ಕನ್ನಡ ಕಂದಪದ್ಯ. ಅದರ ಗದ್ಯ ವಾಕ್ಯ. ಅನಂತರ ವ್ಯಾಖ್ಯಾನ. ಪ್ರಕರಣಾಂತ್ಯದಲ್ಲಿ ವ್ಯಾಖ್ಯಾನದ ಸಾರಾಂಶ, ಅನುಬಂಧಗಳಲ್ಲಿ ಶಾಸ್ತ್ರಕ್ರಿಯೆ ಇಲ್ಲವೇ ವಿಶೇಷಾರ್ಥಗಳ ವಿಶ್ಲೇಷಣೆ. ಹೀಗೆ ಹದಿನೆಂಟು ಅಧ್ಯಾಯಗಳ ಅವಲೋಕನ. ಸುಮಾರು 500 ಪುಟಗಳು. ಉಪಸಂಹಾರದಲ್ಲಿ ಇಡೀ ವ್ಯಾಖ್ಯಾನದ ಸಾರಾಂಶ. ಎಂಟು ಪರಿಶಿಷ್ಟಗಳಲ್ಲಿ ಮತತ್ರಯ ವಿಚಾರ, ಅಧ್ಯಾರೋಪ–ಅಪವಾದ, ಭಕ್ತಿ–ಕರ್ಮ–ಜ್ಞಾನ, ಮೋಕ್ಷಸುಖ, ಮತಧರ್ಮವೋ ಮದ್ದೀಡೋ? ಕಾಲಸ್ವರೂಪ, ಗೀತೆಯ ಗೇಯತ್ವ, ರಾಮಕಥಾ ಸಮನ್ವಯ ಎಂಬ ವಿಷಯಗಳ ಚರ್ಚೆ.

ಸಾಂಪ್ರದಾಯಿಕ ಮತವಿಚಾರಗಳು, ಆಧುನಿಕ ವಿಚಾರಗಳು, ಇತಿಹಾಸದ ಪ್ರಕರಣಗಳು, ವೈಜ್ಞಾನಿಕ ಚಿಂತನೆಗಳು, ಪಾಶ್ಚಿಮಾತ್ಯ ವಿಚಾರವಂತರ, ಕವಿಗಳ ಚಿಂತನೆಗಳು, ನಮ್ಮ ಕವಿಗಳ ಸಾಮತಿಗಳು, ಐತಿಹ್ಯಗಳು, ನಿತ್ಯಜೀವನದ

ಅನುಭವಗಳು, ಪ್ರಕರಣಗಳು, ರಸದೃಷ್ಟಿ ತತ್ತ್ವ ದೃಷ್ಟಿಗಳು, ವೇದೋಪನಿಷತ್ತಿನ ಆಧಾರಗಳು, ನಾನಾ ವ್ಯಾಖ್ಯಾನಕಾರರ ಟೀಕೆ–ಟಿಪ್ಪಣಿಗಳು, ಸಾಂಪ್ರದಾಯಿಕ ಅರ್ಥಗಳಿಗೆ ನವೀನ ವ್ಯಾಖ್ಯಾನಗಳು—ಇವೆಲ್ಲದರಿಂದ ಈ ಕೃತಿ ವಿಶಿಷ್ಟವೆನಿಸಿದೆ. ತತ್ತ್ವಜ್ಞಾನ, ತದನುಸರಣ ಕರ್ಮಾಚರಣೆ, ಅದರಲ್ಲಿ ಸ್ವಾರ್ಥರಾಹಿತ್ಯ, ಜೊತೆಗೇ ಜೀವನಶ್ರದ್ಧೆ, ರಸಿಕತೆ, ಲೋಕಜೀವನದ ಕಷ್ಟಕೋಟಲೆಗಳನ್ನು ಧೈರ್ಯವಾಗಿ, ನಿರ್ಲಿಪ್ತವಾಗಿ, ಕರ್ತವ್ಯದೃಷ್ಟಿಯಿಂದ ಎದುರಿಸುವ ಮನೋವೃತ್ತಿ, ಒಟ್ಟಿನಲ್ಲಿ ಸಂಯಕ್‌ಜೀವನ—ಇದು ಇಲ್ಲಿನ ಮಥಿತಾಂಶ. ವೇದ ಮತೀಯರು ಮಾತ್ರವಲ್ಲದೆ ಜಗತ್ತಿನ ಎಲ್ಲರೂ ಭಾವಿಸಿಕೊಳ್ಳಬೇಕಾದದ್ದು ಗೀತೆ ಎಂದು ಡಿವಿಜಿ ಪ್ರತಿಪಾದಿಸುತ್ತಾರೆ. ಇಲ್ಲಿ ಅವರ ಸಮನ್ವಯ ದೃಷ್ಟಿ—ಯಾವುದು ರಾಜಕೀಯದಲ್ಲಿ ಲಿಬರಲಿಸಂ (ಉದಾರವಾದ) ಎಂದಿತ್ತೋ ಆ ದೃಷ್ಟಿ ಸ್ಪಷ್ಟವಾಗಿ ಒಡಮೂಡಿದೆ.

ಗೀತೆಯ ಬಗ್ಗೆ ಆಧುನಿಕ ಯುಗದಲ್ಲಿ ರಚಿತವಾಗಿರುವ, ಅತ್ಯಂತ ಶ್ರೇಷ್ಠವಾದ, ಅತ್ಯಂತ ಗಾಢ ಚಿಂತನೆ ಅನುಭವಗಳಿಂದ ಕೂಡಿದ, ಸಾಮಾನ್ಯ ಜನರಿಗೆ ದಾರಿದೀಪವಾಗಬಲ್ಲ ಗ್ರಾಹ್ಯವಾದ ಕೃತಿ ಡಿವಿಜಿ ಅವರ 'ಜೀವನ ಧರ್ಮ ಯೋಗ' ಎಂದರೆ ಕಿಂಚಿತ್ತೂ ಉತ್ಪ್ರೇಕ್ಷೆಯಲ್ಲ.

1970ರಲ್ಲಿ ಡಿವಿಜಿಯವರು ಬೆಂಗಳೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮಾಸ್ತಿ ತಿರುಮಲಮ್ಮ ದತ್ತಿಯ ಎರಡು ಉಪನ್ಯಾಸಗಳನ್ನು ಮಾಡಿದರು. ವಿಷಯ 'ಸಾರ್ವಜನಿಕದಲ್ಲಿ ಸಾತ್ವಿಕ'. ಈ ದೇಶದ ಪ್ರಜೆಗಳಾಗಿ ನಮ್ಮ ಕರ್ತವ್ಯ ಏನು ಎನ್ನುವುದು ಇಲ್ಲಿನ ಮುಖ್ಯ ವಿಷಯ. ಈ ಪುರಾತನ ದೇಶದ ಒಗ್ಗಟ್ಟು, ಒಂದುತನ, ಸತ್ಯವಂತಿಕೆ, ಲೋಕಸ್ನೇಹ, ಜೀವಸ್ನೇಹ, ಹಕ್ಕಿಗಿಂತ ಕರ್ತವ್ಯ ಮುಖ್ಯ, ಮಾನವತ್ವ, ಅನುಕರಣ ತ್ಯಾಗ, ಸ್ವಂತಿಕೆ–ಸ್ವಧರ್ಮ, ಪ್ರಜಾಭಿಪ್ರಾಯ ರೂಢಿಕೆ ಹಾಗೂ ಅದರ ಸ್ಥಾನ, ಅತಿಯನ್ನು ದೂರವಿಟ್ಟ ಮಿತವಾದಿ ಮಾರ್ಗ, ಸಂಪ್ರದಾಯ ಪರಂಪರೆಗಳ ಮಹತ್ವ, ವ್ಯಕ್ತಿಜೀವನದಲ್ಲಿನ ಸಾತ್ತ್ವಿಕ ಚರ್ಯೆ, ರಾಷ್ಟ್ರಜೀವನದಲ್ಲಿನ ಸಾತ್ತ್ವಿಕ ಚರ್ಯೆ, ಇವುಗಳೆಲ್ಲದರ ಪ್ರಸ್ತಾಪ ಈ ಉಪನ್ಯಾಸಗಳಲ್ಲಿದೆ. ಹಿಂದಿನಿಂದ ನಮ್ಮಲ್ಲಿ ಬಂದಿರುವ ದೇವಋಣ, ಪಿತೃಋಣ, ಋಷಿಋಣಗಳಿಗೆ ಡಿವಿಜಿ 'ದೇಶ ಋಣ' ಎಂಬ ನಾಲ್ಕನೆಯದನ್ನು ಸೇರಿಸುತ್ತಾರೆ. ದೇಶಸೇವೆ ಎನ್ನುವುದು ಉಪಕಾರವೇನಲ್ಲ. ಅದೊಂದು ಕರ್ತವ್ಯ, ಅದೇ ದೇಶ ಋಣ. ಅದಕ್ಕಾಗಿ ಪ್ರತಿಯೊಬ್ಬ ಪ್ರಜೆಯೂ ಎಂಟು ವ್ರತಗಳನ್ನು ಕೈಗೊಳ್ಳಬೇಕು ಎನ್ನುತ್ತಾರೆ—ದೇಶ ಋಣ, ದೇಶದ ಐಕಮತ್ಯ, ಸತ್ಯ, ಸೌಜನ್ಯ, ಸ್ವತಂತ್ರ ವಿಚಾರ, ಶಾಂತಿ ಸಂಧಾನ, ನಿರ್ಭೀತತೆ, ಸ್ವಾರ್ಥತ್ಯಾಗ ಇವು ಎಂಟು ವ್ರತಗಳು.

ಸೃಷ್ಟ್ಯಾತ್ಮಕ ಸಾಹಿತ್ಯದ ಜೊತೆಜೊತೆಗೇ, ಸಾಹಿತ್ಯ ವಿಮರ್ಶೆ, ಸಾಹಿತ್ಯತತ್ತ್ವ, ಸಾಹಿತ್ಯ ವೃದ್ಧಿ, ಸಾಹಿತ್ಯ ಸಂಘಟನೆ, ಪ್ರಸಾರ—ಈ ಎಲ್ಲವನ್ನೂ ಕುರಿತು ಆಲೋಚನೆ ಮಾಡಿದವರಲ್ಲಿ, ಅದಕ್ಕಾಗಿ ದುಡಿದವರಲ್ಲಿ ಡಿವಿಜಿ ಪ್ರಮುಖರು. ಸಾಹಿತ್ಯ ಪರಿಷತ್ತಿನ ಕೆಲಸದಲ್ಲಿ ಅವರ ಪಾತ್ರವನ್ನು ಕಂಡಾಗಿದೆ. ಸಾಹಿತ್ಯ ಚಿಂತನೆ, ಮೀಮಾಂಸೆಗೆ ಅವರು ನೀಡಿರುವ ಕೊಡುಗೆ ಉನ್ನತ. '*ಜೀವನ ಸೌಂದರ್ಯ ಮತ್ತು ಸಾಹಿತ್ಯ*', '*ಸಾಹಿತ್ಯಶಕ್ತಿ*', '*ಕಾವ್ಯಸ್ವಾರಸ್ಯ*' ಇವು ಅಂಥ ಕೃತಿಗಳು. ಈ ಮೂರೂ ಪ್ರಬಂಧ ಸಂಕಲನಗಳು ಡಿವಿಜಿಯವರ ಸಾಹಿತ್ಯ ಮೀಮಾಂಸೆ, ವಿಮರ್ಶೆಯನ್ನು ವಿಜೃಂಭಿಸುತ್ತವೆ.

ರಾಷ್ಟ್ರಕನಿಗೆ ಸಾಹಿತ್ಯ ಬೇಕೆ? ಆಧುನಿಕ ವಿಚಾರೋಪನ್ಯಾಸಗಳು, ನೂತನ ಸಾಹಿತ್ಯ ರಚನೆ, ಭಾಷೆಯ ನವೀಕರಣ, ನವ್ಯತೆಯ ಜೀವನ, ವಿಜ್ಞಾನ–ಲೋಕ ಪರಿಜ್ಞಾನ, ಉಪಾಧ್ಯಾಯ ಪಂಡಿತರು, ಕಾವ್ಯದಲ್ಲಿ ಜೀವನತತ್ತ್ವದರ್ಶನ, ಕನ್ನಡ ಜನತೆಗೋಸ್ಕರ ಕನ್ನಡ, ಉಪಾಧ್ಯಾಯರು ಮತ್ತು ಸಾಹಿತ್ಯ ಪಾಠ, ಕನ್ನಡಿಗರಿಗೆ ಸಂಸ್ಕೃತ, ಕಾವ್ಯೋಪಾಸನೆ—ಇವು 'ಸಾಹಿತ್ಯಶಕ್ತಿ' ಗ್ರಂಥದ ಹನ್ನೆರಡು ಪ್ರಬಂಧಗಳು. ಆಯಾ ವಿಷಯಗಳನ್ನು ಕುರಿತಂತೆ ಡಿವಿಜಿಯವರ ಚಿಕಿತ್ಸಕ ಬುದ್ಧಿಯನ್ನೂ, ಸಹೃದಯ ವಿಮರ್ಶಕತೆಯನ್ನೂ, ಪ್ರಾಚೀನ–ಅರ್ವಾಚೀನಗಳ ಬಗೆಗೆ ಸಮಾನ ಆದರವನ್ನೂ, ಕಾವ್ಯತತ್ತ್ವ ಚಿಂತನೆಯನ್ನೂ, ಲೋಕಜೀವನದಲ್ಲಿ ಸಾಹಿತ್ಯದ ನೆಲೆಬೆಲೆಗಳನ್ನೂ, ಶಕ್ತಿಸ್ಥಾನ ನಿರ್ದೇಶನವನ್ನೂ ಕಾಣುತ್ತೇವೆ. 'ಕಾವ್ಯೋಪಾಸನೆ' ಎಂಬ ಪ್ರಬಂಧವಂತೂ ಕಾವ್ಯತತ್ತ್ವದ ರಸಪಾಕ. ಕಾವ್ಯಗಳಲ್ಲಿ ಯಾವುದು ಪ್ರಧಾನ—ಅರ್ಥವೇ, ಧ್ವನಿಯೆ, ರಸವೇ, ಅಲಂಕಾರವೇ, ಛಂದಸ್ಸೇ, ಔಚಿತ್ಯವೇ?—ವಾದ ವಿವಾದ ಶತಮಾನಗಳಿಂದ ನಡೆದಿದೆ. ನಮ್ಮ ಅನೇಕ ಮೀಮಾಂಸಜ್ಞರು ತಮ್ಮ ವಿಚಾರಗಳನ್ನು ಮುಂದಿಟ್ಟಿದ್ದಾರೆ. ಡಿವಿಜಿ ಇಲ್ಲಿ ಇವೆಲ್ಲ ವಿಭಿನ್ನ ವಿಚಾರಗಳಲ್ಲೂ ಸಮನ್ವಯ ಸಾಧಿಸಲು ಯತ್ನಿಸಿದ್ದಾರೆ. ಯಾವುದೇ ಒಂದು ದ್ರವ್ಯದಿಂದ ಕಾವ್ಯ ಆಗದು. ಅದಕ್ಕೆ ರಸ, ಧ್ವನಿ, ರೀತಿ, ಔಚಿತ್ಯ, ಅಲಂಕಾರ, ಇತ್ಯಾದಿ ಎಲ್ಲ ಪರಿಕರಗಳೂ ಬೇಕು. ಅಡುಗೆಯಲ್ಲಿ ನಾನಾ ಪದಾರ್ಥ ಉಚಿತ ರೀತಿಯಲ್ಲಿ ಸೇರಿ ಪಕ್ವಗೊಂಡಾಗ ಪಾಕ ರುಚಿ, ಸ್ವಾದು. ಅಂತೆಯೆ ಕಾವ್ಯದಲ್ಲೂ ಎಲ್ಲ ಪರಿಕರ ಹದಗೊಂಡು ಪಕ್ವವಾದಾಗಲೇ ಕಾವ್ಯದ ಸವಿ, ಗ್ರಾಹ್ಯತೆ. "ಕಾವ್ಯವೆಂಬುದು ಕೀರು; ರಸ ಅದರ ಹಾಲು ; ಮನನ ಅದರ ದ್ರಾಕ್ಷಿ. ಭಾವರಸದ ಸಿಹಿಯನ್ನು ನಾಲಗೆ ಸವಿದು ಏಕರುಚಿ ಜಡವಾದಾಗ ಮನನದ ದ್ರಾಕ್ಷಿ ಸಿಗುತ್ತದೆ. ಆ ಕೊಂಚದ ರುಚಿಭೇದವು ಮತ್ತು ನಾಲಗೆಗೆ ವಿರಾಮ ಕೊಡುವ ಹಲ್ಲಿನ ಶ್ರಮವು

ಆಪ್ಯಾಯನಕರವಾಗುತ್ತದೆ. ಈ ಮನನ ದ್ರಾಕ್ಷಿಯ ರುಚಿ ಮಾಸುವ ವೇಳೆಗೆ ಭಾವರಸ ಕ್ಷೀರ ಪುನಃ ಸಿದ್ಧವಾಗಿರುತ್ತದೆ. ಹೀಗೆ ಸಿಹಿ–ಹುಳಿ, ಗಟ್ಟಿ–ತಿಳಿ ; ರಸ–ತರ್ಕ ; ಆವೇಶ–ಆಲೋಚನೆ ; ಆನಂದ–ಅನುಚಿಂತನೆ– ಈ ಪರ್ಯಾಯ ಕ್ರಮದಲ್ಲಿ ಹರಿಯುತ್ತದೆ ಕಾವ್ಯಪೀಯೂಷ.''—ಡಿವಿಜಿ ಅವರ ರಸಮಯ ಕಾವ್ಯಮೀಮಾಂಸೆಗೆ ಇದೊಂದು ನಿದರ್ಶನ. ಇಂಥ ಸ್ವಾದಿಷ್ಟವಾದ ಖಂಡಗಳು ಈ ದರ್ಶನ ಪ್ರತಿಪಾದನೆಯನ್ನು ಅತ್ಯಂತ ಹೃದ್ಯವಾಗಿಸುತ್ತವೆ. ಪೂರ್ವಾಚಾರ್ಯರ ಬಗೆಗೆ ಡಿವಿಜಿಗೆ ಗೌರವ. ಆದರೂ ಅವರ ದೃಷ್ಟಿಯನ್ನು ಒರೆಹಚ್ಚಿ ನೋಡುತ್ತಾರೆ. "ಪೂರ್ವದ ಕಾವ್ಯಮೀಮಾಂಸಕರ ದೃಷ್ಟಿ ಕಾವ್ಯದ ಅಂತರಂಗಕ್ಕಿಂತ ಅದರ ಬಹಿರಂಗಕ್ಕೆ ಹೆಚ್ಚಾಗಿ ದೊರೆತಿದೆ..... 'ವಿಷಯ'ಕ್ಕಿಂತ ರೀತಿ ಮುಖ್ಯವಾಯಿತು.'' ಎಂದು ವಿಮರ್ಶಿಸುತ್ತಾರೆ. ಕಾವ್ಯದ ಉದ್ದೇಶ ಜೀವೋದ್ಧಾರ ಕ್ರಿಯೆ. ಅದಕ್ಕೆ ಸಾಧನ–ಭೂತಗಳು ಪದಶಯ್ಯೆ, ವಾಕ್ಯ ಚಮತ್ಕೃತಿಗಳು. ಕಾವ್ಯದ ಮುಖ್ಯ ಕಾರ್ಯ ಒಂದು ದರ್ಶನ ದೃಷ್ಟಿ, ಒಂದು ಸ್ಫೂರ್ತಿಪ್ರದಾನ ಎನ್ನುತ್ತಾರೆ. ಕಾವ್ಯಾಸ್ವಾದಕ್ಕೆ ಬೇಕಾದ ಸಿದ್ಧತೆ, ಹೃದಯಪರಿಪಾಕಗಳನ್ನು ಒತ್ತಿ ಹೇಳುತ್ತಾರೆ. ವೇದೋಪನಿಷತ್ತುಗಳ ಉದಾಹರಣೆಗಳನ್ನು ಕೊಡುತ್ತಾರೆ. ಕಾವ್ಯವನ್ನು ದರ್ಶನದ ಪೀಠಕ್ಕೆ ಆಹ್ವಾನಿಸುತ್ತಾರೆ.

ಕಾವ್ಯದಲ್ಲಿ ರಸ ಹೃದಯಕ್ಕೆ, ಮನನ ಬುದ್ಧಿಗೆ. ಎರಡೂ ಪರ್ಯಾಯ ಕ್ರಮದಲ್ಲಿ ಬರಬೇಕು. ಇದಕ್ಕೆ ಭೂತಕನ್ನಡಿಯ ಮೂಲಕ ಬೆಳಕಿನ ಕಿರಣ ಹಾಯುವಾಗ ಆಗುವ ಬೆಳಕಿನ ಕೇಂದ್ರೀಕರಣ ಹಾಗೂ ವಿಕಿರಣಗಳ ಕ್ರಿಯೆಯನ್ನು ಉದಾರಣೆಯಾಗಿ ಕೊಡುತ್ತಾರೆ.




ಇದು ಕಾವ್ಯಪ್ರವಾಹದ ಕಾಂತಿಪ್ರವಾಹ. ಭಾವರಸಬಿಂದುವಿನಿಂದ ಮನನ ಪ್ರಭಾವಿಕಿರಣ ; ಪುನಃ ಅದು ಭಾವರಸಬಿಂದುವಿನಲ್ಲಿ ಕೇಂದ್ರೀಕೃತ ; ಆ ರಸಕೇಂದ್ರದಿಂದ ಮತ್ತೆ ಮನನ ಪ್ರಭಾವಿಕಿರಣ ; ಮತ್ತೆ ಅದರ ರಸಕೇಂದ್ರೀಕರಣ.

ಅಥವಾ ಮನನ ಕೇಂದ್ರದಿಂದ ರಸಪ್ರಭಾವಿಕಿರಣ; ಪುನಶ್ಚ ಮನನ ಕೇಂದ್ರೀಕರಣ— ಹೀಗೆ. ಕವಿಗೆ ವಿಶ್ವದೃಷ್ಟಿ ಅಗತ್ಯ. ಮತದೃಷ್ಟಿಯ ಆಂತರಂಗಿಕ ಸರ್ವಸಾಮಾನ್ಯ ಗ್ರಾಹ್ಯಾಂಶ ಬೇಕೇ ವಿನಾ ಬಹಿರಂಗದ ವಿವರಣೆ, ಕರ್ಮ ವಿವರ ಅನಗತ್ಯ. 'ಮಾನವೀಯತೆಯೆ ಸಾಹಿತ್ಯ.... ಮನುಷ್ಯಭಾವವೇ ರಸಾಧಿಷ್ಠಾನ' ಎನ್ನುತ್ತಾರೆ. ಜೊತೆಗೆ ರಾಷ್ಟ್ರ ಕ್ಷೇಮದ ದೃಷ್ಟಿಯೂ ಅಗತ್ಯ

'ಸಾಹಿತ್ಯ ಶಕ್ತಿ' ಕೃತಿಯ 'ಕಾವ್ಯೋಪಾಸನೆ' ಎಂಬ ಈ ಪ್ರಬಂಧ ಸಾಹಿತ್ಯಾಭ್ಯಾಸಿಗಳೆಲ್ಲರೂ ಅತ್ಯವಶ್ಯವಾಗಿ ಪರಿಭಾವಿಸಬೇಕಾದ ರಚನೆ.

'*ಜೀವನ ಸೌಂದರ್ಯ ಮತ್ತು ಸಾಹಿತ್ಯ*' ಆರು ಪ್ರಕರಣಗಳ ಸಂಗ್ರಹ. ನಾಲ್ಕು ಮುದ್ರಣ ಕಂಡಿದೆ. ಮಡಕೇರಿ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆಯ ಭಾಷಣವೇ ಒಂದು ಅಭ್ಯಾಸಯೋಗ್ಯ ಬರೆಹ. ಕನ್ನಡದ ಸಮಸ್ಯೆಯ ನಾನಾ ಮುಖಗಳ ಅವಲೋಕನ, ವಿಮರ್ಶೆ. 'ಸಾಹಿತ್ಯ ಮತ್ತು ವಿಜ್ಞಾನ' ಎಂಬ ಉಪನ್ಯಾಸದಲ್ಲಿ ಸಾಹಿತ್ಯದ ಧರ್ಮ, ಮತಭಾವನೆ, ಪುರುಷ ಪ್ರಯತ್ನಗಳ ವಿವರಣೆ ಇದೆ. ಪಾಶ್ಚಾತ್ಯರು ಪೌರುಷಕ್ಕೆ ಒತ್ತು ಕೊಟ್ಟವರು. ಅವರ ಸಾಧನೆ ನಮಗೆ ಸ್ಫೂರ್ತಿ ಒದಗಿಸಬೇಕು. ಈ ನಿಟ್ಟಿನಲ್ಲಿ ವಿಜ್ಞಾನದ ಧರ್ಮವನ್ನು ಅರಿತುಕೊಳ್ಳಬೇಕು ಎನ್ನುತ್ತಾರೆ. ವಿಜ್ಞಾನದ ಉಪದೇಶ "ಪೌರುಷಪ್ರಕಾರವಾದ, ಬುದ್ಧಿಪರಿಶ್ರಮವಾದ, ಮಾನವ ಪ್ರಯತ್ನವಾದ, ಪುರುಷಾಕಾರಯೋಗ, ಆತ್ಮಶಕ್ತಿಯೋಗ" ಎನ್ನುತ್ತಾರೆ. ಪ್ರಾಚೀನ ಭಾರತ ತತ್ತ್ವ ಜಿಜ್ಞಾಸೆಗೂ ಈ ಪಾಶ್ಚಾತ್ಯ ವಿಚಾರ ಸರಣಿಗೂ ಸಮನ್ವಯ ಮಾಡಲು ಪ್ರಯತ್ನಿಸುತ್ತಾರೆ. ಎರಡರ ಸಮನ್ವಯದಿಂದ ಮಾನವ ಕಲ್ಯಾಣ ಸಾಧನೆ. ನಮ್ಮ ಶಾಸ್ತ್ರಕಾವ್ಯ ಗ್ರಂಥಗಳ ಆಧಾರ, ಪಾಶ್ಚಾತ್ಯ ವಿಚಾರವಂತರ, ಕವಿ ವಿಜ್ಞಾನಿಗಳ ಆಧಾರ ಈ ಲೇಖನವನ್ನು ಪುಷ್ಟಗೊಳಿಸಿವೆ. ಸುಮುಖವಾಗಿ ಸಾಗುವ ಭಾಷೆ ಚಿಂತನೆಯನ್ನು ಹಗುರಾಗಿ ನಮ್ಮ ಮನಸ್ಸಿಗೆ ತಲುಪಿಸುತ್ತದೆ.

ಈಗಾಗಲೇ ನಾವು ನೋಡಿರುವಂತೆ 'ಜನಜೀವನ' ಡಿವಿಜಿಗೆ ಬಹುಮುಖ್ಯ. 'ಸಾಹಿತ್ಯ ಮತ್ತು ಜನಜೀವನ' ಈ ವಿಚಾರವನ್ನು ವಿವರಿಸುವ ಲೇಖನ. ಕಾವ್ಯದ ಸಫಲತೆ ಏನಿದ್ದರೂ ಜನಜೀವನ ವಿಕಾಸದಲ್ಲಿ. ಆದ್ದರಿಂದ ಕಾವ್ಯರಚನೆಯಲ್ಲಿ ಜನಪರ ದೃಷ್ಟಿ, ಸುಭಗಶೈಲಿ, ಭಾಷಾ ಮರ್ಯಾದೆಯನ್ನು ಬಿಡದ ಸರಳತೆ, ಆಧುನಿಕ ಬುದ್ಧಿಗೆ ಗ್ರಾಸ ಒದಗಿಸಬಲ್ಲ ಸಾಮರ್ಥ್ಯ ಎಲ್ಲ ಅಗತ್ಯ. "ಕಾವ್ಯಾಸಕ್ತಿ ಊಟ ನಿದ್ದೆಗಳ ಹಾಗೆ ದಿನಚರ್ಯೆಯ ಮುಖ್ಯ ಭಾಗವಾಗಬೇಕು" ಎನ್ನುತ್ತಾರೆ. 'ಭಾಷೆಯ ಸ್ವರೂಪ ಮತ್ತು ಸ್ವಭಾವ' ಭಾಷೆಯ ಹುಟ್ಟು ಬೆಳವಣಿಗೆ, ಉಪಯೋಗ

ಗಳನ್ನು ವಿವರಿಸುವ ಪ್ರೌಢ ಪ್ರಬಂಧ. "ಭಾಷೆಯ ಸಹಜಗುಣ ಮತ್ತು ಪೂರ್ವ ಸಂಪ್ರದಾಯ, ಅದರ ನೂತನ ಗ್ರಂಥಗಳ ವಸ್ತು ವಿಷಯಗಳ ಸ್ವಭಾವ, ನೂತನ ಗ್ರಂಥ ಲೇಖಕರ ಶಕ್ತಿ ಯುಕ್ತಿಗಳು"—ಈ ಮೂರು ಭಾಷಾಭಿವೃದ್ಧಿಯ ಮೂರು ಕಾಲುಗಳು ಎನ್ನುತ್ತಾರೆ. ಈ ಚಿಂತನವೇ 'ಭಾಷೆಯ ವ್ಯವಹಾರ ರೂಪಗಳು' ಪ್ರಬಂಧದಲ್ಲೂ ಮುಂದುವರಿದಿದೆ. 'ಸೌಂದರ್ಯ ಸಂಹಿತೆ' ಎಂಬ ಲೇಖನ ಡಿವಿಜಿಯವರ ಸೌಂದರ್ಯ ತತ್ತ್ವಜಿಜ್ಞಾಸೆಯ ಅಡಕವಾದ ಪ್ರತಿಪಾದನೆ. ಉಮರನ *ಒಸಗೆ, ಶ್ರೀಕೃಷ್ಣಪರೀಕ್ಷಣ, ಶೃಂಗಾರ ಮಂಗಳಂ* ಇತ್ಯಾದಿ ಕಾವ್ಯಪರಿಶೀಲನೆಯಲ್ಲಿ ನಾವು ಕಂಡ ಸೌಂದರ್ಯ ತತ್ತ್ವದರ್ಶನವೇ ಇಲ್ಲಿಯೂ ವಿವರಿಸಲ್ಪಟ್ಟಿದೆ. ಸೃಷ್ಟಿಯ ಸೌಂದರ್ಯ ಮಾನವನ ಅಂತರಂಗದ ಸೌಂದರ್ಯ, ಭಾವಾನುಭಾವಗಳ ಸೌಂದರ್ಯ, ಸೌಂದರ್ಯವನ್ನು ನೋಡುವ, ಅನುಭವಿಸುವ ಹೃದಯವಂತಿಕೆ, ಕಾವ್ಯದಿಂದ ಜೀವನದ ಹೋರಾಟದಲ್ಲಿ ಸಿಗುವಂಥ ಉತ್ಸಾಹ ಉಲ್ಲಾಸ—ಇವೆಲ್ಲದರ ಪ್ರಸ್ತಾಪವಿದೆ. "ಸೌಂದರ್ಯದ ಬೆಲೆಯನ್ನು ಅರಿತು ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳತಕ್ಕದ್ದು. ನಾನಾ ಸೌಂದರ್ಯಗಳ ಯೋಗ್ಯತಾ ತಾರತಮ್ಯಗಳನ್ನು ತಿಳಿದು ಅವನ್ನು ನಮ್ಮ ಜೀವನಕ್ಕೆ ಅನ್ವಯಪಡಿಸಿಕೊಳ್ಳುವುದೇ ಧರ್ಮರಹಸ್ಯ, ಸೌಂದರ್ಯವನ್ನು ಅಲ್ಲಗಳೆಯುವುದಲ್ಲ. ಈ ರಹಸ್ಯವನ್ನು ಬಿಚ್ಚಿ ತೋರಿಸಲು ಉತ್ತಮ ಕಾವ್ಯವೊಂದೇ ಸಾಧಾರಣ ಮಾನವರಿಗಿರುವ ಸಾಧನ" ಎನ್ನುತ್ತಾರೆ ಡಿವಿಜಿ. ನಮ್ಮ ಹಿಂದಿನ ಶಾಸ್ತ್ರ ಕಾವ್ಯಗಳಲ್ಲಿ, ವೇದೋಪನಿಷತ್ತಿನಲ್ಲಿ, ಜೀವನೋತ್ಸಾಹ, ಸೌಂದರ್ಯಪ್ರಜ್ಞೆ, ರಸದೃಷ್ಟಿ ಹೇರಳವಾಗಿದೆ ಎನ್ನುವುದನ್ನು ಡಿವಿಜಿ ಎತ್ತಿ ತೋರಿಸುತ್ತಾರೆ. ಆದರೆ "ಈಚಿನ ಮತಾಚಾರ್ಯರು 'ಜಗತ್ತು ಅನಿತ್ಯ, ಜೀವನ ಅಸಾರ' ಎಂದು ಬೋಧಿಸುವುದಕ್ಕೆ ಕೊಟ್ಟಷ್ಟು ಗಮನವನ್ನು 'ಜಗತ್ತು ಅನಿವಾರ್ಯ, ಜೀವನೋತ್ಕರ್ಷವು ಪ್ರಯತ್ನಸಾಧ್ಯ' ಎಂದು ಬೋಧಿಸಲು ಕೊಡದೇ ಹೋದರು. ದೇಹವು ನೀರ್ಗುಳ್ಳೆಯೆಂದು ಸಾರಿ, ದೇಹವೊಂದೇ ನಮಗಿರುವ ಸರ್ವಸಾಧನವೆಂಬುದನ್ನು ಮರೆಯಿಸಿದರು. ವಿರಕ್ತಿಯನ್ನು ಕಲ್ಪಿಸ ಹೊರಟು ಜನವನ್ನು ನಿರುತ್ಸಾಹದಲ್ಲಿ ಕೆಡವಿದರು"—ಇದು ಡಿವಿಜಿಯವರ ಆಕ್ಷೇಪಣೆ. ಈ ನಿರುತ್ಸಾಹವನ್ನು, ಈ ಅಸಹಜವಾಗಬಹುದಾದ ವಿರಕ್ತಿಯನ್ನು ಬಿಟ್ಟು, ನಿಜವಾದ ಆನಂದೋತ್ಸಾಹದಿಂದ ಬದುಕೋಣ ಎನ್ನುವುದು ಅವರ ಪ್ರತಿಪಾದನೆ. 'ಗೀತಾಭಾಷ್ಯ' ಹಾಗೂ ಕಗ್ಗಗಳಲ್ಲಿ, ಇನ್ನಿತರ ಸಾಹಿತ್ಯದಲ್ಲಿ ಬಂದಿರುವ ತತ್ತ್ವವೇ ಇದು ಈ ವಿಚಾರಾದಿಗಳಿಂದ ಈ ಕೃತಿ ಸಾಹಿತಿಗಳಿಗಷ್ಟೇ ಅಲ್ಲ, ಎಲ್ಲರಿಗೂ ಅಧ್ಯಯನ ಯೋಗ್ಯವಾಗಿದೆ.

'ಕಾವ್ಯಸ್ವಾರಸ್ಯ' ಎಂಬ ಕೃತಿ ಒಂಬತ್ತು ಪ್ರಬಂಧಗಳ ಸಂಕಲನ. ಸೌಂದರ್ಯ, ರಸ; ಇವುಗಳ ವಿವೇಚನೆ ಮತ್ತೆ ನಡೆದಿದೆ. "ನಮ್ಮ ದೇವಾಲಯಗಳು ಮೂರು ತೆರದ ಸೌಂದರ್ಯವನ್ನು ಬೀರುತ್ತವೆ, ಒಂದು ಹೊರಗಿನ ಪರಿಸರದ ಸೃಷ್ಟಿಸೌಂದರ್ಯ, ಅಮಾನುಷ ಸೌಂದರ್ಯ. ಗುಡಿಯ ಒಳಗಡೆ ಮಾನುಷ ಕಲಾವೈಭವದ ಸೌಂದರ್ಯ. ಮೂರನೆಯದು ಜೀವ–ದೈವ ಸಮಾಗಮದ ಭಾವ ಸೌಂದರ್ಯ. ಇದು ಸೌಂದರ್ಯ ತ್ರಿಕೂಟ." 'ಸಹಿತತೆಯಿಂದ ಸಾಹಿತ್ಯ' ಎಂಬ ಲೇಖನದಲ್ಲಿ ಸಾಹಿತ್ಯಕ್ಕೆ ಹತ್ತು ಸೂತ್ರಗಳನ್ನು ಹೇಳುತ್ತಾರೆ. ಪ್ರತಿಭೆ, ಲೋಕಪರಿಜ್ಞಾನ, ಶಾಸ್ತ್ರವ್ಯುತ್ಪತ್ತಿ, ಪೂರ್ವಕವಿ ಸಂಪ್ರದಾಯ, ವ್ಯಾಸಂಗ, ರಚನಾಭ್ಯಾಸ, ಶಬ್ದವರ್ಣನೆ, ಕತೆ ಇತ್ಯಾದಿಗಳ ಪರಿಕರ, ಶೈಲಿಯ ಓಜಸ್ಸು, ರಸಗಳು, ಶಬ್ದಾರ್ಥಸೌಂದರ್ಯ, ಲೋಕೋತ್ತರದ ಪ್ರಸ್ತಾಪ, ಮಾನುಷ ಜೀವನ ಸಾಮಗ್ರಿಯ ಸರ್ವಾಂಶಗಳು, ಮನಃಪರಿಪಾಕಕ್ಕೆ ಸಾಧಕವಾದ ಜ್ಞಾನೋಪಕರಣ—ಈ ಎಲ್ಲದರ ಸಹಿತವಾಗಿರುವುದೇ ಸಾಹಿತ್ಯ ಎನ್ನುತ್ತಾರೆ. 'ಷೇಕ್ಸ್‌ಪಿಯರ್‌ಗೆ ನಮಸ್ಕಾರ', 'ಮಹಾಭಾರತದ ಪಾತ್ರಗಳು' ಆಯಾ ಕವಿಕೃತಿಗಳ ಹೃದಯ ವಿಮರ್ಶಾ ಲೇಖನಗಳು. ಮಹಾಭಾರತದ ಹಲವು ಪ್ರಸಂಗಗಳ, ಹಲವು ಪಾತ್ರಗಳ ವಿಮರ್ಶೆ, ಕೃತಿಯ ಅವಗಾಹನೆಗೆ ಒಳ್ಳೆಯ ಹಿನ್ನೆಲೆಯನ್ನು ಒದಗಿಸುತ್ತದೆ. ಪುಸ್ತಕದ ಅರ್ಧಕ್ಕಿಂತಲೂ ದೀರ್ಘವಾದ ಈ ಲೇಖನ ಮಹಾಭಾರತದ ಬಗ್ಗೆ ಸೂಕ್ಷ್ಮದೃಷ್ಟಿಯ, ಸಹೃದಯೀ ವಿಮರ್ಶೆ. ಭಾರತದ ಪಾತ್ರಗಳ ಅಂತರಂಗಕ್ಕೆ ಕನ್ನಡಿ. ಅಲ್ಲಿನ ಧರ್ಮಸೂಕ್ಷ್ಮಗಳ ಭಾವನೆಗಳ ತಾಕಲಾಟವನ್ನು, ಕರ್ತವ್ಯಗಳನ್ನು ವಿಧಿಮಹಿಮೆಯನ್ನು, ಜೀವನ ಧರ್ಮ ದರ್ಶನವನ್ನು ಡಿವಿಜಿ ಸೊಗಸಾಗಿ ಬಣ್ಣಿಸುತ್ತಾರೆ. "ಭಾರತ ಗ್ರಂಥವನ್ನು ಆದ್ಯಂತವಾಗಿ ನೋಡಿದರೆ ನಮ್ಮಲ್ಲುಂಟಾಗುವುದು ಮೂಕ ಮನನ–ಜೀವನರಹಸ್ಯವನ್ನು ಕುರಿತು ಮನನ; ಉಲ್ಲಾಸವಲ್ಲ, ಚಿಂತಾಪರಂಪರೆ."

"ಕಾವ್ಯಾನಂದ, ಮಾನವ ಸ್ವಭಾವ ಪರಿಚಯ, ಜೀವನ ಧರ್ಮ ದರ್ಶನ– ಈ ಮೂರು ಭಾರತ ಮನನದಿಂದಾಗುವ ಪ್ರಯೋಜನಗಳು." 'ಕಾವ್ಯವು ಸ್ವಭಾವೋಲ್ಲಾಸ' ಎಂಬ ಚಿಕ್ಕ ಲೇಖನ "ಕಾವ್ಯದ ಗುರಿ ಆತ್ಮಸಂತೋಷ" ಎಂದು ಪ್ರತಿಪಾದಿಸುತ್ತದೆ.

ಮಹಾಭಾರತದ ಈ ವಿಮರ್ಶೆ ಒಂದೇ ಲೇಖನದಲ್ಲಿ ಬಂದರೆ, ರಾಮಾಯಣವನ್ನು ಕುರಿತು ಡಿವಿಜಿ ಮಾಡಿರುವ ಆಲೋಚನೆ, ವಿದ್ವಾನ್ ರಂಗನಾಥಶರ್ಮರ ರಾಮಾಯಣ ಅನುವಾದದ ಪ್ರತಿ ಕಾಂಡಕ್ಕೂ ಅವರು ಬರೆದ ಮುನ್ನುಡಿಯಲ್ಲಿ ಹರಿದುಬಂದಿದೆ. ಡಿವಿಜಿಯವರ ಎಷ್ಟೋ ಮುನ್ನುಡಿಗಳೇ ಸ್ವಾರಸ್ಯಕರವೂ, ಗಮ

ನಾರ್ಹವೂ ಆದ ಲೇಖನಗಳು, ಅವು ಕೇವಲ ಪ್ರಾಸ್ತಾವಿಕ ಪ್ರಾಸಂಗಿಕ ಬರೆಹಗಳಲ್ಲ. ಅಧ್ಯಯನ–ಆಲೋಚನೆ ಇಲ್ಲದೆ ಡಿವಿಜಿ ಏನನ್ನೂ ಬರೆಯರು. ರಾಮಾಯಣದ ಮುನ್ನುಡಿಗಳು ಆದಿಕಾವ್ಯದ ಬಗ್ಗೆ ಉತ್ತಮ ಪರಾಮರ್ಶೆ. ಅಲ್ಲಿನ ಕಾವ್ಯೋದ್ದೇಶ, ಕತೆ, ಪಾತ್ರಗಳು, ಧರ್ಮಸೂಕ್ಷ್ಮಗಳು, ಭಾವಸಂಘರ್ಷಗಳು, ಮಾನವ ಜೀವಿತದ ಪರಾಮರ್ಶೆ, ಕಥಾಸ್ವಾರಸ್ಯ, ವೈಚಾರಿಕ ನೆಲೆಗಳು, ಕಾವ್ಯಪ್ರಯೋಜನ—ಇತ್ಯಾದಿ ಹಲವು ದೃಷ್ಟಿಗಳಿಂದ ರಾಮಾಯಣವನ್ನು ಪರಿಚಯಿಸುತ್ತವೆ. ಶ್ರೀ ಶರ್ಮರ ಸುಂದರ ಅನುವಾದದ ಸೌಧಕ್ಕೆ ಈ ಮುನ್ನುಡಿಗಳು ಸೊಗಸಾದ ಸಿಂಗಾರ ತೋರಣಗಳಾಗಿವೆ. ಈ ಮುನ್ನುಡಿಗಳ ಅಧ್ಯಯನ ರಾಮಾಯಣ ಹೃದಯ ಪರಿಚಯಕ್ಕೆ ಸಹಾಯಕ. ಡಿವಿಜಿಯವರ ಶಾಸ್ತ್ರಜ್ಞಾನ, ಶ್ರದ್ಧೆ, ವಿಮರ್ಶಾಬುದ್ಧಿ, ಕಾವ್ಯಜ್ಞಾನ, ಲೋಕಜ್ಞಾನಗಳಿಗೆ ನಿದರ್ಶನ.

ಡಿವಿಜಿ ವಾಙ್ಮಯ ವಾರಿಧಿಯ ಪರಿಚಯಯಾನದಲ್ಲಿ ಉಳಿದಿರುವುದು ಇನ್ನೊಂದು ಘಟ್ಟ ಮಹಾ ಘಟ್ಟ ಅದು '*ಜ್ಞಾಪಕ ಚಿತ್ರಶಾಲೆ*' ಎಂಬ ಎಂಟು ಗ್ರಂಥಗಳ ಗುಚ್ಛ. ಡಿವಿಜಿಯವರು ತಮ್ಮ ಪರಿಣತ ವಯಸ್ಸಿನಲ್ಲಿ ಪ್ರಾಂಜಲ ಮನಸ್ಸಿನಿಂದ ಮಾಡಿದ ಬರೆವಣಿಗೆ ಈ ಕೃತಿ ಮಾಲೆ. ಇಲ್ಲಿನ ನೆನಪಿನ ಚಿತ್ರಗಳು ಪತ್ರಿಕೆಗಳಲ್ಲಿ ಆಗಾಗ ಬಂದು. ಅನಂತರ ಪುಸ್ತಕಗಳಾಗಿ ಬಂದವು. 1969ರಿಂದ 1974ರ ಅವಧಿಯಲ್ಲಿ ಏಳು ಸಂಪುಟಗಳು ಬಂದವು. '*ಸಾಹಿತಿ ಸಜ್ಜನ ಸಾರ್ವಜನಿಕರು*', '*ಕಲೋಪಾಸಕರು*', '*ಸಾಹಿತ್ಯೋಪಾಸಕರು*', '*ಮೈಸೂರಿನ ದಿವಾನರುಗಳು*', '*ವೈದಿಕಧರ್ಮ ಸಂಪ್ರದಾಯಸ್ಥರು*', '*ಹಲವಾರು ಸಾರ್ವಜನಿಕರು*' ಮತ್ತು '*ಹೃದಯ ಸಂಪನ್ನರು*'. ಎಂಟನೆಯ ಸಂಪುಟ '*ಸಂಕೀರ್ಣ ಸ್ಮೃತಿ ಸಂಪುಟ*' ಅವರ ನಿಧನಾನಂತರ 1977ರಲ್ಲಿ ಪ್ರಕಟವಾಯಿತು.

ಈ ಕೃತಿಮಾಲೆಯ ಒಂದು ಜೀವನ ಪೂರ್ಣಕಾಲದ ಸಾಧನೆ ಎನ್ನುವಂಥದು. ಈ ಎಂಟು ಸಂಪುಟಗಳ ಒಟ್ಟು ಪುಟ ಸಂಖ್ಯೆ 2046. ಲೇಖನಗಳ ಸಂಖ್ಯೆ 185. ಇವೆಲ್ಲ ನೆನಪಿನ ಚಿತ್ರಗಳು. ತಾವು ಕಂಡಿದ್ದ ಕೇಳಿದ್ದ ಪ್ರಸಂಗಗಳನ್ನು, ವ್ಯಕ್ತಿಗಳನ್ನು, ಸಂಸ್ಥೆಗಳನ್ನು ಡಿವಿಜಿ ಚಿತ್ರಿಸಿದಾರೆ. ತನ್ಮೂಲಕ ಆ ಕಾಲದ ಸಂಸ್ಕೃತಿಯನ್ನೇ ದಾಖಲು ಮಾಡಿದ್ದಾರೆ. ಸುಮಾರು 70–80 ವರ್ಷಗಳ ಹಿಂದಿನ ಜನಜೀವನ, ಸಾರ್ವಜನಿಕ ಜೀವನ, ಆ ಜನರ ಶೀಲಸ್ವಭಾವಗಳು, ಆ ಜನರನ್ನು ಪ್ರಭಾವಿಸಿದ ಭಾವಾನುಭವಗಳು, ಅಂದಿನ ಜೀವನ ಮೌಲ್ಯಗಳು, ಒಟ್ಟಿನಲ್ಲಿ ಅಂದಿನ ಇತಿಹಾಸವೇ ನಾಗರಿಕ ಜೀವನದ ಬೀಸುನೋಟವೇ ಇಲ್ಲಿ ಚಿತ್ರಣಗೊಂಡಿದೆ. ಡಿವಿಜಿ ಅವರ ಅನುಭವ ವಿಶಾಲ, ವ್ಯಾಪಕ. ಅರಮನೆ ಗುರುಮನೆಗಳಿಂದ ಹಿಡಿದು ಪೇಟೆಗಲ್ಲಿಯ

ಮುರುಕಲು ಮನೆಯವರೆಗೆ, ದಿವಾನರುಗಳಿಂದ ಹಿಡಿದು ರಸ್ತೆಬದಿಯಲ್ಲಿ ಅನ್ನ ಬೇಯಿಸಿಕೊಳ್ಳುವ ದರಿದ್ರರವರೆಗೆ, ಮಠಾಧಿಪತಿಗಳಿಂದ ಹಿಡಿದು ಫಕೀರರವರೆಗೆ, ರಾಜಕೀಯ ಗೊಂದಲ ಕೋಲಾಹಲದಿಂದ ಹಿಡಿದು ಸಾಂಸಾರಿಕ ಇರಸು ಮುರಸುಗಳವರೆಗೆ, ವೈದಿಕರಿಂದ ಹಿಡಿದು ತಾಫೆಯವರವರೆಗೆ, ವಿದ್ವಾಂಸರಿಂದ ಹಿಡಿದು ಹಳ್ಳಿಮುಕ್ಕರವರೆಗೆ—ಡಿವಿಜಿಯವರ ಪರಿಚಯ ಅಪಾರ. ಎಲ್ಲರನ್ನೂ ಡಿವಿಜಿ ಅಷ್ಟೇ ಆಸ್ಥೆಯಿಂದ, ಅಕ್ಕರೆಯಿಂದ, ಅಭಿಮಾನದಿಂದ ಚಿತ್ರಿಸುತ್ತಾರೆ. ಚಿತ್ರಣಗೊಂಡಿರುವ ವ್ಯಕ್ತಿ ದೊಡ್ಡವರಾಗಲಿ, ಚಿಕ್ಕವರಾಗಲಿ, ಡಿವಿಜಿಯವರ ಆದರ ಒಂದೇ ಬಗೆಯದು. ಆತ್ಮೀಯತೆ ಒಂದೇ ಮಟ್ಟದ್ದು. ಈ ಚಿತ್ರಣಗಳಲ್ಲಿ ಎದ್ದುಕಾಣುವ ಗುಣ ಇದು. ಹೃದಯ ಪ್ರಸನ್ನತೆ, ಗುಣಗ್ರಾಹಕ ರಸಿಕತೆ. ದೋಷಗಳ ಓರೆಕೋರೆಗಳ ಪ್ರಸ್ತಾಪ ಇಲ್ಲ ಎಂದಲ್ಲ. ಆದರೆ ನಮಗೆ ಪ್ರಸ್ತುತ ಯಾವ ವಿಷಯ, ಯಾವ ಗುಣ, ಅದರ ಕಡೆಗೇ ಡಿವಿಜಿ ದೃಷ್ಟಿ. ಓರೆಕೋರೆ ಇದ್ದರೆ ಇರಲಿ., ಯಾರಲ್ಲಿ ಇಲ್ಲ. ಅದನ್ನೇ ನೋಡುತ್ತ ಹಿಗ್ಗಿಸುತ್ತ ಇದ್ದರೆ ನಮಗೆ ಬಂದ ಲಾಭವೇನು? ಅದನ್ನು ಗಮನಿಸೋಣ. ಅಲ್ಲಿಗೆ ಬಿಡೋಣ. ವ್ಯಕ್ತಿಯ ಗುಣ ಮೌಲ್ಯದತ್ತ ನೋಡೋಣ. ಅಲ್ಲಿ ಕಲಿಯಬೇಕಾದ್ದು, ತಿಳಿಯಬೇಕಾದ್ದು ಏನಿವೆಯೊ ನೋಡೋಣ, ಕಲಿಯೋಣ, ತಿಳಿಯೋಣ—ಇದು ಡಿವಿಜಿ ಮನೋಭಾವ. ಈಗ ಕಾಣದ, ಸಿಗದ ಕಾಲ, ಕಾಣಸಿಗದ ವ್ಯಕ್ತಿಗಳು, ಪ್ರಸಂಗಗಳು ಇಲ್ಲಿ ದಾಖಲಾಗಿವೆ. ಇಂದಿಗೂ ನಮ್ಮನ್ನು ರಂಜಿಸುತ್ತವೆ. ಕೆಲವು ಅನುಭವಗಳು, ಶೀಲ ಚಿತ್ರಣಗಳು, ಇಂದಿಗೂ ಪ್ರಸ್ತುತವೇ ಆಗಿವೆ. ಕೆಲವು ಚಿತ್ರಗಳು ಇಂದು ಕಲ್ಪನೆಯ ಕತೆ ಎಂದೇ ತೋರಿಯಾವು. ಆದರೂ ಸತ್ಯ. ಆ ಕಳೆದುಹೋದ ನೆನ್ನೆಯ ಪ್ರಪಂಚ ನಮ್ಮ ಕಣ್ಣಮುಂದೆ ಜೀವಂತವಾಗಿ ನಲಿದು ತೋರುತ್ತದೆ ಇಲ್ಲಿ. ಚಲನಚಿತ್ರದಂತೆ ಒಂದಾದ ಮೇಲೊಂದು ಚಿತ್ರಗಳು ಕಣ್ಣಿಗೆ ಕಟ್ಟುತ್ತವೆ. ಮನಸ್ಸಿಗೆ ತಟ್ಟುತ್ತವೆ. ನೂರಾರು ವ್ಯಕ್ತಿಗಳು, ನೂರಾರು ಘಟನೆಗಳು, ನೂರಾರು ಮಾತುಗಳು, ಹತ್ತಾರು ಸಂಘ–ಸಂಸ್ಥೆಗಳು. ಇಲ್ಲಿನ ವಿಷಯ ವೈವಿಧ್ಯ, ಅನುಭವ ವಿಸ್ತಾರ, ನೆನಪಿನ ಹರವು ಬೆರಗುಗೊಳಿಸುತ್ತವೆ. ಇದೊಂದು ಯುಗಚಿತ್ರಣ. ಡಿವಿಜಿ ಅಂಥವರಿಂದ ಮಾತ್ರ ಸಾಧ್ಯ. ವ್ಯಾಸರು ಭಾರತದಲ್ಲಿ ಪಾರವಿಲ್ಲದ ಪಟದ ಮೇಲೆ ಸಾವಿರಾರು ವ್ಯಕ್ತಿಗಳ ಚಿತ್ರಗಳನ್ನು ಮೂಡಿಸಿದರು. ಲೋಕಜೀವನ ಸಮಷ್ಟಿಯನ್ನು ಚಿತ್ರಿಸಿದರು. ಇಹ–ಪರ ಎರಡನ್ನೂ ತೋರಿಸಿದರು. ಡಿವಿಜಿಯವರ ಜ್ಞಾಪಕ ಚಿತ್ರಶಾಲೆ ಆ ಚಿತ್ರಪಟದ ಹರವನ್ನು, ಆ ವಿಷಯ ವೈವಿಧ್ಯವನ್ನು, ಆ ನಿರ್ಲಿಪ್ತತೆಯನ್ನು ನೆನಪಿಗೆ ತರುತ್ತದೆ. ಇದು ಕತೆಗೆ ಕತೆ, ಇತಿಹಾಸಕ್ಕೆ ಇತಿಹಾಸ, ವರ್ಣನೆಗೆ ವರ್ಣನೆ.

ವ್ಯಕ್ತಿಚಿತ್ರಕ್ಕೆ ವ್ಯಕ್ತಿಚಿತ್ರ. ಅಲ್ಲಲ್ಲಿ ಪ್ರಾಸಂಗಿಕಾಗಿ ಆತ್ಮಚಿತ್ರಣದ ಸುಳಿವುಗಳೂ ಮಿಂಚುತ್ತವೆ. ಅದು ಅಪರೂಪ. ಡಿವಿಜಿಗೆ ತಮ್ಮ ಬಗ್ಗೆ ಹೇಳಿಕೊಳ್ಳಲು ತೀರ ಸಂಕೋಚ. ವಿಧಿಯಿಲ್ಲದಾಗ ಪ್ರಸ್ತಾಪ ಮಾಡುತ್ತಾರೆ ಅಷ್ಟೆ. ದಿವಾನ್ ವಿಶ್ವೇಶ್ವರಯ್ಯ ಮಿರ್ಜಾರ ಕತೆಗಳು, ಮುಳುಬಾಗಲಿನ ಅಜ್ಞಾತ ಕಲಾವಿದರ ಕತೆಗಳು, ಬೆಂಗಳೂರಿನ ಸಜ್ಜನರ ವಿದ್ವಾಂಸರ ಚರಿತ್ರೆಗಳು, ಬೆಳ್ಳಾವೆ ವೆಂಕಟನಾರಣಪ್ಪ, ತಳುಕಿನ ವೆಂಕಣ್ಣಯ್ಯ ಇತ್ಯಾದಿ ನುಡಿಸೇವಕರ ಚಿತ್ರಗಳು ಹೃದಯ ತುಂಬುತ್ತವೆ. ನಮ್ಮ ಹೃದಯ ಸಂಪನ್ನತೆಯನ್ನು ಹೆಚ್ಚಿಸುತ್ತವೆ.

ಈ ಕೃತಿಮಾಲೆಗೆ ಡಿವಿಜಿ ಬರೆದರುವ ಉಪೋದ್ಘಾತ ವ್ಯಕ್ತಿಚರಿತೆಯ ಇತಿಮಿತಿಗಳ ವಿವರಣೆ. ದೇಶ ಚರಿತ್ರೆ ವ್ಯಕ್ತಿ ಚರಿತ್ರೆ ಎರಡೂ ವಿರಳ. ಎರಡನ್ನೂ ಇಲ್ಲಿ ಡಿವಿಜಿ ನಮಗೆ ಕೊಟ್ಟಿದಾರೆ. "ಈ ಪ್ರಬಂಧಗಳು ಚರಿತ್ರೆಯಲ್ಲ. ಇವು ಆಯಾ ಮಹನೀಯರ ಮುಖಗಳ ಪಾರ್ಶ್ವರೇಖೆಗಳು. ಇವು ಜೀವನ ಚರಿತ್ರಕಾರನಿಗೂ, ದೇಶ ಚರಿತ್ರಕಾರನಿಗೂ, ಅಷ್ಟಿಷ್ಟು ಉಪಯುಕ್ತವಾಗಬಹುದಾದ ಕಚ್ಚಾ ಸಾಮಗ್ರಿ" ಎಂದು ಡಿವಿಜಿ ಹೇಳಿಕೊಂಡಿರುವುದು ಅವರ ವಿನಯದ ಮಾತು. ವಾಸ್ತವವಾಗಿ ಇಲ್ಲಿ ಓದುಗನಿಗೆ ಆ ಯುಗದ ಬಗ್ಗೆ ಯಥೇಚ್ಛವಾದ ಅನುಭವ ಸಿಗುತ್ತದೆ. ಇದು ಕೇವಲ ಚರಿತ್ರೆಯಲ್ಲ ನಿಜ. ಆದರೆ ಚರಿತ್ರೆ ಇಲ್ಲದೆಯೂ ಇಲ್ಲ. ಚರಿತ್ರೆ ಎಂದರೆ ನಮ್ಮಲ್ಲಿ ಇರುವ ಭಾವನೆ ರಾಜಮಹಾರಾಜರ ಏಳು ಬೀಳು, ಯುದ್ಧ ಆಕ್ರಮಣಗಳು. ವಾಸ್ತವವಾಗಿ ಲೋಕ ಜೀವನ, ಜನಜೀವನವೆಲ್ಲ ಚರಿತ್ರೆಯೆ. ಅಂಥ ಜೀವನಚರಿತ್ರೆಯನ್ನೇ ಡಿವಿಜಿಯವರಲ್ಲಿ ನಾವು ಕಾಣುವುದು.

ಈ ಕೃತಿಮಾಲೆಗೆ ಇಟ್ಟಿರುವ ಹೆಸರೂ ಉಚಿತವೇ. 'ಜ್ಞಾಪಕ ಚಿತ್ರಶಾಲೆ'. ನಿಜಕ್ಕೂ ಇದು ಚಿತ್ರ ಶಾಲೆಯೆ. ಮೈಸೂರಿನ ಜಗನ್ಮೋಹನ ಬಂಗಲೆಯ ಹಾಗೆ. ಹಳೆಯ ಕಾಲದ ಸುರುಳಿಯನ್ನು ಬಿಚ್ಚಿ ನಮ್ಮ ಮುಂದೆ ತೆರೆದಿಡುತ್ತದೆ. "ಜ್ಞಾಪಕ ಚಿತ್ರಶಾಲೆ ಮಾಲೆಯ ಗ್ರಂಥಗಳು ಈ ಶತಮಾನದ ಕರ್ನಾಟಕದ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆ, ಚರ್ಚೆಗಳಿಗೆ ವಿಶೇಷವಾಗಿ ನೆರವಾಗ ಬಲ್ಲ ಆಕರಗಳು" ಎಂದಿದ್ದಾರೆ ಡಾ|| ಹಾ.ಮಾ.ನಾಯಕ (ಮುನ್ನುಡಿ–ಹಕ್ಕಿಯ ಪಯಣ) ನಿಜ. ಇವು ಆಕರ ಚರಿತ್ರೆಯೆ. ಆದರೆ ಕತೆಯ ರೂಪದಲ್ಲಿದೆ. ಆತ್ಮೀಯ ಚಿತ್ರಣವಾಗಿದೆ. ಒಣಕಲ ಚರಿತ್ರೆ ಅಲ್ಲ.

ಇಲ್ಲಿನ ಗದ್ಯ ವಿಶೇಷವಾದ ಆಕರ್ಷಕ ರೀತಿಯದು. ಹದವಾದ ಕನ್ನಡ, ಹಿತಮಿತವಾದ ನವಿರು ಹಾಸ್ಯ, ಸವಿಯಾಗಿ ಕತೆ ಹೇಳುವ ಸೊಗಸು, ತೀರ ಉದ್ದವೂ ಅಲ್ಲ, ತೀರ ಮೊಟಕೂ ಅಲ್ಲದ ವರ್ಣನೆ, ನೀರಸ ಎನಿಸದ ತತ್ತ್ವ ವಿಚಾರ

ಪ್ರತಿಪಾದನೆ, ವ್ಯಕ್ತಿಯ ಅಂತರಂಗ–ಹೊರಗಣ ಪರಿಸರ ಎರಡರಲ್ಲೂ ಓಡಿಯಾಡುವ ಸಮದೃಷ್ಟಿ ಉದಾಹರಣೆಯಾಗಿ ಬಂದು ರಂಜಿಸುವ, ಕೆಣಕುವ, ಮೆಲುಕು ಹಾಕಿಸುವ ಕಾವ್ಯ–ಶಾಸ್ತ್ರಖಂಡಗಳು, ಸಾಮತಿಗಳು—ಇವೆಲ್ಲ ಈ ಕೃತಿ ಮಾಲೆಯ ಆಕರ್ಷಣೆಯನ್ನು ಹೆಚ್ಚಿಸಿವೆ. ಈ ಮಾಲೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ಡಿವಿಜಿ ಕೊಟ್ಟಿರುವ ಅಪೂರ್ವವಾದ, ಅನನ್ಯವಾದ, ಅಮೂಲ್ಯವಾದ ಕೊಡುಗೆ ಎಂದರೆ ಯಾವ ಉತ್ಪ್ರೇಕ್ಷೆಯೂ ಇಲ್ಲ.

ಈ ಅವಲೋಕನ, ಡಿವಿಜಿ ವಾಙ್ಮಯ ವಾರಿಧಿಯ ದಡದಲ್ಲಿ ನಿಂತು ನೋಡಿದ ಒಂದು ಅನುಭವ ಅಷ್ಟೆ. ವಾರಿಧಿಯ ಪೂರ್ಣಾನುಭವಕ್ಕೆ ಅದರ ಆಳಕ್ಕೆ ಇಳಿಯ ಬೇಕು.

ಡಿವಿಜಿಯವರ ಗ್ರಂಥಗಳ ಕೆಲವು ವೈಶಿಷ್ಟ್ಯಗಳನ್ನು ನೋಡಬೇಕಾದ್ದು ಅವಶ್ಯ. ಒಂದು ಅವರ ಶೈಲಿ. ಪದ್ಯಗಳಲ್ಲಿ ಸರಳವಾದವೂ ಉಂಟು, ಪ್ರೌಢ ವಾದವೂ ಉಂಟು. ಹಾಡೂ ಉಂಟು. ಹಳೆಗನ್ನಡದ ಅನೇಕ ಅಪರೂಪದ ಛಂದೋ ಪ್ರಯೋಗಗಳೂ ಉಂಟು. ಸಂಸ್ಕೃತದ ಹೊರೆಯೂ ಉಂಟು, ಕನ್ನಡದ ಹಗುರವೂ ಉಂಟು. ಪಾಂಡಿತ್ಯದ ವೈಭವೂ ಉಂಟು. ಅನುಭವದ ಆಧಾರವೂ ಉಂಟು. ಶಾಸ್ತ್ರದ ಬಿಗಿಯೂ ಉಂಟು, ಭಾವುಕತೆಯ ಸೊಬಗೂ ಉಂಟು. ರಾಜಗಂಭೀರ್ಯವೂ ಉಂಟು, ತಿಳಿಯಾದ ನಡೆಯೂ ಉಂಟು. ಗದ್ಯದಲ್ಲೂ ಹಾಗೆಯೆ ಪ್ರೌಢಿಮೆ, ಗಾಂಭೀರ್ಯ, ಓಜಸ್ಸುಗಳ ಜೊತೆಗೇ ತಿಳಿಹಾಸ್ಯ, ಕತೆಗಾರಿಕೆ, ಸಹಜತೆ, ಸರಳತೆಗಳೂ ಉಂಟು.

ಎರಡನೆಯದಾಗಿ ಅವರ ಕೃತಿಗಳಲ್ಲಿನ ಮುನ್ನುಡಿ, ಅನುಬಂಧಗಳು. ಆಗಲೇ ನೋಡಿದಂತೆ ಮುನ್ನುಡಿಗಳೇ ಅಧ್ಯಯನಯೋಗ್ಯ ಪ್ರಬಂಧಗಳು. ಅನುಬಂಧ ಗಳಲ್ಲಿ ಪ್ರಸಂಗ ವಿವರಣೆಗಳು, ಸಂದರ್ಭ ಸೂಚಿಗಳು, ಕ್ಲಿಷ್ಟಪದಗಳ ಅರ್ಥಗಳು, ಉದಾಹರಣೆಗಳ ವಿವರಣೆಗಳು, ಉದಾಹೃತ ಪದ್ಯಗಳ ಅಕಾರಾದಿಗಳು ಇತ್ಯಾದಿ ಉಪಯುಕ್ತವೂ ಸಹಾಯಕವೂ ಆದ ಪರಿಕರ ಇರುತ್ತವೆ. ಇದು ತುಂಬ ವಿಶಿಷ್ಟ ಕನ್ನಡ ಪುಸ್ತಕಗಳಲ್ಲಿ ವಿರಳವಾದ ಪರಿಪಾಠ.

ಮೂರನೆಯದು ಡಿವಿಜಿ ಕೃತಿಗಳ ಶುದ್ಧತೆ, ಅಚ್ಚುಕಟ್ಟು ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ ಅಚ್ಚಿನ ತಪ್ಪುಗಳು. ಅಂದವಾದ ಮುದ್ರಣ. ಪುಟಪುಟ ದಲ್ಲೂ ಅಚ್ಚುಕಟ್ಟಿನ ಜೋಡಣೆ. ಸೊಗಸಾದ ಚಿತ್ರಗಳು, ಅಕ್ಷರವಿನ್ಯಾಸಗಳು. ಒಪ್ಪ ಓರಣ. ಡಿವಿಜಿಗೆ ಈ ಬಗ್ಗೆ ತುಂಬ ಕಾಳಜಿ. ಒಂದೊಂದು ಬರೆಹವನ್ನೂ ಹಲವು ಸಲ ಪರಿಶೀಲಿಸುವರು, ತಿದ್ದುವರು, ಅಚ್ಚಿನ ಕರಡುಗಳನ್ನು ಹಲವು ಸಲ

ತಿದ್ದುವರು. ಎಷ್ಟೋ ಸಲ ಐದಾರು ಪ್ರೂಫುಗಳನ್ನು ನೋಡುವರು. ಒಮ್ಮೊಮ್ಮೆ ಪದಗಳಲ್ಲಿ ವಾಕ್ಯಗಳಲ್ಲಿ ಬದಲಾವಣೆ ಮಾಡುವರು. ಒಂದೊಂದು ಆವೃತ್ತಿಯಲ್ಲೂ ಹೊಸ ವಿಷಯ ಸೇರಿಸುವರು. ಅಂದ ಚೆಂದವನ್ನು ಹೆಚ್ಚಿಸುವರು. ಆದಷ್ಟು ಪರಿಪೂರ್ಣವಾಗಿರಬೇಕು ಪುಸ್ತಕ ಎಂದು ಅವರ ಕಾತರ. ಬಡಪೆಟ್ಟಿಗೆ ಒಪ್ಪರು. ಪುಸ್ತಕದ ಮುದ್ರಣ, ಪ್ರಕಟಣದ ಗುಣಮಟ್ಟದಲ್ಲಿ ಅವರದು ಕಟ್ಟೆಚ್ಚರ. ಅಂತೆಯೆ ಅವರ ಕೃತಿಗಳ ಹೂರಣ ಎಷ್ಟು ರಸಪೂರ್ಣವೊ, ಪುಷ್ಟಿಕರವೊ, ಅವುಗಳ ಆವರಣವೂ ಅಷ್ಟೇ ಅಚ್ಚುಕಟ್ಟಿನದು, ಸೊಗಸಿನದು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಭೀಷ್ಮಸಮಾನರು ಡಿವಿಜಿ. "ಅತ್ಯುನ್ನತಿಯೊಳ್ ಅಮರ ಸಿಂಧೂದ್ಭವಂ'' ಅಲ್ಲವೇ?

I — [illegible]

# 15. ವ್ಯಕ್ತಿತ್ವ

ಉನ್ನತ ಚಿಂತನೆ, ಸರಳ ಜೀವನ—ಇದಕ್ಕೆ ಡಿವಿಜಿ ಉದಾಹರಣೆ. ಅವರ ಉನ್ನತ ಚಿಂತನೆಯ ಹೊಳಹುಗಳನ್ನು ಈವರೆಗೆ ಕಂಡಾಗಿದೆ. ಅವರಿಗೆ ಅನೇಕ ಉನ್ನತ ವ್ಯಕ್ತಿಗಳಲ್ಲಿ ಸಲಿಗೆಯ ಸ್ನೇಹ. ಅಧಿಕಾರಸ್ಥರು, ಐಶ್ವರ್ಯವಂತರು, ಪ್ರಭಾವಶಾಲಿಗಳು ಎಲ್ಲರೂ ಚಿರಪರಿಚಿತರೇ.  ಆದರೆ ಡಿವಿಜಿ ಈ ಸ್ನೇಹ ಸಲಿಗೆ ಪರಿಚಯಗಳನ್ನು ಕಿಂಚಿತ್ತೂ ತಮ್ಮ ಸ್ವಂತಕ್ಕೆ ಬಳಸಿಕೊಳ್ಳಲಿಲ್ಲ. ಸಮುದ್ರದ ನೆಂಟು ಉಪ್ಪಿಗೆ ಬಡತನ. ಬಹುಪಾಲು ಅವರು ಬಡತನದಲ್ಲೆ ಬದುಕಿದರು. ಬರೆಹವೇ ಬದುಕಿಗೆ ಆಧಾರ. ಬರೆಹದಿಂದ ಬಲ್ಲಿದನಾಗುವುದು ಕನ್ನಡದಲ್ಲಂತೂ ಕನಸು. ಅದೂ ಅಗ್ಗದ ಜನಪ್ರಿಯ ಕತೆ ಕಾದಂಬರಿಗಳನ್ನಾಗಲಿ, ಪಠ್ಯಪುಸ್ತಕವನ್ನಾಗಲಿ ಬರೆಯದೆ, ಡಿವಿಜಿಯ ಹಾಗೆ ತೂಕವಾದದ್ದನ್ನೇ ಬರೆದರೆ ಸಿರಿವಂತಿಕೆ ಕನಸಲ್ಲೂ ಅಸಾಧ್ಯ. ಅವರ ಹಲವು ಕೃತಿಗಳು ಪಠ್ಯಪುಸ್ತಕಗಳೇನೊ ಆದುದು ಉಂಟು. ಆದರೆ ಶ್ರೀಮಂತಿಕೆ ತರುವಷ್ಟು ಏನೂ ಅಲ್ಲ. ಕೃತಿಗಳಲ್ಲಿ ಹಲಕೆಲವು; ಕಗ್ಗ, ಅಂತಃಪುರ ಗಿತ, ನಿವೇದನ, ಸಾಹಿತ್ಯಶಕ್ತಿ, ಜೀವನ ಸೌಂದರ್ಯ–ಸಾಹಿತ್ಯ, ಉಮರನ ಒಸಗೆ, ಮುಂತಾದವೇನೊ ಹಲವು ಮುದ್ರಣ ಕಂಡವು. ಓದುಗರನ್ನೇ ನೆಚ್ಚಿದ ಡಿವಿಜಿಗೆ ನಿರಾಶೆ ಕೊಡಲಿಲ್ಲ. ಕಾರಣ ಅವರು ಬಡತನ ಸರಳತೆಗಳಿಗೆ ಒಲಿದಿದ್ದರು.

ಡಿವಿಜಿ ಸಾರ್ವಜನಿಕ ಕಾರ್ಯದಲ್ಲಿ ಸದಾ ಮುಳುಗಿದ್ದರೂ ಸಾಂಸಾರಿಕವಾಗಿ, ಸ್ನೇಹಿತರ ನಡುವೆ ತೀರ ಬಿಡುಬೀಸು. ನಕ್ಕು ನಗಿಸುವುದು, ಊಟೋಪಚಾರಗಳಲ್ಲಿ ಖುಷಿಯಿಂದ ಪಾಲುಗೊಳ್ಳುವುದು, ಹಬ್ಬ ಹುಣ್ಣಿಮೆ ಎಂದರೆ ಉತ್ಸಾಹ. ಮನೆಯಲ್ಲಿ ಎಲ್ಲರೊಂದಿಗೆ ಸಲಿಗೆ, ಸರಸತೆ. ಗೆಳೆಯರ ಕೂಟದಲ್ಲಿ ಡಿವಿಜಿ ವಿಚಾರದ ಮೊನಚು, ಹಾಸ್ಯದ ಹೊಳೆ, ಮಲಕುಗಳಿಂದ ವಿಜೃಂಭಿಸುವರು. ಅವರ ಮಾತಿನಲ್ಲಿ ಪ್ರಸನ್ನತೆಯೆ ಹೆಚ್ಚು. ಒಮ್ಮೊಮ್ಮೆ ಬಿಗಿ ಕಾಠಿನ್ಯ ಇಲ್ಲದಿಲ್ಲ. ಹಾಸ್ಯ ಒಮ್ಮೊಮ್ಮೆ ಚುಚ್ಚುತ್ತಿದ್ದುದೂ ಉಂಟು. ವಾದ ವಿವಾದ ಸಂವಾದ ಮೂರರಲ್ಲೂ ಖುಷಿ, ಹುರುಪು.

ಒಂಟಿತನ ಡಿವಿಜಿಯ ಬಾಹ್ಯ ಚಟುವಟಿಕೆಗಳಿಗೆ ಅಡ್ಡಿಯಾಗಲಿಲ್ಲ. ತಮ್ಮಲ್ಲಿ ತಾವು ಚಿಂತನ ಪರರು. ರಾತ್ರಿ ಬಹು ಹೊತ್ತಿನವರೆಗೂ ಗ್ರಂಥಾಭ್ಯಾಸ, ಚಿಂತನೆ. ತೋಚಿದ್ದನ್ನು ಆಗಲೇ ಬರೆದಿಡುವರು. ರಾತ್ರಿ ಯಾವಾಗಲೊ ಎದ್ದು ಬರೆಯುವುದು. ಪುಸ್ತಕಗಳಲ್ಲಿ ಗುರುತುಹಾಕಿರುವುದು, ಟಿಪ್ಪಣಿ ಮಾಡಿರುವುದು ಹೇರಳ.

ಡಿವಿಜಿಗೆ ಬದುಕಿನಲ್ಲಿ ತುಂಬ ಆಸ್ಥೆ, ಆಸಕ್ತಿ. ಬದುಕಿನ ಒಳಿತೇ ಅವರ ಜೀವನಾದರ್ಶ. "ಕಲೆಗಳಲಿ ಪರಮ ಕಲೆ ಜೀವನದ ಲಲಿತ ಕಲೆ". ಇದರಿಂದಾಗಿಯೆ ಅವರ ರಾಜಕೀಯ ಪತ್ರಿಕಾಕಾರ್ಯ, ಸಾಹಿತ್ಯ, ಕಲೆ, ಸೌಂದರ್ಯಚಿಂತನೆ, ಸಂಘಟನೆ, ಸಾರ್ವಜನಿಕ ಕಾರ್ಯ—ಎಲ್ಲವೂ ಬದುಕಿಗೆ ತಳುಕು ಹಾಕಿಕೊಂಡಿದ್ದನ್ನು ಈಗಾಗಲೇ ನೋಡಿದ್ದೇವೆ. ಒಳ್ಳೆಯ ಸಂಗೀತ, ಒಳ್ಳೆಯ ಊಟ, ಗೆಳೆಯರ ಕೂಟ, ಸರಸ ವಿನೋದದ ಮಾತು ಎಲ್ಲ ಅವರಿಗೆ ಇಷ್ಟ. ಅವುಗಳಲ್ಲಿ ಅವರು ತಲ್ಲೀನರಾಗಿ ಪಾಲುಗೊಳ್ಳುವರು. ಸಂಪ್ರದಾಯದಂತೆ ಅವರು ಅದ್ವೈತಿಗಳು. ಆದರೆ ಅದ್ವೈತದ ಮಾಯವಾದವನ್ನಾಗಲಿ, ಜಗತ್ತು ಮಿಥ್ಯೆ ಎಂಬುದನ್ನಾಗಲಿ ಅವರು ಒಪ್ಪಲಿಲ್ಲ. ಆ ವಾದಗಳಿಗೆ ತಾತ್ತ್ವಿಕ ಸಮರ್ಥನೆ ಇದ್ದಿರಬಹುದು. ಆದರೆ ವಾಸ್ತವಿಕವಾಗಿ ಅವನ್ನು ಒಪ್ಪಲು ಸಾಧ್ಯವಿಲ್ಲ. ಸತ್–ಚಿತ್–ಆನಂದ ಸ್ವರೂಪನಾದ ದೇವರ ಸೃಷ್ಟಿಯೂ ಸತ್ಯವೇ, ಆನಂದಮಯವೇ. ಕಣ್ಣೆದುರಿನ ಈ ಸತ್ಯ, ಜ್ಞಾನ, ಆನಂದಗಳನ್ನು ದೂರೀಕರಿಸುವುದು, ಕಾಣದ ಯಾವುದೊ ಒಂದಕ್ಕಾಗಿ ಹಂಬಲಿಸುವುದು ಡಿವಿಜಿಗೆ ಒಪ್ಪದು.

ಜೀವನವನ್ನು ಒಪ್ಪಿಕೊಳ್ಳುವುದು, ಅದರ ಒಳಿತಿಗಾಗಿ ದುಡಿಯುವುದು, ಆ ದುಡಿಮೆಯನ್ನು ಕರ್ತವ್ಯಬುದ್ಧಿಯಿಂದ ಧರ್ಮಸಮ್ಮತವಾದ ರೀತಿಯಲ್ಲಿ, ಸ್ವಾರ್ಥ ಸ್ಪರ್ಶವಿಲ್ಲದೆ ಮಾಡುವುದು, ಫಲಾಫಲಗಳ ಬಗ್ಗೆ ನಿರ್ಲಿಪ್ತತೆ, ಬದುಕನ್ನು ಹಸನುಗೊಳಿಸುವ ಈ ಕಾರ್ಯದಲ್ಲಿ ಸಮತೂಕ ಸಮಚಿತ್ತತೆ, ಸಮನ್ವಯದ ರೀತಿ, ಎದುರಾಳಿಯ ವಿಚಾರಕ್ಕೂ ಮನ್ನಣೆ ಕೊಡಬೇಕಾದ ಔದಾರ್ಯ, ಸಂಪ್ರದಾಯದ ರೀತಿ ನೀತಿಗಳಿಗೆ ಗೌರವ, ಬದಲಾವಣೆಗೆ ತೆರೆದ ಮನಸ್ಸು, ಒತ್ತಡದ ಕ್ರಾಂತಿಗಿಂತ ಸಹಜವಾಗಿ ಮೂಡುವ ಪರಿವರ್ತನೆಯತ್ತ ಆಸಕ್ತಿ, ವ್ಯಕ್ತಿಜೀವನ–ಲೋಕಜೀವನಗಳಲ್ಲಿ ಸಮನ್ವಯ, ಈಶನಿಷ್ಠೆ, ದೇಶನಿಷ್ಠೆ—ಇದು ಅವರ ಜೀವನ ದರ್ಶನ.

ಈ ಪ್ರವೃತ್ತಿ ಮನೋಭಾವದ ಜೊತೆಗೇ ಡಿವಿಜಿಯವರ ಅಂತರಂಗದಲ್ಲಿ ನಿವೃತ್ತಿ ಮಾರ್ಗದತ್ತ ಒಲವೂ ಇದ್ದುದು ಸ್ವಾರಸ್ಯಕರ. ಸಂನ್ಯಾಸಿ ಆಗಬೇಕೆಂಬ ಯೋಚನೆಯೂ ಆಗಾಗ ಬಂದಿತ್ತಲ್ಲವೇ. ಹೊರಗಿನ ಎಲ್ಲ ಆಸೆ ಮೋಹಗಳನ್ನು,

ಸಂಕೋಲೆಗಳನ್ನು ಕಳೆದುಕೊಂಡು, ಹಕ್ಕಿಯಂತೆ ಹಾಯಾಗಿ ಇರಬೇಕೆಂಬ ಅವರ ಹಂಬಲಕ್ಕೆ 'ಹಕ್ಕಿಯ ಪಯಣ' ಎಂಬ ಪ್ರಬಂಧ ಸಾಕ್ಷಿ. ಅವರ ಜೀವನ ದರ್ಶನದ ಇನ್ನೊಂದು ಮುಖ. ಇದನ್ನು ಡಿವಿಜಿ ಹಾಸ್ಯವಾಗಿ 'ತೊಂಡುತನ' ಎನ್ನುತ್ತಾರೆ. ಯಾವ ಹೊಣೆಗೂ ತಲೆಕೊಡದೆ ಮನ ಬಂದಂತೆ ತಿರುಗುವುದು. ತಮ್ಮಲ್ಲಿ ಇದ್ದ 'ಅಂಜುಬುರುಕುತನ' ಈ ತೊಂಡಿಗೆ ಕಡಿವಾಣ ಹಾಕಿತು ಎನ್ನುತ್ತಾರೆ. ಸಂನ್ಯಾಸದ ಅಂಜಿಕೆಯೆ ಅವರನ್ನು ಲೋಕಜೀವನಕ್ಕೆ ಎಳೆತಂದು ಅದರಲ್ಲಿ ತೊಡಗಿಸಿತು. ಆದರೂ 'ತೊಂಡುತನ'ದ ಹಂಬಲ ಹೋಗಿರಲಿಲ್ಲ.

ಲೌಕಿಕ ಆಸೆ ಆಮಿಷ ಬೇಡ, ಯಾವ ಹೊಣೆಯೂ ಬೇಡ. ಅಡ್ಡಿ, ಅಡಚಣೆ ಬೇಡ. ಹೊತ್ತಿಗೆ ಏನು ಸಿಗುವುದೊ ತಿನ್ನುವುದು. ಜಾಗ ಎಲ್ಲಿ ಸಿಕ್ಕರೆ ಅಲ್ಲಿ ಕಾಲು ಚಾಚುವುದು, ಜೋಗಿಯ ಹಾಗೆ ಹಾಯಾಗಿ ತಿರುಗುವುದು, ಮರ ಗಿಡ ನದಿ ಆಕಾಶ ನೋಡಿಕೊಂಡು ಕಾಲ ಹಾಕುವುದು—ಇಂಥದೊಂದು ಹಂಬಲ.

ತನಗಳುವರಾರುಮಿಲ್ಲದೆ
ಮನುಜಂ ತಾನಾರ್ಗುಮಳುವುದಿರದಿರೆ ಧನ್ಯಂ ।
ಅನುಸರಿಸದೆ ತಾನಾರನು –
ಮನುಸರಿಪರ್ ತನಗುಮಿಲ್ಲದಿರೆ ಕಡುಧನ್ಯಂ ।।

ಎಂಬ ಹಂಬಲ.

ಆದರೆ ಈ ಹಂಬಲ ಕೈಗೂಡಲಿಲ್ಲ. ಡಿವಿಜಿ ನಿವೃತ್ತರಾಗಲಿಲ್ಲ. ಕೊನೆಯವರೆಗೂ ಜೀವನದಲ್ಲಿ ತೊಡಗಿಯೆ ಇದ್ದರು. ಅಂತರ್ಯದಲ್ಲಿ ಮಾತ್ರ ಈ ನಿರಾಲಂಬತೆ ನಿರಾಸಕ್ತಿ ಇತ್ತೇನೊ.

'ಜಗದ ಪೊಗಳಿಕೆಗೆ ಬಾಯ್‌ಬಿಡದೆ ಸುಫಲ ಸುಮಭರಿತ ಪಾದಪದಂತೆ ನೈಜಮಾದೊಳ್ಪಿನಿಂ ಬಾಳ್ವವೊಲು' ಇದು ಡಿವಿಜಿಯವರ ಕವಿತೆ ಮಾತ್ರವಲ್ಲ, ಜೀವನದ ರೀತಿಯೇ. ಹೆಸರಿನ ಹಂಬಲ ಅವರಿಗೆ ದೂರ. 1944ರಲ್ಲಿ ಹಿರಿಯ ವಿದ್ವಾಂಸ ದ.ಕೃ. ಭರದ್ವಾಜರು 'ಕನ್ನಡ ನುಡಿ' ಪತ್ರಿಕೆಯಲ್ಲಿ ಒಂದು ಲೇಖನ ಬರೆದರು. ಡಿವಿಜಿಯವರ ನಾಡು–ನುಡಿ ಸೇವೆಯ ಬಗ್ಗೆ ಆದರದ ಪ್ರಶಂಸೆಯ ಲೇಖನ. ಅದಕ್ಕೆ ಡಿವಿಜಿ ವ್ಯಕ್ತಪಡಿಸಿದ ಪ್ರತಿಕ್ರಿಯೆ ವಿಶಿಷ್ಟವಾದದ್ದು. ಮರು ಸಂಚಿಕೆಗೇ ಅವರು ಪತ್ರವೊಂದನ್ನು ಬರೆದು, "ಬದುಕಿರುವ ವ್ಯಕ್ತಿಗಳ ಅತಿಪ್ರಶಂಸೆ ಅವರ ಸಮೀಪ ಮಿತ್ರರಿಂದ ಆಗುವುದು ಅನಾವಶ್ಯಕ ಮಾತ್ರವೇ ಅಲ್ಲ; ಹಾನಿಕರ" ಎಂದರು. "ವ್ಯಕ್ತಿಪ್ರಶಂಸೆಯಿಂದ ಕೂಡಿದ ಮಟ್ಟಿಗೂ ದೂರವಿರಬೇಕೆಂಬುದೇ ನನ್ನ ತಾತ್ಪರ್ಯ" ಎಂದರು. ಇಂಥ ಪ್ರಶಂಸೆಗಳಿಂದ ಕನ್ನಡದ ಪುನರುಜ್ಜೀವನಕ್ಕೆ

ಸಹಾಯವೇನು ಎಂದು ಆಕ್ಷೇಪಿಸಿದರು. ಇದು ಡಿವಿಜಿಯವರ ದಾರಿ. "ಹೊರಗೆ ಲೋಕಾಸಕ್ತಿ, ಒಳಗದರ ವಿರಕ್ತಿ"

ಇಳಿಯುವೆನು ಮುಳುಗುವೆನು ವಿಶ್ವಾತ್ಮ ಸಾಗರದಿ ।
ಮುಳುಮುಳುಗಿ ಕಳೆಯುವೆನು ಬೇರೆತನದರಿವ ।।
ಇಳೆಬಾನ್ಗಳಾಟದಲಿ ಕುಣಿಯುವೆನು ಮೈಮರೆತು ।
ಗಳಿಸೀಮನಃಸ್ಥಿತಿಯ—ಮಂಕುತಿಮ್ಮ.

ಡಿವಿಜಿಯ ಜೀವಿತ ಈ ಮನಃಸ್ಥಿತಿಯನ್ನು ಗಳಿಸುವ ಪ್ರಯತ್ನ.

ಶ್ರುತಿಮತಿಗಳೆರಡುಮಂ ಸಮನ್ವಯಗೊಳಿಸಿ ।
ರತಿವಿರತಿಗಳುಭಯಸಮನ್ವಯವರಿತು ।।
ಸ್ವತೆಪರತೆಗಳನೆರಡುಮಂ ಸಮನ್ವಯಗೊಳಿಸಿ ।
ಮಿತಗತಿಯೆ ಹಿತಯೋಗ—ಮರುಳ ಮುನಿಯ ।।

ಡಿವಿಜಿಯವರ ಬದುಕು "ಮಿತಗತಿಯ ಹಿತಯೋಗ".

# 16. ಮೆಲುಕಿಗೆ ಮೇವು

**ಡಿವಿಜಿಯವರ ಕೆಲವು ಸೂಕ್ತಿಗಳು :–**

— ಕವಿ ವಿಜ್ಞಾನಿಗಳು ಪರಸ್ಪರ ವಿರೋಧಿಗಳಲ್ಲ; ಸಯಾಮಿನ ಅವಳಿಜವಳಿಗಳಂತೆ– ಮೈಸೂರಿನ ಗಂಡಭೇರುಂಡದಂತೆ.

— ಸತ್ಕಾವ್ಯ, ಅಧ್ಯಾತ್ಮ ಜೋಡಿ ನಾಗರದ ಹಾಗೆ. ಒಂದಕ್ಕೊಂದು ಜಡೆಯಂತೆ ಹೆಣೆದುಕೊಂಡು ತಲೆಯ ಭಾಗದಲ್ಲಿ ಒಂದನ್ನೊಂದು ಪ್ರೀತಿಯಿಂದ ದಿಟ್ಟಿಸುವಂತೆ ಇರುತ್ತವೆ.

— ಜೀವನದ ಕೊಳೆ–ಕಲ್ಮಶಗಳನ್ನು ತೊಳೆಯಬಲ್ಲ ತೀರ್ಥವೆಂದರೆ ಕಾವ್ಯತೀರ್ಥ.

— ಸಾಹಿತ್ಯವೆಂದರೆ ಎದೆಯನ್ನು ಅಲುಗಿಸುವಂಥ ಮಾತು.

— ಮನುಷ್ಯ ಜೀವನದ ಒಂದು ರೂಪ ಕಾವ್ಯ, ಇನ್ನೊಂದು ರೂಪ ರಾಜ್ಯ.

— ಜೀವನೋತ್ಕರ್ಷವನ್ನು ಕಾಲ್ಪನಿಕ ಪ್ರಪಂಚದಲ್ಲಿ ತೋರುವವನು ಕವಿ. ವಾಸ್ತವಿಕ ಪ್ರಪಂಚದಲ್ಲಿ ತೋರಬಲ್ಲವನು ರಾಜ್ಯ ಕರ್ಮಿ.

— ಕಾವ್ಯ ಸಂಸ್ಕಾರವಿಲ್ಲದವನು ಮಾಡುವ ರಾಜ್ಯಶಾಸನವು ಕುರುಡನು ಹಿಡಿದ ತುಪಾಕಿ. ಸಾಹಿತ್ಯವಿಲ್ಲದ ಸಾರ್ವಜನಿಕನ ಸೇವೆ ಕತ್ತಲು ಕೋಣೆಯಲ್ಲಿ ಮೂಗನು ಬಡಿಸಿದ ಭೋಜನ.

— ಅಸಾಧ್ಯವಾದ ವೈರಾಗ್ಯದ ಸೋಗಿಗಿಂತ ಸಾಧ್ಯವಾದ ಭೋಗದ ಸಾಧನೆ ಮೇಲೆಂದು ನಾವೆಲ್ಲ ಸ್ಪಷ್ಟವಾಗಿ ಅಂಗೀಕರಿಸಬೇಕು.

— ಪೌರ್ವಾತ್ಯ ಪಾಶ್ಚಿಮಾತ್ಯ ಸಂಸ್ಕೃತಿಗಳೆರಡೂ ವಿಶ್ವಮಾನವ ಜೀವದ ಎರಡು ಕಣ್ನೋಟಗಳಂತೆ ತೋರುತ್ತವೆ.

— 'ಕಲೆಯಬೇಕು,ಕಲೆತು ಬಾಳಬೇಕು'– ಇದೇ ಈಗಿನ ಜನಾಂಗಗಳಿಗೆ ಧರ್ಮವಾಗಿದೆ.

— ಸಂಸ್ಕೃತವು ಮಳೆಯ ಮೋಡ ; ಕನ್ನಡವು ಅದನ್ನು ಹನಿಯಾಗಿಸಿ ನೆಲಕ್ಕೆ ಬರಮಾಡಿಕೊಳ್ಳುವ ತಂಗಾಳಿ.

— ವಾಗ್ದೇವಿ ವೀಣೆ ನುಡಿಸಿ, ಕಾಳಿಯಿಂದ ಕರವಾಳವನ್ನಾಡಿಸಿಯಾಳು.

— ದೊಡ್ಡ ಸಾಹಿತ್ಯವೆಂಬುದು ದೊಡ್ಡ ತಪಸ್ಸಿನ ಫಲ. ಅದರ ಜೀವಾಳ ಸತ್ಯದರ್ಶನ.
— ಉತ್ತಮ ಜೀವನದಿಂದ ಉತ್ತಮ ಸಾಹಿತ್ಯ.
— ಹೊಟ್ಟೆಗೆ ಊಟ ಹೇಗೊ ಬುದ್ಧಿಗೆ ವಿದ್ಯೆ ಹಾಗೆ.
— ಕಾವ್ಯವು ಮನುಷ್ಯಕಾರ್ಯ ಆದರೂ ಅದು ರಹಸ್ಯ. ಏಕೆಂದರೆ ಮನುಷ್ಯನೇ ಒಂದು ರಹಸ್ಯ
— ಮಿತತೆಯೇ ಬಲ ; ಬಾಹುಳ್ಯವೇ ದೌರ್ಬಲ್ಯ.
— ಬುದ್ಧಿ ಬ್ರಹ್ಮಗಿರಿ ; ಕಾವ್ಯ ಕಾವೇರಿ.
— ಮಾನವೀಯತೆಯೆ ಸಾಹಿತ್ಯ.
— ಯಾರಲ್ಲಿ ಹೃದಯ ಸತ್ತುಹೋಗಿದೆಯೋ ಅವನಲ್ಲಿ ಬೇರೆ ಏನು ಬದುಕಿದ್ದರೆ ಏನು ?
— ಜಗನ್ಮಿಥ್ಯಾ ಸಿದ್ಧಾಂತವು ಬ್ರಹ್ಮದೃಷ್ಟಿಯಿಂದ ಒಪ್ಪಿಗೆ ಪಡೆಯಬಹುದೇ ಹೊರತು ಜೀವನದೃಷ್ಟಿಯಿಂದಲ್ಲ.
— ಉಮರನ ಸಂತೃಪ್ತಿ, ಪುರಂದರನ ವಿರಕ್ತಿ, ಪ್ರೊಮಿತಿಯಸ್ಸನ ಪೌರುಷಪ್ರಯುಕ್ತಿ – ಈ ಮೂರು ಗುಣಗಳನ್ನು ಸೇರಿಸಿರುವ ತತ್ತ್ವಪ್ರಕ್ರಿಯೆಯು ನಮ್ಮ ಜೀವನವನ್ನು ಸಹ್ಯವನ್ನಾಗಿಯೂ ಸಾರ್ಥಕವನ್ನಾಗಿಯೂ ಮಾಡಬಲ್ಲದು.
— ಪ್ರಕೃತಿಯು ಲೀಲಾವಿನೋದಿನಿ. ಆಕೆಯ ಮಾತು ಒಗಟು; ಆಕೆಯ ನಡತೆ ನಾಟಕ.
— ಜೀವನೋಲ್ಲಾಸ, ಪ್ರಯತ್ನೋತ್ಸಾಹ, ಸೌಂದರ್ಯ, ಸಂತೋಷ – ಇವು ಮನುಷ್ಯನ ನಿರಂತರ ಧರ್ಮದ ಮೂಲಾಂಶಗಳು.
— ರಾಜ್ಯಶಕ್ತಿಯು ಒಂದು ಕತ್ತಿ. ತಿಳಿವಳಿಕೆಯುಳ್ಳವರ ಕೈಯಲ್ಲಿ ಅದು ಉಪಕಾರಿ; ಇಲ್ಲದವರ ಕೈಯಲ್ಲಿ ಅಪಾಯಕಾರಿ.
— ಸರಸ್ವತೀ ಪ್ರಸಾದವಿಲ್ಲದೆ ಸ್ವರಾಜ್ಯ ಸಂಸ್ಥಿತಿಯಿರದು.
— ಮಾನವ ಸ್ವಭಾವದ ವೃತ್ತಿ ಪ್ರವೃತ್ತಿಗಳ ಖಾನೇಷುಮಾರಿ ಯಾರಿಗೆ ಸಾಧ್ಯ?
— ಸರಸ್ವತಿಯು ತಪಸ್ಸಿಲ್ಲದ ನೈವೇದ್ಯಕ್ಕೆ ಒಲಿಯುವಷ್ಟು ಸರಳೆಯಲ್ಲ.
— ಹುಳಿಯ ತೊಟ್ಟೊಂದು ನಮ್ಮ ಹೃದಯರಸದಲ್ಲಿ ಬಿದ್ದಲ್ಲದೆ ಅಲ್ಲಿ ನವನೀತವು ಉದಿಸಲಾರದು.
— ಮನುಷ್ಯ ಸ್ವಭಾವ ಹಾಲು. ಜಗತ್ತು ಹುಳಿಮಜ್ಜಿಗೆ.

— ಸಂಸಾರ ಸಾಗರವನ್ನು ದಾಟುವುದು ಹೇಗೆ? ನೀರನ್ನು ಸೋಕದೆಯೆ ಈಜಲಾಗುತ್ತದೆಯೆ?
— ಬ್ರಹ್ಮಪ್ರಾಪ್ತಿಗೆ ಜಗತ್ತು ಸಾಧನ.
— ಶೃಂಗಾರದ ಮೃದೂಕರಣ ಶಕ್ತಿ ಒಂದು ಮನಸ್ಸಂಸ್ಕಾರಕಾರಿಯಾದ ದ್ರವ್ಯ.
— ಮಹಾಕಾವ್ಯದಲ್ಲಿ ಸತ್ಯವೂ ಸೌಂದರ್ಯವೂ ದಂಪತಿಗಳಾಗಿರುತ್ತಾರೆ.
— ಸಂತೋಷವು ಭಗವದ್ಭಕ್ತಿಯ ಒಂದು ಲಕ್ಷಣ.
— ಧರ್ಮದ ಒಂದು ಮುಖ್ಯರೂಪ ದೇಶಸೇವೆ.
— ಸಭ್ಯತೆ ಕಲೆ ; ಸಹವಾಸಾರ್ಹತೆ ಒಂದು ಕಲೆ ; ಮೈತ್ರೀ ಸಂಪಾದನೆ ಒಂದು ಕಲೆ; ನಲ್ಮೆಯ ನೆರೆಹೊರೆತನ ಕಲೆ ; ರಾಷ್ಟ್ರಕಜೀವನ ಕಲೆ—ಅದು ಜೀವಸಂಸ್ಕಾರ ಕಲೆ, ಜೀವನ ಸಂವರ್ಧನ ಕಲೆ.
— ಪೌರುಷವು ಶ್ರೇಷ್ಠವಾದ ಗುಣವೇ. ಆದರೆ ಪೌರುಷವೆಂಬುದು ದ್ವಿಪ್ರಕಾರವಾದದ್ದು. ಒಂದು ಉದ್ಯಮ ; ಇನ್ನೊಂದು ಸಂಯಮ.
— ಸಂಕಟದರ್ಶನದಿಂದಲೇ ಮಂಗಳಸ್ಮರಣೆ.
— ಪ್ರಜಾರಾಜ್ಯಕ್ಕಿರುವ ಮೊದಲನೆಯ ಶತ್ರು ಪ್ರಜೆಯ ಅಶಿಕ್ಷೆ.
— ಉತ್ಸವ ಗದ್ದಲ ಒಂದು ದಿನದ ಮೇಲ್ನೋಟಕ್ಕೆ ಚೆನ್ನ; ವಿವೇಕ ವಿಚಕ್ಷಣೆ ಯಾವಾಗಲೂ ಚೆನ್ನ.
— ಕಕ್ಷಿಯಿಲ್ಲದ ರಾಜಕೀಯವು ಮಣ್ಣುಂಡೆ; ಕಕ್ಷಿ ಪ್ರಬಲಿಸಿರುವ ರಾಜಕೀಯವು ಸೊಟ್ಟ ಕಟ್ಟಿಗೆ.
— ಜೀವಪುಟಕ್ಕೆ ಬೇಕಾದದ್ದು ಒಂದು ಕಡೆ ಕಾವ್ಯಲೋಕದ ರಸಾನುಭವಾಗ್ನಿಯಾದರೆ ಇನ್ನೊಂದು ಕಡೆ ಅದು ವಾಸ್ತವಲೋಕದ ಸಂಸಾರಾನುಭವಾಗ್ನಿ.
— ಸತ್ಯವನ್ನು ಮರೆಯದ ಸೌಂದರ್ಯವನ್ನು ಭಜಿಸುವಾತನು ಸುಕೃತಜೀವಿ.
— ಕಾಮದೇವನು ವೇಗವರ್ಧಕ–ಆಕ್ಸೆಲರೇಟರ್. ಯಮರಾಜನು ಸ್ತಂಭಕ–ಬ್ರೇಕ್. ಕಾರಿನ ಅನಪಾಯ ಪ್ರಗತಿಗೆ ಎರಡೂ ಬೇಕು.
— ಜೀವನವಿಲ್ಲದಿದ್ದಲ್ಲಿ ಮೃತ್ಯುವಿರಬೇಕಾದದ್ದೇ ಇಲ್ಲ.
— ಮೃತ್ಯುವಿಲ್ಲದಿದ್ದರೆ ಜೀವನಕ್ಕೆ ನವೀಕರಣವಿರದು.
— ಯಮನಿಗೆ ಊಟವಿಡುವವನು ಕಾಮ. ಕಾಮನಿಗೆ ಲೋಕದಲ್ಲಿ ಎಡೆಬಡಿಸಿಕೊಡುವವನು ಯಮ.

— ಜೀವನದ ಯಾವ ಭಾಗದಿಂದಲೂ ಧರ್ಮವನ್ನು ವಿನಾಯಿಸತಕ್ಕದ್ದಲ್ಲ.
— ಅಹಂತೆ ಕರಗುವುದೇ ಶಾಂತಿ. ಅಹಂಕಾರದಿಂದ ಬಿಡುಗಡೆಯೇ ಮೋಕ್ಷ.
— ಪ್ರಣಯವು ಪ್ರಾರಂಭದಲ್ಲಿ ದ್ವೈತ ; ಸರಸಸಲ್ಲಾಪಗಳಲ್ಲಿ ವಿಶಿಷ್ಟಾದ್ವೈತ ; ಪ್ರಣಯ ಶಿಖರದಲ್ಲಿ ಅದ್ವೈತ.
— ಗೀತೆಯ ಮಹೋಪದೇಶವೆಂದರೆ ಜೀವನದಲ್ಲಿ ಗೌರವ.... ಸಮ್ಯಗ್ಜೀವನವೇ ಭಗವದಾರಾಧನೆ.

# ಬದುಕಿನ ಮೆಟ್ಟಿಲುಗಳು

| | | |
|---|---|---|
| 17–3–1887 | | ಜನನ |
| 1901 | – | ಲೋಯರ್ ಸೆಕೆಂಡರಿ ಪರೀಕ್ಷೆ |
| 1902–4 | – | ಮೈಸೂರಿನಲ್ಲಿ ವ್ಯಾಸಂಗ. ತಾತಯ್ಯನವರ ಪರಿಚಯ |
| 1905 | – | ಕೆ.ಜಿ.ಎಫ್.ನಲ್ಲಿ ಕಬ್ಬಿಣದ ಅಂಗಡಿ ಕೆಲಸ |
| 1906 | – | ಬೆಂಗಳೂರಿಗೆ ಪ್ರವೇಶ. ಪತ್ರಿಕೆಗಳಿಗೆ ಲೇಖನ ವ್ಯವಸಾಯ |
| 1907 | – | 'ಭಾರತಿ' ಪತ್ರಿಕೆ |
| 1908 | – | ಮದರಾಸಿಗೆ. ವಿ.ಎಸ್. ಶ್ರೀನಿವಾಸ ಶಾಸ್ತ್ರಿ ಭೇಟಿ<br>ಮೈಸೂರು ಪತ್ರಿಕಾಶಾಸನಕ್ಕೆ ವಿರೋಧ |
| 1909 | – | ಬೆಂಗಳೂರಿಗೆ ವಾಪಸು. 'ಸುಮತಿ' ಪತ್ರಿಕೆ |
| 1910 | – | ಆತ್ಮಗುರು ನರಸಿಂಹಮೂರ್ತಿಗಳ ಭೇಟಿ,<br>ವಿಶ್ವೇಶ್ವರಯ್ಯನವರ ಭೇಟಿ |
| 1911 | – | 'ದಿವಾನ್ ರಂಗಾಚಾರ್ಲು' ಪುಸ್ತಕ.<br>'ಮೈಸೂರು ಟೈಮ್ಸ್' ಸಂಪಾದಕ. |
| 1912 | – | ಬೆಂಗಳೂರು ನಗರಸಭೆ ಸದಸ್ಯ |
| 1913 | – | 'ಕರ್ನಾಟಕ' ಇಂಗ್ಲಿಷ್ ಪತ್ರಿಕೆ (1926ರ ವರೆಗೆ) |
| 1914–15 | – | ಪಠ್ಯಪುಸ್ತಕ ಸಮಿತಿ ಸದಸ್ಯ |
| 1915 | – | ಗೋಖಲೆ ನಿಧನ. ಬೆಂಗಳೂರಿಗೆ ಗಾಂಧೀಜಿ ಭೇಟಿ.<br>ಮೈಸೂರು ಸಮಾಜ ಸೇವಾ ಲೀಗ್ ಕೆಲಸ. |
| 1918 | – | ಮುಂಬೈ ಕಾಂಗ್ರೆಸ್. ಸಂಸ್ಥಾನ ಪ್ರಜೆಗಳ ಬಗ್ಗೆ<br>ನಿರ್ಣಯ ಮಂಡನೆ. ಇನ್‌ಫ್ಲೂಯೆಂಜಾ ಕಾಲದಲ್ಲಿ ಸೇವೆ. |

| | | |
|---|---|---|
| 1921 | – | 'ಇಂಡಿಯನ್ ರೆವ್ಯೂ ಆಫ್ ರೆವ್ಯೂಸ್' ಪತ್ರಿಕೆ (22ರವರೆಗೆ) |
| 1922 | – | 'ವಸಂತ ಕುಸುಮಾಂಜಲಿ' ಪ್ರಕಟಣೆ |
| 1923 | – | 'ಕರ್ನಾಟಕ ಜನಜೀವನ–ಅರ್ಥಸಾಧಕ ಪತ್ರಿಕೆ' ಸಂಪಾದಕ |
| 1925 | – | 'ರೆವ್ಯೂ' ಪತ್ರಿಕೆಯ ಪುನರಾರಂಭ (26ರ ವರೆಗೆ) |
| 1926 | – | ಮೈಸೂರು ನ್ಯಾಯವಿಧಾಯಕ ಸಭೆ ಸದಸ್ಯ. 1940ರ ವರೆಗೆ |
| 1927 | – | ಮೈಸೂರು ವಿಶ್ವವಿದ್ಯಾನಿಲಯ ಸೆನೆಟ್ ಸದಸ್ಯ 1943ರ ವರೆಗೆ |
| 1928 | – | ಬಾಗಲಕೋಟೆಯ ಪ್ರಥಮ ಕರ್ನಾಟಕ ಪತ್ರಕರ್ತರ ಸಮ್ಮೇಳನಾಧ್ಯಕ್ಷ |
| 1929 | – | ತಿರುವನಂತಪುರದ ದಕ್ಷಿಣ ಭಾರತದ ಸಂಸ್ಥಾನ ಪ್ರಜಾಪರಿಷತ್ತಿನ ಸಮ್ಮೇಳನ, ಸರ್.ಎಂ. ವಿಶ್ವೇಶ್ವರಯ್ಯನವರ ಜೊತೆಯಲ್ಲಿ |
| 1932 | – | ಮಡಕೇರಿ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ, ಮೈಸೂರು ಪತ್ರಕರ್ತರ ಸಂಘ ಸ್ಥಾಪನೆ, 1934ರವರೆಗೆ ಅಧ್ಯಕ್ಷ. ಶೀಘ್ರ ಲಿಪಿಕಾರ ಸಂಘ ಸ್ಥಾಪನೆ |
| 1933 | – | ಇಂಗ್ಲಿಷ್–ಕನ್ನಡ ನಿಘಂಟು ಸಮಿತಿ ಸದಸ್ಯ, ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ (1937ರ ವರೆಗೆ) ಮೈಸೂರು ವಿಶ್ವವಿದ್ಯಾನಿಲಯದ ಕೌನ್ಸಿಲ್ ಸದಸ್ಯ (1939ರ ವರೆಗೆ) |
| 1939 | – | ಮೈಸೂರು ರಾಜ್ಯಾಂಗ ಸುಧಾರಣಾ ಸಮಿತಿ ಸದಸ್ಯ |
| 1940 | – | ಮೈಸೂರು ರಾಜ್ಯ ಪತ್ರಕರ್ತರ ಮೊದಲನೆಯ ಸಮ್ಮೇಳನಾಧ್ಯಕ್ಷ, ಆತ್ಮರಕ್ಷಣ ಸಂಸ್ಥೆಯ ಆರಂಭ. |
| 1943 | – | 'ಮಂಕುತಿಮ್ಮನ ಕಗ್ಗ' ಪ್ರಕಟಣೆ |
| 1945 | – | ಗೋಖಲೆ ಸಾರ್ವಜನಿಕ ಸಂಸ್ಥೆಯ ಆರಂಭ. ಕಾರ್ಯದರ್ಶಿ (ಕೊನೆಯ ವರೆಗೂ) |
| 1947 | – | ಗೋಖಲೆ ಸಂಸ್ಥೆ ಅಧ್ಯಯನ ಗೋಷ್ಠಿ ಆರಂಭ, ಅಧ್ಯಯನ ತರಗತಿಗಳು |
| 1949 | – | 'ಪಬ್ಲಿಕ್ ಅಫೇರ್ಸ್' (ಸಾರ್ವಜನಿಕ) ಪತ್ರಿಕೆ ಆರಂಭ. |
| 1956 | – | ಗೋಖಲೆ ಸಂಸ್ಥೆಯ ಭವನ ಪ್ರವೇಶ |

1961 – ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿಲಿಟ್ ಪದವಿ

1965 – ಗೋಖಲೆ ಸಂಸ್ಥೆಯ ಇಪ್ಪತ್ತನೆಯ ವಾರ್ಷಿಕ ಉತ್ಸವ

1966 – "ಜೀವನಧರ್ಮಯೋಗ (ಗೀತಾಭಾಷ್ಯ)'' ಪ್ರಕಟಣೆ

1967 – ಗೀತಾಭಾಷ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

1970 – ಸಾರ್ವಜನಿಕ ಸನ್ಮಾನ, ಲಕ್ಷ ರೂ. ನಿಧಿ ಅರ್ಪಣೆ

1974 – 'ಪದ್ಮಭೂಷಣ' ಪ್ರಶಸ್ತಿ. ರಾಜ್ಯ ಸರ್ಕಾರದ ಗೌರವವೇತನ ನಿರಾಕರಣೆ.

1975 – ನಿಧನ

1984 – 'ಮರಳು ಮುನಿಯನ ಕಗ್ಗ' ಪ್ರಕಟಣೆ

1987–88 – ಜನ್ಮ ಶತಮಾನೋತ್ಸವ

17–3–88 – ವಿಶೇಷ ಗೌರವ ಅಂಚೆ ಚೀಟಿ ಬಿಡುಗಡೆ

## ಅನುಬಂಧ — II

# ಡಿವಿಜಿ ವಾಙ್ಮಯ

**(ಅ) ಕನ್ನಡ**

**1. ಜೀವನ ಚರಿತ್ರ**

ದಿವಾನ್ ರಂಗಾಚಾರ್ಲು
ಗೋಪಾಲ ಕೃಷ್ಣ ಗೋಖಲೆ
ವಿದ್ಯಾರಣ್ಯ ವೃತ್ತಾಂತ
ವಿದ್ಯಾರಣ್ಯರ ಸಮಕಾಲೀನರು
ದಾದಾಭಾಯಿ ನವರೋಜಿ
ರಾಜಾರಾಮ್ ಮೋಹನರಾಯ್
ಜಾರ್ಜ್ ಚಕ್ರವರ್ತಿಗಳ ಕಿರೀಟಧಾರಣೆ.

**2. ಕವಿತೆ**

ವಸಂತ ಕುಸುಮಾಂಜಲಿ
ನಿವೇದನ
ವಿದ್ಯಾರಣ್ಯಸ್ತುತಿ
ಉಮರನ ಒಸಗೆ
ಮಂಕುತಿಮ್ಮನ ಕಗ್ಗ
ಕುಮಾರವ್ಯಾಸದರ್ಶನ
ಶ್ರೀರಾಮ ಪರೀಕ್ಷಣಂ
ಸ್ವತಂತ್ರಭಾರತ ಅಭಿನಂದನಸ್ತವ
(ಭಾರತ ಭೂ ವಂದನಂ ಎಂದು ಪುನರ್ಮುದ್ರಿತ)
ಮಹಾತ್ಮಗಾಂಧೀ ಜ್ಞಾಪಕ ಪದ್ಯ
ಅನ್ತಃಪುರ ಗೀತೆ
ಮಹಾಚುನಾವಣೆ
ವಾಲ್ಮೀಕಿ ವ್ಯಾಸವಂದನಂ

ಗೀತ ಶಾಕುನ್ತಲಮ್
ಶೃಂಗಾರ ಮಂಗಳಮ್
ಶ್ರೀಕೃಷ್ಣ ಪರೀಕ್ಷಣಮ್
ಕೇತಕೀವನ
ಮರುಳು ಮುನಿಯನ ಕಗ್ಗ

**3. ನಾಟಕ**

ಕನಕಾಲುಕಾ
- ತಿಲೋತ್ತಮೆ
ಮ್ಯಾಕ್‌ಬೆತ್
ವಿದ್ಯಾರಣ್ಯವಿಜಯ
ಜಾಕ್‌ಕೇಡ್
ಪ್ರಹಸನಸತ್ರಯೀ
ಪರಶುರಾಮ

**4. ಧರ್ಮ–ನೀತಿ–ಚಿಂತನ**

ಬಾಳಿಗೊಂದು ನಂಬಿಕೆ
ಪುರುಷಸೂಕ್ತ
ಈಶೋಪನಿಷತ್ತು
ಶ್ರೀಮದ್ಭಗವದ್ಗೀತಾ ತಾತ್ಪರ್ಯಸಾರ (ಜೀವನಧರ್ಮಯೋಗ)
ದೇವರು
ಋತ–ಸತ್ಯ–ಧರ್ಮ
ಸಂಸ್ಕೃತಿ
ಶ್ರೀಮದಾಂಜನೇಯಸ್ವಾಮಿ
ಅದ್ವೈತ ; ತತ್ತ್ವ ಮತ್ತು ಅನುಷ್ಠಾನ
— ಕನ್ನಡ ಅನುವಾದ : ಡಿ.ಆರ್. ವೆಂಕಟರಮಣ್

**5. ಮಕ್ಕಳ ಸಾಹಿತ್ಯ**

ಬೆಕ್ಕೋಜಿ
ಇಂದ್ರವಜ್ರ

**6. ನಿಬಂಧ-ಲೇಖನ**

ಜೀವನ ಸೌಂದರ್ಯ ಮತ್ತು ಸಾಹಿತ್ಯ
ಸಾಹಿತ್ಯ ಶಕ್ತಿ
ನಮ್ಮ ಸಾಹಿತ್ಯದ ಬೆಳವಣಿಗೆ
ಕೆಲವು ಪಾರಿಭಾಷಿಕ ಪದಗಳು
ಕರ್ನಾಟಕದ ಪ್ರಗತಿಪಥ
ಕಾವ್ಯ ಸ್ವಾರಸ್ಯ

**7. ರಾಜಕೀಯ**

ಮೈಸೂರಿನ ಕೈಗನ್ನಡಿ
ವೃತ್ತಪತ್ರಿಕೆ
ಸ್ವರಾಜ್ಯ ಎಂದರೇನು?
ರಾಜ್ಯಶಾಸ್ತ್ರ
ರಾಜ್ಯಾಂಗ ತತ್ತ್ವಗಳು
ರಾಜಕೀಯ ಪ್ರಸಂಗಗಳು (I)
ರಾಜಕೀಯ ಪ್ರಸಂಗಗಳು (II)
ಇಂಡಿಯದ ಭಾಷಾಪ್ರಶ್ನೆ-ಇಂಗ್ಲಿಷಿನ ಸ್ಥಾನ
ಸಾರ್ವಜನಿಕದಲ್ಲಿ ಸಾತ್ವಿಕ
ರಾಜ್ಯಕುಟುಂಬ

**8. ನೆನಪಿನ ಚಿತ್ರಗಳು**

(ಜ್ಞಾಪಕ ಚಿತ್ರಶಾಲೆ 8 ಸಂಪುಟಗಳು)
ಸಾಹಿತಿ ಸಜ್ಜನ ಸಾರ್ವಜನಿಕರು
ಕಲೋಪಾಸಕರು
ಸಾಹಿತ್ಯೋಪಾಸಕರು
ಮೈಸೂರಿನ ದಿವಾನರುಗಳು
ವೈದಿಕ ಧರ್ಮ ಸಂಪ್ರದಾಯಸ್ಥರು
ಹಲವರು ಸಾರ್ವಜನಿಕರು
ಹೃದಯ ಸಂಪನ್ನರು

ಸ್ಮೃತಿ ಚಿತ್ರಗಳು
ಹಕ್ಕಿಯ ಪಯಣ (ಆಯ್ದ ಬರೆಹಗಳು,
ಸಂಪಾದನೆ–ಹಾ.ಮಾ. ನಾಯಕ)

**9. ಡಿವಿಜಿ ಅವರನ್ನು ಕುರಿತು**

ಪದ್ಮಭೂಷಣ ಡಾ|| ಡಿ.ವಿ. ಗುಂಡಪ್ಪ—ಡಿ.ವಿ. ಶೇಷಗಿರಿರಾವ್
ಕುಸುಮಾರ್ಪಣೆ—ಗೋಖಲೆ ಸಂಸ್ಥೆ
Public Affairs ವಿಶೇಷ ಸಂಚಿಕೆ—ಅಕ್ಟೋಬರ್–ನವೆಂಬರ್ 1975
ಡಾ|| ಡಿ.ವಿ. ಗುಂಡಪ್ಪ—ಎಸ್.ಆರ್. ರಾಮಸ್ವಾಮಿ (ಐ.ಬಿ.ಎಚ್.)
ಡಾ|| ಡಿ.ವಿ.ಜಿ.—ಭಾರತ ಭಾರತೀ ಪುಸ್ತಕಸಂಪದ
ವನಸುಮ—ಗೋಖಲೆ ಸಂಸ್ಥೆ
ಧೀಮಂತ (ಸಂಸ್ಮರಣ ಸಂಪುಟ)—ಗೋಖಲೆ ಸಂಸ್ಥೆ
(ಸಂ. – ಪ್ರೊ|| ಎಂ.ವಿ. ಸೀತಾರಾಮಯ್ಯ)
ಡಿವಿಜಿ—ಗುಂಡ್ಮಿ ಚಂದ್ರಶೇಖರ ಐತಾಳ
ಡಿವಿಜಿ (100)—'ತರಂಗ' ವಿಶೇಷ ಸಂಚಿಕೆ
ಡಿವಿಜಿ ಸಂಸ್ಮರಣೆ—ಐ.ಟಿ.ಐ. ಬರೆಹಗಾರರ ವೇದಿಕೆ
ಚಿಗುರು—ಡಿವಿಜಿ ಶತಮಾನೋತ್ಸವ ಸಮಿತಿ, ಕೋಲಾರ
ಅಶ್ವತ್ಥ—ಎಂ.ಜಿ.ಎಂ. ಕಾಲೇಜು, ಉಡುಪಿ
ಡಿವಿಜಿ—ಎ.ಜಿ.ಓ.ಆರ್.ಸಿ., ಬೆಂಗಳೂರು
ವಿರಕ್ತರಾಷ್ಟ್ರಕ ಡಿವಿಜಿ—ಡಿ.ಆರ್. ವೆಂಕಟರಮಣನ್
(ಸಮಗ್ರ ಜೀವನಚರಿತ್ರೆ)

**(ಆ) ಡಿವಿಜಿ ನಡೆಸಿದ ಪತ್ರಿಕೆಗಳು**

ಕರ್ನಾಟಕ (ಇಂಗ್ಲಿಷ್–ಕನ್ನಡ)
ಸುಮತಿ
ಭಾರತಿ
ಕರ್ನಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ
Indian Review of Reviews
Public Affairs (ಸಾರ್ವಜನಿಕ)

Mysore Times (ಸಹಾಯ ಸಂಪಾದಕ)
ಸೂರ್ಯೋದಯ ಪ್ರಕಾಶಿಕಾ (ಲೇಖಕರು)
Evening Mail (ಲೇಖಕರು)
ವೀರಕೇಸರಿ (ಲೇಖಕರು)
Karnataka And Indian Native States

(ಇ) ಇಂಗ್ಲಿಷ್ ಬರಹಗಳು

1. PERSONAL SKETCHES
Dewan Rangacharlu
Sir. K. Seshadri Iyer
H.H. Sri Satchidananda Nrisimha Bharati
Tolstoy
Sir. S. Subramanya Iyer
Sri Krishnarajendra Wodeyar

2. **Others**
Karnataka Year Book
Problems of Indian Native States
Memorandum to Montagu
Reform of Hind Mutts
Government of India and Indian States
Lectures on Morely's 'On Compromise'
Dominion Constitution For India.
The States And Their People In the Indian Constitution.
Constitutional Reforms for Mysore
The Press in Mysore
India's Political Dilemma
The Case of the People of Indian States with a note on the Treaties
India's Political Problems
To End the Deadlock
Towards a New world order
Simla and After
The cabinet delegation and after

All India Federal Union
The Constitent Assembly and the States
The Indian Independence Act
What the Republic Needs
Gokhale For Today—Liberalism Restated
The Language Tangle
All India Union
All India Federal Union
The Indian States and the Linguistic Problem
From Ideology to Commonsense
Mand and the Infinite
Samyukta and United India.
Vedanta and Nationalism
Ramblings of Thimma (Translation of ಮಂಕುತಿಮ್ಮನ ಕಗ್ಗ
- by D. Seshagiri Rao)
Song of Wayfarers - (Tr. V. Sitaramaiah)
Advaita : Faith & Practice

3. **ON D.V.G.**
D.V. Gundappa—V. Sitaramiah
Bhavan's Journal (Special Issue) - 1987
DVG or Spirit of Poetry - S. Narain

**(ಈ) ಹಿಂದಿ**
ಮಂಕುತಿಮ್ಮನ ಕಗ್ಗದ ಅನುವಾದ—ಡಾ।। ಸರೋಜಿನಿ ಮಹಿಷಿ